ವಿಷಯಾನುಕ್ರಮಣಿಕೆ

ಅಧ್ಯಾತ್ಮಗ್ರಂಥಾವಳಿ

# ಅನುಭವಗಮ್ಯ ವೇದಾಂತ

( ಶ್ರೀ॥ ಶ್ರೀ॥ ಗಳವರು ಬೆಂಗಳೂರಿನಲ್ಲಿ
ಚಾತುರ್ಮಾಸ್ಯಕಾಲದಲ್ಲಿ ಅನುಗ್ರಹಿಸಿದ ಅಧ್ಯಾತ್ಮೋಪದೇಶಗಳು )

ಬರೆದವರು :
**ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು**

ಕ್ರಮಾಂಕ ೧೫೪

ಪ್ರಕಾಶಕರು :
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ.
( ಹಾಸನ ಜಿಲ್ಲೆ, ದಕ್ಷಿಣ ರೈಲ್ವೆ )
1994

# ಮು ನ್ನು ಡಿ

ಬೆಂಗಳೂರು ವಿಶ್ವೇಶ್ವರಪುರದ ನ್ಯಾಷನಲ್ ಹೈಸ್ಕೂಲ್ ರಸ್ತೆಯಲ್ಲಿರುವ ಅಧ್ಯಾತ್ಮಮಂದಿರದಲ್ಲಿ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ಆಚರಿಸಿದ ಸೌಮ್ಯನಾಮಸಂವತ್ಸರದ (1969) ಚಾತುರ್ಮಾಸ್ಯಸಂಕಲ್ಪಕಾಲದಲ್ಲಿ ಅನುಗ್ರಹಿಸಿದ ಆಧ್ಯಾತ್ಮೋಪದೇಶಗಳಿವು.

ಈವರೆಗೆ ಪ್ರಕಟಿಸಿರುವ ಶ್ರೀಶ್ರೀಗಳವರ ಉಪದೇಶಗಳೊಳಗೆ ಇವಕ್ಕೆ ಒಂದು ಅಸಾಧಾರಣಸ್ಥಾನವಿದೆ. ಕೇವಲ ತರ್ಕಪ್ರಧಾನವಾದ ಉಪನ್ಯಾಸಗಳಿಂದ ತೃಪ್ತರಾಗದೆ ಅಧ್ಯಾತ್ಮವಿದ್ಯೆಯನ್ನು ಅನುಷ್ಠಾನದಿಂದ ಮನಗಾಣಬೇಕೆಂಬ ಕುತೂಹಲಿಗಳಿಗೆ ಈ ಉಪದೇಶಗಳು ಒಂದು ಅಲಭ್ಯಲಾಭವಾಗಿ ಕಂಡುಬರುವದರಲ್ಲಿ ಸಂಶಯವಿಲ್ಲ. ವಾಚಕರು ಈ ಉಪನ್ಯಾಸಗಳನ್ನು ಓದಿ ಕೃತಾರ್ಥರಾಗಬೇಕಾಗಿ ಪ್ರಾರ್ಥನೆ.

ಈ ಗ್ರಂಥದ ಪ್ರತಿಗಳೆಲ್ಲವೂ ಮಾರಾಟವಾಗಿಬಿಟ್ಟಿದ್ದರಿಂದ ಅಚ್ಚಿನ ತಪ್ಪುಗಳನ್ನು ತಿದ್ದಿ ಮತ್ತೊಮ್ಮೆ ಪುನರ್ಮುದ್ರಣಮಾಡಿಸಲಾಗಿದೆ. ಮೊದಲನೆಯ ಮುದ್ರಣದಲ್ಲಿ ದೇವನಾಗರೀಲಿಪಿಯಲ್ಲಿ ಕೊಟ್ಟಿದ್ದ ಶ್ರುತಿವಾಕ್ಯಗಳನ್ನು ಈಗ ಕನ್ನಡಲಿಪಿಯಲ್ಲಿಯೇ ಕೊಡಲಾಗಿದೆ. ಮತ್ತೆ ಯಾವ ಬದಲಾವಣೆಯನ್ನೂ ಮಾಡಿರುವದಿಲ್ಲ. ವಾಚಕರು ಎಂದಿನಂತೆ ಈ ಗ್ರಂಥವನ್ನೂ ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸಲಾಗಿದೆ.

ಇತಿ–ಸಜ್ಜನವಿಧೇಯ,

ಹೊಳೆನರಸೀಪುರ, ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ತಾ|| 15–6–1994 ಅಧ್ಯಾತ್ಮಗ್ರಂಥಾವಳಿಯ ಸಂಪಾದಕ.

# ಪೀಠಿಕೆ

ವೇದಾಂತವೆಂಬುದು–ಪಾಶ್ಚಾತ್ಯರಿಗೆ ಚಿರಪರಿಚಿತವಾಗಿರುವ ಕೇವಲ ತರ್ಕಬದ್ಧವಿಚಾರಗಳ ಕಟ್ಟಡಗಳಂತೆ– ಶುಷ್ಕತರ್ಕದಮೇಲೆ ನಿಂತಿರುವದಿಲ್ಲ. ನಮ್ಮ ದೇಶದಲ್ಲಿ ಧಾರ್ಮಿಕಪ್ರಮಾಣಗ್ರಂಥಗಳ ಆಧಾರದಮೇಲೆ ನಿಂತಿರುವ ವೈದಿಕಾ–ವೈದಿಕಮತಗಳಂತೆ ಶಬ್ದಪ್ರಮಾಣಗಳ ನಂಬಿಕೆಯನ್ನು ಆಶ್ರಯಿಸಿಕೊಂಡಿರುವದೂ ಅಲ್ಲ; ನ್ಯಾಯಸಾಂಖ್ಯಾದಿಗಳಂತೆ ಪ್ರಮಾಣ ಮತ್ತು ಪ್ರಮಾಣಾಶ್ರಿತ ತರ್ಕ–ಇವುಗಳನ್ನು ನಂಬಿರುವ ದರ್ಶನವೂ ಅಲ್ಲ; ಪಾತಂಜಲಯೋಗಾದಿಗಳಂತೆ ವೈಯಕ್ತಿಕಾನುಭವದಿಂದ ದೊರೆಯಬೇಕಾಗಿರುವ ಅವಸ್ಥಾವಿಶೇಷವನ್ನವಲಂಬಿಸಿರುವ ಸಿದ್ಧಾಂತವೂ ಅಲ್ಲ.

ಅದು 'ಉಪನಿಷತ್ತು'ಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ರಹಸ್ಯತತ್ತ್ವಜ್ಞಾಪಕಗಳಾದ ವೇದಭಾಗದಲ್ಲಿ ಪ್ರಾಚೀನಕಾಲದಿಂದಲೂ ಪ್ರಚಲಿತವಾಗಿದ್ದರೂ ಎಲ್ಲಾ ಪ್ರಮಾಣಪ್ರಮೇಯವ್ಯವಹಾರವನ್ನೂ ಮೀರಿರುವ ಸಾರ್ವತ್ರಿಕಾನುಭವದ ಆಸರೆಯಿಂದ ಹೊರಹೊಮ್ಮಿರುವ ಋಷಿಗಳ ಉ ಪ ದೇ ಶ ವಾ ಗಿ ದೆ. ಋಷಿಗಳು ಎಂದರೆ ಪರಮಾರ್ಥತತ್ತ್ವವನ್ನು ಕಂಡುಕೊಂಡ ಮಹನೀಯರು. ಆ ತತ್ತ್ವವು ವೇದ್ಯಪ್ರಪಂಚಕ್ಕೆಲ್ಲ ತಿರುಳಾಗಿರುವ ಬ್ರಹ್ಮಾತ್ಮತತ್ತ್ವವಾಗಿದ್ದು ಋಷಿವಾಕ್ಯವೆಂಬ ಕಾರಣದಿಂದ ನಂಬಬೇಕೆಂಬ ನಿರ್ಬಂಧವಿಲ್ಲದೆ, ಅಧಿಕಾರಸಂಪತ್ತಿರುವವರಿಗೆಲ್ಲರಿಗೂ ದೇಶಕಾಲಗಳ ಪರಿಚ್ಛೇದಕ್ಕೆ ಒಳಪಡದೆ ಹೊಳೆಯುವ ಅವರ ಸ್ವರೂಪವೇ ಆಗಿರುತ್ತದೆ. ಈ ಕಾರಣದಿಂದ ಈ ಸಿದ್ಧಾಂತವನ್ನು 'ಅನುಭವಗಮ್ಯವೇದಾಂತ'–ಅನುಭವದಿಂದಮಾತ್ರವೇ ತಿಳಿಯಬರುವ ಅರಿವಿನ ಸಿದ್ಧಾಂತ –ಎಂಬ ಅನ್ವರ್ಥನಾಮದಿಂದ ಕರೆಯಬಹುದಾಗಿದೆ. ಉಪನಿಷತ್ತುಗಳು ಈ ಸಿದ್ಧಾಂತವನ್ನು ಜ್ಞಾಪಿಸುವದರಿಂದ "ವೇದಾಂತ"ಗಳು ಎನಿಸಿವೆ. ಯಾವದರಿಂದ ಎಲ್ಲವನ್ನೂ ಅರಿಯಬೇಕಾಗಿದೆಯೋ ಅದೇ ವೇದವು. ಎಲ್ಲರಿಗೂ ತಿರುಳಾಗಿದ್ದು ಎಲ್ಲೆಲ್ಲಿಯೂ ವ್ಯಾಪಿಸಿರುವದರಿಂದ ಅದೇ ಪರಮಾತ್ಮನು. ಅದನ್ನು ಉಪನಿಷತ್ತುಗಳು, ಭ ಗ ವ ದ್ಗೀ ತೆ, ಮತ್ತು ವೇದಾಂತಸೂತ್ರಗಳು– ಎಂಬ ಪ್ರಸ್ಥಾನತ್ರಯದಲ್ಲಿ ಏಕವಾಕ್ಯತೆಯಿಂದ ತಿಳಿಸಿಕೊಟ್ಟಿದೆಯೆಂದು ಶ್ರೀಶಂಕರಭಗವತ್ಪಾದರವರು ತಮ್ಮ ಭಾಷ್ಯಗಳಲ್ಲಿ ನಿರ್ಣಯಿಸಿರುತ್ತಾರೆ.

ಈ ವೇದಾಂತದ ರೂಪರೇಖೆಯನ್ನು ಸೌಮ್ಯಸಂವತ್ಸರದ ಚಾತುರ್ಮಾಸ್ಯಸಂಕಲ್ಪನಿಮಿತ್ತ ಬೆಂಗಳೂರಿನಲ್ಲಿದ್ದಾಗ ನಾನು ಕೆಲವು ಉಪನ್ಯಾಸಗಳ ಮೂಲಕ ಮಹಾಜನರ ಮುಂದಿಟ್ಟೆನು. ಉಪದೇಶಗಳು 2–7–69 ರಿಂದ ಪ್ರಾರಂಭವಾಗಿ ತಾ|| 28–9–69ರವರೆಗೆ ನಡೆದವು. ಅವುಗಳ ಟಿಪ್ಪಣಿಯನ್ನು ಬರೆದುಕೊಂಡ

ಭಕ್ತರ ಗ್ರಂಥಗಳ ಆಧಾರದಮೇಲೆ ಇಲ್ಲಿ ಪುಸ್ತಕರೂಪವಾಗಿ ವಾಚಕರಿಗೆ ಸಮರ್ಪಿಸ ಲಾಗಿದೆ. ಮೊದಲು ಮಾತನಾಡುವಾಗ ಹೊರಬಿದ್ದ ವಿಷಯಗಳನ್ನು ಸ್ವಲ್ಪ ಮಾರ್ಪಡಿಸಿ ಈಗಿನ ರೂಪದಲ್ಲಿ ಗ್ರಂಥವನ್ನು ಬೆಳಕಿಗೆ ಹಿಡಿದಿದೆಯಾದ್ದರಿಂದ ಓದುಗರಿಗೆ ವಿಚಾರಸರಣಿಯು ಕ್ರಮಬದ್ಧವಾಗಿರುವದಾಗಿದೆ. ಅವಶ್ಯವೆಂದು ಕಂಡುಬಂದ ಕೆಲಕೆಲವು ವಿಷಯಗಳನ್ನು ಅಲ್ಲಲ್ಲಿ ಸೇರಿಸಿಕೊಂಡೇ ಬರೆದಿರುತ್ತೇವೆ.

ಇಲ್ಲಿರುವ ಉಪದೇಶಗಳು ಕೇವಲ ವಾಕ್ಯಪ್ರಮಾಣಗಮ್ಯವಲ್ಲ, ಕೇವಲ ತರ್ಕಗಮ್ಯವೂ ಅಲ್ಲ ; ಅನುಭವಗಮ್ಯವಿಷಯವನ್ನು ಅನುಭವಕ್ಕೆ ಹೊಂದಿಸಿಯೇ ಅರಿತುಕೊಳ್ಳಬೇಕೆಂಬುದು ಯುಕ್ತವೂ ಆಗಿರುತ್ತದೆ. ಇಲ್ಲಿ ಕಾಣಬರುವ ಸಾಧನೆ ಪರವಾದ ಉಪದೇಶಗಳನ್ನು ಸಾಧಕರು ಅನುಷ್ಠಾನದ ಒರೆಗಲ್ಲಿಗೆ ತಿಕ್ಕಿಯೇ ಮನದಟ್ಟುಮಾಡಿಕೊಳ್ಳಬೇಕು ಎಂದು ಮತ್ತೊಮ್ಮೆ ತಿಳಿಯಿಸಬಯಸುತ್ತೇನೆ.

ಇಲ್ಲಿರುವ ವಿಚಾರನ್ಯೂನತೆಗಳನ್ನೂ ಭಾಷಾನ್ಯೂನತೆಗಳನ್ನೂ ತಿಳಿಯಿಸುವ ಮಹನೀಯರ ಉಪಕಾರವನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿ ಮುಂದಿನ ಸಂಸ್ಕರಣದಲ್ಲಿ ಅವುಗಳನ್ನು ಸರಿಪಡಿಸಲಾಗುವದು. ಇಲ್ಲಿರುವ ಒಟ್ಟು ಉಪ ನ್ಯಾಸಗಳ ಸಂಖ್ಯೆ ೫೫ ಆಗಿರುತ್ತದೆ.

ಇತಿ—

ಗ್ರಂಥಕರ್ತ.

# ವಿಷಯಾನುಕ್ರಮಣಿಕೆ

# ॥ ಗುರುವಂದನಮ್ ॥

ಶ್ರುತಿಸ್ಮೃತಿಪುರಾಣಾನಾಮಾಲಯಂ ಕರುಣಾಲಯಮ್ ।
ನಮಾಮಿ ಭಗವತ್ಪಾದಶಂಕರಂ ಲೋಕಶಂಕರಮ್ ॥೧॥

ಗುರವೇ ಸರ್ವಲೋಕಾನಾಂ ಭಿಷಜೇ ಭವರೋಗಿಣಾಮ್ ।
ನಿಧಯೇ ಸರ್ವವಿದ್ಯಾನಾಂ ದಕ್ಷಿಣಾಮೂರ್ತಯೇ ನಮಃ ॥೨॥

ಶಂಕಾರೂಪೇಣ ಮಚ್ಚಿತ್ತಂ ಪಂಕೀಕೃತಮಭೂದ್ಯಯಾ ।
ಕಿಂಕರೀ ಯಸ್ಯ ಸಾ ಮಾಯಾ ಶಂಕರಾಚಾರ್ಯಮಾಶ್ರಯೇ ॥೩॥

ಅಂಗುಷ್ಠತರ್ಜನೀಯೋಗಮುದ್ರಾವ್ಯಾಜೇನ ದೇಹಿನಾಮ್ ।
ಶ್ರುತ್ಯರ್ಥಂ ಬ್ರಹ್ಮಜೀವೈಕ್ಯಂ ದರ್ಶಯನ್ಯೋಽವತಾತ್ ಶಿವಃ ॥೪॥

ನಮಾಮಿ ಶಂಕರಾಚಾರ್ಯಗುರುಪಾದಸರೋರುಹಮ್ ।
ಯಸ್ಯ ಪ್ರಸಾದಾನ್ಮೂಢೋಽಪಿ ಸರ್ವಜ್ಞತ್ವಃ ಪ್ರಪದ್ಯತೇ.

|| ಓಂ ||

# ಅನುಭವಗಮ್ಯವೇದಾಂತ



## ೧. ಮಾನವನ ಈಗಿನ ಪರಿಸ್ಥಿತಿ

( 30–7–69 )

ಲೋಕದಲ್ಲಿರುವ ಬುದ್ಧಿವಂತಪ್ರಾಣಿಗಳೊಳಗೆ ಮನುಷ್ಯನಿಗೇ ಹೆಚ್ಚಿನ ಸ್ಥಾನವಿದೆ. ಏಕೆಂದರೆ ಅವನಿಗೇ ಇಹಲೋಕದ ಮತ್ತು ಪರಲೋಕದ ವಿಷಯದ ಜ್ಞಾನಕರ್ಮಗಳಲ್ಲಿ ಅಸಾಧಾರಣವಾದ ಅಧಿಕಾರವಿದೆ. ನಮ್ಮ ದೇಶದಲ್ಲಿ ಅನಾದಿಯಾಗಿರುವ ವೇದವಲ್ಲಿ ಮನುಷ್ಯನಿಗೇ ಕರ್ಮೋಪಾಸನಾಜ್ಞಾನಗಳಲ್ಲಿ ಮುಖ್ಯವಾಗಿ ಅಧಿಕಾರವಿದೆ ಎಂದು ಹೇಳಿರುತ್ತದೆ. ಇದರಂತೆ ಬೈಬಲ್, ಕೊರಾನ್– ಮುಂತಾದ ಧಾರ್ಮಿಕಗ್ರಂಥಗಳಲ್ಲಿಯೂ ಸೃಷ್ಟಿಯಲ್ಲೆಲ್ಲ ಮನುಷ್ಯನಿಗೇ ಹೆಚ್ಚಿನ ಸ್ಥಾನವಿದೆಯೆಂದೂ ಒತ್ತಿಹೇಳಿರುತ್ತದೆ.

ಇದು ಮನುಷ್ಯನು ತನ್ನ ಹೆಗ್ಗಳಿಕೆಯನ್ನು ಹೆಮ್ಮೆಯಿಂದ ಕೊಚ್ಚಿಕೊಳ್ಳುವ ಬರಿಯ ವಾಙ್ಮಾತ್ರವೆನ್ನುವಹಾಗಿಲ್ಲ. ಏಕೆಂದರೆ ಅವನು ಇಡಿಯ ಪ್ರಪಂಚವನ್ನೇ ತನ್ನ ಪ್ರಯೋಜನಕ್ಕೆ ಬರುವಂತೆ ಬಳಸಿಕೊಳ್ಳುತ್ತಿದ್ದಾನೆಂಬುದು ಸರ್ವರಿಗೂ ಪ್ರತ್ಯಕ್ಷವಾಗಿರುತ್ತದೆ. ಪೃಥ್ವಿ, ಅಪ್ಪು. ತೇಜಸ್ಸು, ವಾಯು, ಆಕಾಶ–ಎಂದು ವಿಂಗಡಿಸಿಕೊಂಡಿರುವ ಪಂಚಭೂತಗಳನ್ನೂ ಅವನು ಈಗ ಮೆಲ್ಲಮೆಲ್ಲಗೆ ಸ್ವಾಧೀನಕ್ಕೆ ತೆಗೆದುಕೊಂಡಿರುತ್ತಾನೆ. ಪೃಥ್ವಿಯನ್ನು ಬಗೆದು ಅದರೊಳಗೆ ದೊರಕುವ ಕಲ್ಲಿದ್ದಲು, ಎಣ್ಣೆ, ಲೋಹಗಳು–ಮುಂತಾದವುಗಳನ್ನು ತನ್ನ ಬಳಕೆಗೆ ಇಟ್ಟು–ಕೊಂಡಿರುತ್ತಾನೆ. ಚಿನ್ನಬೆಳ್ಳಿಯ ಒಡವೆಗಳು, ಕಬ್ಬಿಣ, ತಾಮ್ರ–ಮುಂತಾದ ಲೋಹಗಳ ಪಾತ್ರೆಗಳು–ಇವುಗಳು ಅವನ ಜೀವನದ ನಿತ್ಯೋಪಕರಣಗಳಾಗಿವೆ. ಈ ಕೆಲಸಕ್ಕೆ ಅವನು ಭೂಗರ್ಭಶಾಸ್ತ್ರವನ್ನು ಏರ್ಪಡಿಸಿಕೊಂಡಿರುತ್ತಾನೆ. ಭೂಗುಣವನ್ನು ಅರಿತು ತನಗೆ ಬೇಕಾದ ಸಸ್ಯಗಳನ್ನು ಬೆಳೆದುಕೊಂಡು ಆಹಾರಕ್ಕೆ ಉಪಯೋಗಿಸುತ್ತಿದ್ದಾನೆ. ನದೀನದಸರೋವರಸಮುದ್ರಾದಿಜಲಾಶಯಗಳನ್ನು

ಪಾನಕ್ಕೂ, ಮತ್ಸ್ಯಾದಿಗಳನ್ನು ಆಹಾರಕ್ಕೂ ಉಪಯೋಗಿಸುವದಲ್ಲದೆ ಭೂಮಂಡಲವನ್ನೆಲ್ಲ ಒಂದುಗೂಡಿಸಿ ಮಾನವಜಾತಿಗೆ ಪ್ರಯೋಜನಕಾರಿಗಳಾಗುವಂತೆ ಹಡಗು, ಜಹಜು— ಮುಂತಾದ ಯಾನಗಳನ್ನು ಏರ್ಪಡಿಸಿಕೊಂಡಿರುತ್ತಾನೆ. ಇದಕ್ಕಾಗಿ ಶಕ್ತಿಶಾಸ್ತ್ರ, ವಸ್ತುಶಾಸ್ತ್ರವೇ ಮುಂತಾದ ಶಾಸ್ತ್ರಗಳನ್ನು ಸಿದ್ಧಗೊಳಿಸಿಕೊಂಡಿರುತ್ತಾನೆ. ನೀರಿನ ಆವಿ, ಸಾಮಾನ್ಯವಾದ ಉಷ್ಣಶಕ್ತಿ, ಬೆಳಕು, ಆಯಸ್ಕಾಂತಶಕ್ತಿ, ವಿದ್ಯುಚ್ಛಕ್ತಿ—ಮುಂತಾದವುಗಳನ್ನು ಉಪಯೋಗಿಸಿಕೊಂಡು ರೈಲು, ಜಹಜುಗಳು ಮುಂತಾದ ಯಾನಗಳನ್ನು ತಯಾರಿಸಿಕೊಂಡಿರುತ್ತಾನೆ. ವನಸ್ಪತಿಶಾಸ್ತ್ರದಂತೆ ಪ್ರಾಣಿಶಾಸ್ತ್ರವನ್ನೂ ಉಪಯೋಗಿಸಿಕೊಂಡು ಹಲವು ಪ್ರಾಣಿಗಳನ್ನು ಸಾಕಿ ತನ್ನ ಉಪಭೋಗಸಾಮಗ್ರಿಯಾಗಿ ಮಾಡಿಕೊಂಡಿರುತ್ತಾನೆ. ವಾಯುವಿಮಾನಗಳನ್ನು ಬಳಸಿಕೊಂಡು ಖೇಚರಪ್ರಾಣಿಗಳನ್ನೂ ಮೀರಿದ ವೇಗವತ್ತರವಾದ ಸಂಚಾರದಿಂದ ಅಂತರಿಕ್ಷಭಾಗವನ್ನೂ ತನ್ನ ವಶಕ್ಕೆ ತೆಗೆದುಕೊಂಡಿರುತ್ತಾನೆ. ಇತ್ತೀಚೆಗೆ ವಾಯುಮಂಡಲವನ್ನೂ ಮೀರಿ ಬಹಿರಾಕಾಶವಲ್ಲಿಯೂ ಸಂಚರಿಸುವದಕ್ಕೆ ಮೊದಲುಮಾಡಿರುತ್ತಾನೆ. ಭೂಮಿಯ ಸುತ್ತಲೂ ತಿರುಗುವ ಚಂದ್ರಾದಿಗ್ರಹಗಳನ್ನೂ ಅನುಕರಣಮಾಡಿರುವದಲ್ಲದೆ ಇತ್ತೀಚೆಗೆ ಚಂದ್ರಗ್ರಹವನ್ನೇ ಮುಟ್ಟಿರುತ್ತಾನೆ. ಚಂದ್ರಪ್ರದೇಶದಲ್ಲಿ ಇಳಿದು ನಮ್ಮ ದೇಶದ ಕೆಲವು ವಿಗ್ರಹಗಳನ್ನು ಅಲ್ಲಿಟ್ಟು ಭೂಲೋಕದವರಿಗೆ ತಾನು ಚಂದ್ರಗ್ರಹವನ್ನು ಮುಟ್ಟಿದ್ದರ ಗುರುತಾಗಿ ದೂರಧ್ವನಿಯಂತ್ರದಿಂದ ಇಲ್ಲಿಯವರೊಡನೆ ಸಂಭಾಷಣೆಮಾಡಿರುವದಲ್ಲದೆ, ಚಂದ್ರಗ್ರಹದಿಂದ ಸ್ವಲ್ಪ ಮೃತ್ತಿಕೆಯನ್ನೂ ಇಲ್ಲಿಗೆ ತಂದುತೋರಿಸಿರುತ್ತಾನೆ; ಶುಕ್ರಗ್ರಹವನ್ನು ಮುಟ್ಟುವ ಪ್ರಯತ್ನವನ್ನೂ ಮಾಡುತ್ತಿರುತ್ತಾನೆ. ಹೀಗೆಯೇ ಬೈಸಿಕಲ್ಲುಗಳೆಂಬ ದ್ವಿಚಕ್ರಿಕೆಗಳೂ ಮೋಟಾರುಗಳೆಂಬ ತೈಲಯಾನಗಳಜೊತೆಗೆ ವಾಯುವಿಮಾನ ಆಕಾಶಯಾನಗಳೂ ಅವನ ಮಹಿಮೆಯನ್ನು ಪ್ರದರ್ಶಿಸುತ್ತಿವೆ. ಇದನ್ನೆಲ್ಲ ನೋಡಿದರೆ ಕಾಲಾನುಕಾಲಕ್ಕೆ ಇಡಿಯ ಸೌರವ್ಯೂಹವೇ ಇವನಿಗೆ ಅಧೀನವಾಗಿಬಿಡುವದೋ ಎನ್ನಿಸುತ್ತಿದೆ !

ಮಿಲ್ಟನ್ ಎಂಬ ಕವಿಯು 'ಕಳೆದುಕೊಂಡ ಸ್ವರ್ಗ' (Paradise Lost) ಎಂಬ ಹೆಸರಿನ ಒಂದು ಕಾವ್ಯವನ್ನು ಬರೆದಿರುತ್ತಾನೆ. ಮನುಷ್ಯನಿಗೆ ಮಾನ್ಯತೆಯನ್ನು ತೋರಿಸಬೇಕೆಂಬ ಈಶ್ವರನ ಆಜ್ಞೆಯನ್ನು ಉಲ್ಲಂಘಿಸುವ ಸೈತಾನನೂ ಅವನ ಸ್ನೇಹಿತರೂ ಸ್ವರ್ಗಭ್ರಷ್ಟರಾಗಿ ನರಕಲೋಕಕ್ಕೆ ಇಳಿದಾಗ ಅವನು ಉಚ್ಚಾಸನದಲ್ಲಿ ಕುಳಿತು ತನ್ನ ಗೆಳೆಯರೊಂದಿಗೆ ಆಡಿದ ಮಾತುಗಳು ಈಗ ನೆನಪಿಗೆ ಬರುವಂತಾಗಿದೆ. ಅವನು ಗೆಳೆಯರಿಗೆ ಧೈರ್ಯವನ್ನು ಹೇಳುವಾಗ 'ಮನಸ್ಸೊಂದಿದ್ದರೆ ನರಕವನ್ನೂ ಸ್ವರ್ಗವಾಗಿ ಮಾಡಿಕೊಳ್ಳಬಹುದು !' ಎಂದಿ

ಪಿತ್ತಾನೆ. ಹಾಗೆಯೇ ಈಗ ಮಾನವನು ತನ್ನ ಮನಃಪ್ರಭಾವದಿಂದ ಭೂಲೋಕವನ್ನೆಲ್ಲ ಭೋಗಕ್ಕೆ ಅಧಿಷ್ಠಾನವಾಗಿ ಮಾಡಿಕೊಂಡಿರುವದಲ್ಲದೆ ಅಂತರಿಕ್ಷವನ್ನೂ ಗ್ರಹಗಳನ್ನೂ ತನ್ನ ವಿಹಾರಸ್ಥಾನಗಳಾಗಿ ಮಾಡಿಕೊಳ್ಳುವ ಶಕ್ತಿಯನ್ನು ತೋರತೊಡಗಿಸಿಕೊಂಡಿದ್ದಾನೆ. ನೆಸ್ಟ್ ದೇಶವಲ್ಲಿ ಈಗ ರಾಷ್ಟ್ರಾಧಿಕಾರಿಗಳೂ ಜನನಾಯಕರೂ ಸಹ 'ಧರ್ಮಶಾಸ್ತ್ರಗಳು ಭೌತಿಕವಿಜ್ಞಾನಶಾಸ್ತ್ರಕ್ಕೆ ಅನುಗುಣವಾಗಿರಬೇಕು"—ಎಂದು ಧರ್ಮಬೋಧಕರಿಗೂ ಬೋಧನೆಮಾಡುವದಕ್ಕಾರಂಭಿಸಿದ್ದಾರೆ!

ಮನುಷ್ಯನು ಹೀಗೆ ತನ್ನ ಬುದ್ಧಿಯ ಪ್ರತಿಭೆಯನ್ನು ಎಲ್ಲೆಲ್ಲಿಯೂ ಹರಡಿಕೊಳ್ಳುತ್ತಿರುವದು ಅವನ ಭೋಗಜೀವನದ ವಿಲಾಸಕ್ಕೆ ಹೆಚ್ಚಿನ ಸೌಕರ್ಯಗಳನ್ನು ಉಂಟುಮಾಡಿಕೊಟ್ಟಿದೆ ಎಂಬುದಕ್ಕೆ ಸಂಶಯವಿಲ್ಲ. ಸಕಲಭೋಗಸಾಮಗ್ರ್ಯುಪೇತವಾದ ದೊಡ್ಡದೊಡ್ಡ ಭವನಗಳು ಕಿಕ್ಕಿರಿದಿರುವ ನಗರಗಳು ಹೆಚ್ಚುತ್ತಿವೆ. ನಗರಕ್ಕೆ ಬೇಕಾದ ವಿಸ್ತೃತವಾದ ರಸ್ತೆಗಳು, ಸಾಲುಮರಗಳು, ವಿದ್ಯುದ್ದೀಪಗಳು, ಜಲನಳಿಕೆಗಳು, ಹೋಟಲುಗಳು, ವಿನೋದಕ್ಕೆ ಬೇಕಾದ ಕ್ಲಬ್ಬುಗಳು, ಉದ್ಯಾನಗಳು, ವಿವಿಧವಿಚಿತ್ರವಸ್ತುಪ್ರದರ್ಶನಾಲಯಗಳು, ಸಕಲವಿದ್ಯಾನಿಲಯಗಳು, ನಗರಸೌಕರ್ಯನಿರ್ಮಾಣಕ ಸಂಸ್ಥೆಗಳು, ಧನಕೋಶಾಗಾರಗಳು, ನ್ಯಾಯಾಲಯಗಳು, ಅಂಚೆಯ ಕಛೇರಿಗಳು, ದೂರಾಧ್ವಾನ....ದೂರದರ್ಶಕಯಂತ್ರಗಳು, ತಂತೀವರ್ತಮಾನ, ತಂತ್ರೀರಹಿತವರ್ತಮಾನಸಾಮಗ್ರಿಗಳು, ಗೀತವಾದಿತ್ರಾದಿಸಾಮಗ್ರಿಗಳು, ರಾಷ್ಟ್ರದ ಆಡಳಿತಕ್ಕೆ ತಕ್ಕ ಸಂವಿಧಾನಮಂದಿರಗಳು, ಭೂಸೇನೆ, ಜಲಸೇನೆ, ವಾಯುಸೇನೆ, ವಿವಿಧನವೀನಶಸ್ತ್ರಾಸ್ತ್ರಗಳ ಸಾಹ್ಯ— ಇವುಗಳು ಹಳೆಯ ತಲೆಮಾರಿನ ಯಾರನ್ನಾದರೂ ಬೆರಗುಗೊಳಿಸುವಂತಿವೆ ಎಂದು ಬೇರೆ ಹೇಳಬೇಕೆ ?

ಈಗ ಇಷ್ಟು ಸಂಪತ್ಸಮೃದ್ಧಿಯಲ್ಲಿ ಮೈಮರೆಯುವ ಸ್ಥಿತಿಗೆ ಬಂದಿರುವ ಮನುಷ್ಯನ ನಾಗರಿಕತೆಯು ಮನುಷ್ಯನಿಗೆ ಸುಖದ ಅಭಿವೃದ್ಧಿಗೂ ದುಃಖದ ನಿಕರ್ಷಕ್ಕೂ ಕಾರಣವಾಗಿದೆಯೆ ?— ಎಂಬುದನ್ನು ಸ್ವಲ್ಪ ಒಳಹೊಕ್ಕು ನೋಡಿ ವಿಚಾರಿಸಬೇಕಾಗಿದೆ. ಸ್ವಾಮಿ ವಿವೇಕಾನಂದರು ಹೇಳಿರುವ ಒಬ್ಬ ಬಡವನ ಕಥೆಯನ್ನು ಇಲ್ಲಿ ನೆನಪಿಸಿಕೊಳ್ಳುವಂತಿದೆ. ಒಬ್ಬ ದಟ್ಟದರಿದ್ರನು ಒಬ್ಬ ಮಹಾತ್ಮರನ್ನು ಶರಣುಹೊಕ್ಕು ತನ್ನ ದಾರಿದ್ರ್ಯವನ್ನು ಕಳೆದುಕೊಳ್ಳುವದಕ್ಕೆ ಅನುಕೂಲಿಸುವಂತೆ ಹೇಳಿದ ಕೆಲಸವನ್ನು ಕೂಡಲೆ ಮಾಡುವ, ಒಬ್ಬ ಮಾಯಾವಿಯಾದ ರಕ್ಕಸನು ತನಗೆ ಸೇವಕನಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡನಂತೆ. ಆಗ ಮಹಾತ್ಮರು, 'ಇದು ನಿನ್ನನ್ನು ಕಷ್ಟಕ್ಕೀಡುಮಾಡೀತು, ಜೋಕೆ!'—ಎಂದು ಎಷ್ಟು ಎಚ್ಚರಿಸಿದರೂ ಕೇಳದೆ ಆ ಮೂರ್ಖನು ಪಟ್ಟುಹಿಡಿದು 'ಏನಾದರೂ ಆಗಲಿ, ದಯವಿಟ್ಟು ನನಗೆ ಇಂಥ ಒಬ್ಬ ಸೇವಕನನ್ನು ಅನುಗ್ರಹಿಸಲೇಬೇಕು!' ಎಂದು

ಅಡಿಗಡಿಗೆ ಬೇಡಿಕೊಂಡನು, ಆಗ ಅವರ ಅನುಗ್ರಹದಿಂದ ಅವನಲ್ಲಿಗೆ ಸ್ಮರಣ ಮಾತ್ರದಿಂದ ರಕ್ಷಸಸೇವಕನೊಬ್ಬನು ಬಂದು ಕಾಣಿಸಿಕೊಂಡನು. ಆದರೆ ಅವನು ಮೊಟ್ಟಮೊದಲೇ ಒಂದು ಷರತ್ತುಬಂಧವನ್ನು ಮಾಡಿಕೊಂಡನು. 'ನಾನು ಒಂದು ಕೆಲಸವನ್ನು ಮಾಡಿದಕೂಡಲೆ ನನಗೆ ಇನ್ನೊಂದು ಕೆಲಸವನ್ನು ಹೇಳ ಬೇಕು : ನನಗೆ ಯಾವ ಕೆಲಸವೂ ಇಲ್ಲವೆಹೋದರೆ ನಿನ್ನನ್ನು ತಿಂದುಹಾಕಿಬಿಡು ತ್ತೇನೆ' ಎಂಬುದು ಅವನ ಕರಾರು. ಹಾಗೇ ಆಗಲೆಂದು ಆ ಬಡವನು 'ಈ ಕಾಡಿನ ಮರಗಳನ್ನೆಲ್ಲ ಕತ್ತರಿಸು !' ಎಂದನು. ರಕ್ಕಸನು ಕೂಡಲೆ 'ಆದಾಯಿತು, ಮತ್ತೇನು?' ಎಂದನು. ಬಡವನು 'ಸಮುದ್ರದೊಳಗಿನ ರತ್ನಗಳನ್ನೆಲ್ಲ ಎತ್ತಿ ರಾಶಿ ಹಾಕು!' ಎಂದು ಕಟ್ಟಪ್ಪಣೆಮಾಡಿದನು. ರಕ್ಕಸನು 'ಅದೂ ಆಯಿತು, ಮತ್ತೇನು?' ಎಂದನು. ಹೀಗೆ ಒಡೆಯನು ಹೇಳಿದ ಕೆಲಸಗಳನ್ನೆಲ್ಲ ಕ್ಷಣಮಾತ್ರದಲ್ಲಿ ಮುಗಿಸಿ 'ಮತ್ತೇನು ? ಮತ್ತೇನು ?' ಎಂದು ಹೂಂಕರಿಸುತ್ತಿದ್ದ ಆ ಸೇವಕನ ಉಪಟಳ ವನ್ನು ತಡೆಯುವದಕ್ಕಾಗದೆ, ಸುಮ್ಮನೆ ಇದ್ದರೆ ತನ್ನನ್ನು ಅವನು ಎಲ್ಲಿ ತಿಂದು ಹಾಕುವನೊ !– ಎಂಬ ಅಂಜಿಕೆಯಿಂದ ಆ ತಿಳಿಗೇಡಿಯು ಮಹಾತ್ಮರಲ್ಲಿಗೆ ಓಡಿಬಂದು ತನಗೆ ಬಂದೊದಗಿದ ಪೀಕಲಾಟವನ್ನು ವಿವರಿಸಿ 'ಇವನಿಂದ ನನ್ನನ್ನು ಹೇಗಾದರೂ ಪಾರುಮಾಡಿರಿ !' ಎಂದು ಅಂಗಲಾಚಿಬೇಡಿಕೊಂಡನು. ಆಗ ಮಹಾತ್ಮರು, ಒಳ್ಳೆಯದು, ಒಂದು ಕೆಲಸವನ್ನು ಮಾಡು : ಒಂದು ನಾಯಿಯ ಬಾಲವನ್ನು ಕತ್ತರಿಸಿ ಅವನಿಗೆ ಕೊಟ್ಟು 'ಇದನ್ನು ನೆಟ್ಟಗೆಮಾಡು !' ಎಂದು ಹೇಳು"– ಎಂದು ಒಂದು ಹಂಚಿಕೆಯನ್ನು ಹೇಳಿಕೊಟ್ಟರು. ರಕ್ಕಸನು ಆ ಬಾಲವನ್ನು ಎಷ್ಟೆಷ್ಟು ನೀವಿ ನೆಟ್ಟಗೆಮಾಡಿದರೂ ಅದು ಮತ್ತೆ ಡೊಂಕಾಗಿಯೇ ಉಳಿಯುತ್ತಿತ್ತು. ಕೊನೆಗೆ ಅವನು ಬೇಸತ್ತು 'ನನಗೆ ಈ ಕೆಲಸವನ್ನು ತಪ್ಪಿಸಿರಿ, ನಿಮಗೆ ಯಾವ ತೊಂದರೆಯನ್ನೂ ಮಾಡದೆ ನಾನು ಹೊರಟುಹೋಗುವೆನು' ಎಂದು ಬೇಡಿಕೊಂಡನಂತೆ !

ಈಗ ನಮ್ಮ ನಾಗರಿಕತೆಯು ನಿರ್ಮಾಣಮಾಡಿರುವ ಯಂತ್ರಗಳೂ ಅಂಥ ರಕ್ಕಸರಾಗಿವೆ. ಅವುಗಳು ಎಂಥ ಗಡುಚಾದ ಕೆಲಸವನ್ನುಕೂಡ ಸುಲಭವಾಗಿ ಸ್ವಲ್ಪ ಹೊತ್ತಿನಲ್ಲಿಯೇ ಮಾಡಿಬಿಡುತ್ತವೆ. ಭತ್ತವನ್ನು ಕುಟ್ಟುವ ಯಂತ್ರಗಳು, ಎಣ್ಣೆ ತೆಗೆಯುವ ಯಂತ್ರಗಳು, ಭೂಮಿಯನ್ನು ಬಗೆಯುವ ಯಂತ್ರಗಳು, ಬಟ್ಟೆಯನ್ನು ನೇಯುವ ಯಂತ್ರಗಳು, ಪ್ರಯಾಣಕ್ಕೆ ನೆರವಾಗಿರುವ ಯಂತ್ರಗಳು, ಭಾರವನ್ನು ಹೊರುವ ಯಂತ್ರಗಳು, ಲೆಕ್ಕವನ್ನು ಮಾಡುವ ಯಂತ್ರಗಳು, ಒಂದು ಭಾಷೆಯನ್ನು ಮತ್ತೊಂದು ಭಾಷೆಗೆ ಅನುವಾದಮಾಡುವ ಯಂತ್ರಗಳು. ದೂರದರ್ಶಕಯಂತ್ರ ಗಳು, ದೂರಧ್ವನಿವಾಹಕಯಂತ್ರಗಳು– ಇತ್ಯಾದಿ ಇತ್ಯಾದಿ. ಆದರ ಇವುಗಳಿಂದ ಎಷ್ಟೆಷ್ಟು ಸೌಕರ್ಯಗಳು ನಮಗೆ ಹೆಚ್ಚಿರುವವೋ ಅಷ್ಟಷ್ಟು ನಮ್ಮ ಕಷ್ಟಪರಂಪರೆ

ಗಳು ಬೇರೊಂದು ರೂಪವನ್ನು ತಾಳಿಕೊಂಡುಬಂದು ನಮ್ಮೆದುರಿಗೆ ನಿಲ್ಲುತ್ತಿವೆ. ಅಷ್ಟಷ್ಟು ನಮ್ಮ ಆಶೋತ್ತರಗಳೂ ಹೆಚ್ಚುತ್ತಿವೆ. ಧನದ ಆಶೆ, ಅಧಿಕಾರದ ಆಶೆ, ಜನರನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂಬ ಆಶೆ—ಇವೇ ಮುಂತಾದ ಆಶೆಗಳು ಈಗ ಲೆಕ್ಕವಿಲ್ಲದಷ್ಟಾಗಿವೆ. ರೈಲುಕಳ್ಳರು, ಹಡಗಿನಕಳ್ಳರು, ಲಾರಿಗಳನ್ನೂ ಮೋಟರುಗಳನ್ನೂ ದಾರಿಯಲ್ಲಿ ಅಡ್ಡಹಾಕಿ ಪ್ರಯಾಣಿಕರಲ್ಲಿರುವ ಧನಕನಕಾದಿ ಗಳನ್ನು ಸುಲಿಗೆಮಾಡುವ ದರೋಡೆಕೋರರು-ಇಂಥವರು ದಿನದಿನಕ್ಕೂ ಹೆಚ್ಚಾಗು ತ್ತಿದಾರೆ. ಔಷಧಗಳೂ ಆಸ್ಪತ್ರೆಗಳೂ ಹೆಚ್ಚಾದಂತೆ ನಾವು ನಿರೀಕ್ಷಿಸದೆ ಇದ್ದ ಉಲ್ಬಣವಾದ ಹೊಸ ರೋಗಗಳೂ ಸಂಖ್ಯೆಯಲ್ಲಿ ಹೆಚ್ಚುತ್ತಿವೆ. ನಮ್ಮ ಧನರಾಶಿಯು ಹೆಚ್ಚಾದಂತೆ, ಆಹಾರಸಾಮಗ್ರಿಯೂ ಜೀವನದ ಆವಶ್ಯಕತೆಯ ಸಾಮಗ್ರಿಗಳೂ ಕೈಗೆ ಎಟುಕದಂತೆ ಆಗಿಬಿಡುತ್ತಿವೆ. ಜನರಲ್ಲಿ ಕಪಟ, ಮೋಸ, ಹಿಂಸಾಪ್ರವಣತೆ, ಅನೃತಾಸಕ್ತಿ, ಮಿಥ್ಯಾಚಾರ— ಮುಂತಾದವೂ ಹೆಚ್ಚಿಕೊಳ್ಳುತ್ತಿವೆ !

ವ್ಯಕ್ತಿಗಳೇ ಅಲ್ಲದೆ ಜನಾಂಗಗಳೂ ವಿವಿಧರಾಷ್ಟ್ರಗಳ ನಾಯಕರೂ ಸ್ಪರ್ಧೆ ಯಿಂದ ಭೂಮಿಯೆಲ್ಲವೂ ತಮಗೇ ವಶವಾಗಿರಬೇಕೆಂದು ಹವಣಿಸುತ್ತಿದಾರೆ. ನಮ್ಮ ದೇಶಕ್ಕೆ ಪಠಾಣರು, ಮೊಗಲರು, ಡಚ್ಚರು, ಪೋರ್ಚುಗೀಸರು, ಫ್ರೆಂಚರು, ಇಂಗ್ಲಿಷರು— ಮುಂತಾಗಿ ಹಲವು ದೇಶಾಂತರದ ಜನಾಂಗದವರು ದಂಡೆತ್ತಿಬಂದು ನಮ್ಮ ದೇಶದ ಧನವನ್ನೂ ಸಂಪತ್ತನ್ನೂ ದೋಚಿಕೊಂಡು ಹೋದದ್ದಲ್ಲದೆ, ನಮ್ಮ ಸಂಸ್ಕೃತಿಯನ್ನೂ ಹಾಳುಮಾಡಿಬಿಟ್ಟಿರುತ್ತಾರೆ. ಈಗ ಅಮೆರಿಕದವರೂ ರಷಿಯನ್ನ ರೂ ಪೈಪೋಟಿಯಿಂದ ನಮಗೆ ಧನಸಹಾಯ, ಶಸ್ತ್ರಸಹಾಯ, ಯಂತ್ರಸಹಾಯ, ವಿಜ್ಞಾನದಕ್ಷಜನರ ಸಹಾಯ— ಮುಂತಾದವುಗಳ ಪ್ರಲೋಭನವನ್ನು ಮುಂದಿಟ್ಟು ನಮ್ಮನ್ನು ದಿಗ್ಭ್ರಮೆಗೊಳಿಸುತ್ತಿದಾರೆ. ನಮ್ಮ ಸರಕಾರದವರು ಪಾಶ್ಚಾತ್ಯರ ಅನುಕರಣೆಯಿಂದ ಕಾರುಖಾನೆಗಳನ್ನೂ ಯುದ್ಧಾಯುಧಗಳನ್ನೂ ಉದ್ಯೋಗ ಮಂದಿರಗಳನ್ನೂ ಹಲವು ಸಾವಿರಕೋಟಿಗಳಷ್ಟು ಸಾಲವನ್ನುಮಾಡಿ ಮೂರು ನಾಲ್ಕು ಯೋಜನೆಗಳನ್ನು ಕೈಕೊಂಡು, ದೇಶದಲ್ಲಿ ಕೃಷಿಗೆ ಅವಕಾಶವಿಲ್ಲದಂತೆ ಮಾಡಿರುವದಲ್ಲದೆ ಪರದೇಶಗಳಿಂದ ಆಹಾರಧಾನ್ಯಗಳನ್ನು ತರಿಸಿಕೊಳ್ಳುವ ಯೋಜನೆಗಳನ್ನು ಬೆಳೆಯಿಸುತ್ತಾ ಈಗ ಮುಂದಿನ ಯೋಜ(ಚ ?)ನೆ ಏನೆಂಬು ದನ್ನು ತಿಳಿಯದೆ ಕಣ್ಣುಕಣ್ಣು ಬಿಡುತ್ತಿದಾರೆ !

ನಮ್ಮ ಹದಿನೆಂಟು ಪುರಾಣಗಳಲ್ಲಿ ಅಲ್ಲಲ್ಲಿ ಭವಿಷ್ಯದ್ವೃತ್ತವನ್ನು ವರ್ಣಿಸಿರು ವರು. ಆದರೆ ಆ ಪುರಾಣಕರ್ತರಿಗೂ ಹೊಳೆಯದಷ್ಟು ಹೀನಸ್ಥಿತಿಗೆ ಈಗಿನ ನಮ್ಮ ದೇಶವು ಇಳಿದುಬಿಟ್ಟಿದೆ. ಕ್ಷಾಮಡಾಮರಗಳು, ರೋಗರುಜಿನಗಳು, ಕಳ್ಳ ಕಾಕರ ಹಾವಳಿ, ವಂಗಿಕೋರಪ್ರಜೆಗಳು' ರಾಗದ್ವೇಷಯುಕ್ತವಾದ ಸಾಮಂತರಾಷ್ಟ್ರ

ಗಳು, ಎಲ್ಲೆಲ್ಲಿಯೂ ಹೊಣೆಗಾರಿಕೆಯಿಲ್ಲದ ಜನರಿಂದ ಯಾನಗಳಿಗೆ ಅಪಘಾತ, ಕಛೇರಿಗಳಿಗೆ ಬೆಂಕಿಹತ್ತಿಸುವದು, ಸರಕಾರದವರಮೇಲೆ ವಿದ್ಯಾರ್ಥಿಗಳನ್ನುಕೂಡ ತಿರುಗಿಬೀಳುವಂತೆ ಪ್ರೇರಿಸುವದು—ಮುಂತಾದ ರೀತಿಗಳಿಂದ ದೇಶವನ್ನೆಲ್ಲ ಒಂದು ಉಗ್ರಜ್ವಾಲಾಮುಖಿಯಾಗಿ ಇವು ಮಾರ್ಪಡಿಸಿಬಿಟ್ಟಿರುತ್ತವೆ! ಈ ನಡುವೆ—ಕೈಲಾಸ ಪರ್ವತವನ್ನು ಹಲವು ಶ್ಲೋಕಗಳಿಂದ ಬಗೆಬಗೆಯಾಗಿ ಕೊಂಡಾಡಿ ವರ್ಣಿಸಿದ ಕಾಳಿದಾಸನ ಕಲ್ಪನೆಗೂ ಸಿಕ್ಕದಂತೆ— ಹಿ ಮಾ ಲ ಯ ದ ಪ್ರಾಂತದಲ್ಲಿಯೂ ವಾಯವ್ಯ, ಈಶಾನ್ಯಪ್ರಾಂತಗಳಲ್ಲಿಯೂ ನಮ್ಮ ದೇಶಕ್ಕೆ ದ್ರೋಹವನ್ನು ಬಗೆಯುವ ಪಾಕಿಸ್ಥಾನ, ಚೀಣ— ಮುಂತಾದ ಪರದೇಶದ ಸೇನೆಗಳ ಠಾಣ್ಯಗಳು, ಏರ್ಪಡುತ್ತಿವೆ ! ರಷ್ಯನ್ನರೂ ಅಮೆರಿಕನ್ನರೂ ನಮಗೆ ಹೇಗೋ ಹಾಗೆಯೇ ನಮ್ಮ ಶತ್ರುಗಳಿಗೂ ಯುದ್ಧಸಾಮಗ್ರಿಗಳನ್ನು ಒದಗಿಸಿಕೊಟ್ಟು ಎರಡು ನಾಯಿಗಳನ್ನು ಒಂದರಮೇಲೊಂದನ್ನು ಛೂ ಬಿಡುವ ತುಂಟರಂತೆ ನಮ್ಮ ಪರಸ್ಪರ ದ್ವೇಷದ ಉದ್ವೇಗಕ್ಕೆ ಉತ್ತೇಜನವನ್ನು ಕೊಡುತ್ತಿದಾರೆ !

ನಮಗೆ ದೊಡ್ಡ ಗಂಡಾಂತರವು ಸಂನಿಹಿತವಾಗಿರುತ್ತದೆ, ಸುತ್ತಲೂ ಶತ್ರುಗಳು ಆವರಿಸಿಕೊಳ್ಳುತ್ತಿದಾರೆ ; ಒಳಗೆ ಅಂತಃಕಲಹಗಳು ಹೆಚ್ಚುತ್ತಿವೆ. ದೇಶದಲ್ಲಿ ಒಡಕು ಉಂಟಾಗಿದೆ. **'ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ॥'** ಇಚ್ಛಿತ ವಿಷಯಗಳ ಉಪಭೋಗದಿಂದ ಎಂದಿಗೂ ಕಾಮವು ಶಾಂತವಾಗಲಾರದು. ಬೆಂಕಿಗೆ ತುಪ್ಪದ ಹೋಮವನ್ನು ಮಾಡಿದರೆ ಅದು ಮತ್ತೂ ಭುಗಿಲೆನ್ನುವದೋ ಹಾಗೆಯೇ ಭೋಗದಿಂದ ಕಾಮವು ಮತ್ತೂ ಹೆಚ್ಚುವದು— ಎಂಬ ವೃದ್ಧರ ಉಕ್ತಿಯು ಈಗ ಮಿಕ್ಕ ದೇಶಗಳಂತೆಯೇ ನಮ್ಮ ದೇಶದಲ್ಲಿಯೂ ನಿದರ್ಶನಗಳನ್ನು ತೋರಿಸುತ್ತಿದೆ. ಪೂರ್ವಜರಾದ ಋಷಿಗಳು ಅನುಗ್ರಹಿಸಿರುವ ವೇದಗಳೂ ಶಾಸ್ತ್ರಗಳೂ ಇನ್ನೂ ಜೀವಂತವಾಗಿವೆ. ಆದರೂ ನಾವು 'ಎಂಥ ಹಳೆಯಕಾಲದ ಜನರು ನೀವು, ಭೌತಿಕವಿಜ್ಞಾನಶಾಸ್ತ್ರದ ಮಹಿಮೆಯು ಎದುರಿಗೇ ಇದ್ದರೂ ಕಣ್ಣುಕಾಣದ ಕುರುಡರಂತೆ ವರ್ತಿಸುತ್ತಿರುವಿರಲ್ಲ' !—ಎಂದು ಜನರಿಗೆ ಬೋಧೆಯನ್ನು ಮಾಡುತ್ತಿರುವೆವು! ಅಡಿಗೆಯಮನೆಗೇ ಬೆಂಕಿಬಿದ್ದಿದ್ದರೂ ಅಡಿಗೆಗಾಗಿ ಒಲೆಗೆ ಬೆಂಕಿಹಾಕಿದ್ದರ ಹೊಗೆಯಿದು !— ಎಂದುಕೊಂಡು ಹಾಗೆಯೇ ಮಲಗಿದ್ದ ಕಥೆಯ ಸೋಮಾರಿಗಳಂತೆ ನಾವೂ ನಿಜವಾದ ಸ್ಥಿತಿಯ ಅರಿವಿಲ್ಲದೆ ಹೊಸನಾಗರಿಕತೆಗೆ ಮರುಳಾಗಿರುತ್ತೇವೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣಭಗವಂತನು ಮಾಡಿರುವ ಉಪದೇಶವಾಕ್ಯಕ್ಕೆ ಈಗ ಸ್ವಲ್ಪ ಕಿವಿಯನ್ನು ಕೊಡೋಣ :—

ಧ್ಯಾಯತೋ ವಿಷಯಾನ್ ಪುಂಸಃ ಸಙ್ಗಸ್ತೇಷೂಪಜಾಯತೇ |
ಸಙ್ಗಾತ್ಸಞ್ಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ||
ಕ್ರೋಧಾದ್ ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ |
ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ||

ಗೀ. ೨-೬೨, ೬೩

ಮನುಷ್ಯನು ವಿಷಯಗಳನ್ನು ಕುರಿತು ಚಿಂತಿಸುತ್ತಿದ್ದರೆ ಅವುಗಳಲ್ಲಿ ಮನಸ್ಸು ಅಂಟಿಕೊಳ್ಳುತ್ತದೆ. ಆ ಸಂಗದಿಂದ ಕಾಮವುಂಟಾಗುತ್ತದೆ. ಸಂಗವು ವಿಷಯಕ್ಕೆ ಹತ್ತಿಕೊಂಡ ಬಳಿಕ ಅದನ್ನು ಪಡೆದುಕೊಳ್ಳಬೇಕೆಂಬ ಇಚ್ಛೆಯು ನಮಗೆ ಬಲವಾಗಿ ನಮ್ಮನ್ನು ಹೊರಮುಖವಾಗುವಂತೆ ಮಾಡುತ್ತದೆ. ಆ ಕಾಮಕ್ಕೆ ಏನಾದರೂ ಅಡ್ಡಿಯಾದರೆ, ರಾಮನನ್ನು ವರಿಸುವದಕ್ಕೆ ಬಂದ ಶೂರ್ಪಣಖಿಯು ಸಿಟ್ಟಿನಿಂದ ತನ್ನ ಸುಂದರರೂಪವನ್ನು ಬಿಟ್ಟು ಘೋರರಕ್ಕಸಿಯ ರೂಪವನ್ನೇ ತಾಳಿದಂತೆ, ಕ್ರೋಧವುಂಟಾಗುವದು. ಹೆಚ್ಚಿನ ಕ್ರೋಧವುಂಟಾದಾಗ ಅದು ಮಾಡಬಹುದಾದದ್ದು ಯಾವದು, ಮಾಡಬಾರದ್ದು ಯಾವದು ?- ಎಂಬ ವಿವೇಕವನ್ನು ಕಳೆದುಕೊಳ್ಳುವದೆಂಬ ಸಮ್ಮೋಹದ ರೂಪವನ್ನು ಪಡೆಯುವದು. ಕ್ರುದ್ಧನಾದವನು ಏನೂ ತೋಚದೆ ಗುರುಗಳನ್ನೂ ತೆಗಳುವದಕ್ಕೆ ಮೊದಲು ಮಾಡುವನು. ಆ ಸಮ್ಮೋಹದಿಂದ ಸ್ಮೃತಿಯುಂಟಾಗಬೇಕಾದ ಸಂದರ್ಭದಲ್ಲಿಯೂ ನಾನು ಇದನ್ನಲ್ಲವೆ ಮಾಡಬೇಕು!- ಎಂಬ ನೆನಪುಕೂಡ ಹುಟ್ಟದೆ ಹೋಗುವದು. ಸ್ಮೃತಿಭ್ರಂಶದಿಂದ ಇದು ಕಾರ್ಯ, ಇದು ಅಕಾರ್ಯ -ಎಂಬುದನ್ನು ವಿಂಗಡಿಸಿ ನಿಶ್ಚಯಿಸುವದಕ್ಕೆ ಬೇಕಾದ ಬುದ್ಧಿಯೂ ನಾಶವಾಗಿ ಬಿಡುವದು. ಹೀಗಾಗಿ ವಿಷಯಚಿಂತನೆಯು ಪರಂಪರೆಯಿಂದ ಪುರುಷಾರ್ಥದಿಂದಲೇ ಮನುಷ್ಯನು ಚ್ಯುತನಾಗುವಂತೆ ಮಾಡಿಬಿಡುವದು- ಎಂದು ಶ್ರೀಕೃಷ್ಣನು ಉಪದೇಶಿಸಿರುತ್ತಾನೆ. ಅರ್ಜುನನಿಗೆ ಹೀಗೆಯೇ ಕರ್ತವ್ಯತಾನಿಶ್ಚಯದ ಬುದ್ಧಿಯು ತಪ್ಪಿಹೋಗಿ ಸ್ವಧರ್ಮವಾದ ಧರ್ಮಯುದ್ಧವನ್ನು ಮಾಡದಂತೆ ಮಾಡುವದರಲ್ಲಿತ್ತು; ಆದರೆ ಭಗವಂತನ ಕೃಪೆಯಿಂದ ಅದು ತಪ್ಪಿಹೋಯಿತು. ಈಗ ನಾವು ಹಿಂದಿನವರ ಉಪದೇಶದ ಸ್ಮೃತಿಯನ್ನು ಕಳೆದುಕೊಂಡಿದೇವೆ: ಭೌತಿಕವಿಜ್ಞಾನವು ನಮ್ಮ ಮುಂದೆ ಇಟ್ಟಿರುವ ಚಿತ್ತಾಕರ್ಷಕ ವಿಷಯಗಳ ಚಿಂತನೆಯೊಂದನ್ನೇ ನಮ್ಮ ಮನಸ್ಸಿಗೆ ಹತ್ತಿಸುತ್ತಿದೆ. ಇದರಿಂದ ನಮ್ಮ ಹಿರಿಯರು ನಮಗಾಗಿ ಗಳಿಸಿಟ್ಟಿರುವ ಪರಮಾರ್ಥಜ್ಞಾನವು ನಮ್ಮಿಂದ ದೂರವಾಗುವ ಅಪಾಯವಿದೆ.

ಎಡ್ವರ್ಡ್ ಕಾರ್ಪೆಂಟರ್ ಎಂಬಾತನು 'ನಾಗರಿಕತೆಯೂ, ಅದರ ನಿದಾನವೂ ಚಿಕಿತ್ಸೆಯೂ' (Civilization, its cause and Cure)

ಎಂಬ ಹೆಸರಿನ ಪುಸ್ತಕವನ್ನು ಬರೆದಿರುತ್ತಾನೆ, ಆತನ ಅಭಿಪ್ರಾಯದಲ್ಲಿ ನಾಗರಿಕತೆಯೆಂಬುದೊಂದು ರೋಗವು. ಅದಕ್ಕೆ ಧರ್ಮಾಧರ್ಮವಿವೇಕವಿಲ್ಲದಿರುವದೇ ಕಾರಣವು. ಅದನ್ನು ಹೋಗಲಾಡಿಸಿಕೊಳ್ಳುವದಕ್ಕಾಗಿ ನಾವು ಈಗ ವ್ಯವಹಾರದಲ್ಲಿ ಆಧ್ಯಾತ್ಮವಿಚಾರವನ್ನೂ ಸಾಧನವನ್ನೂ ಕೈಗೊಳ್ಳಬೇಕಾಗಿರುತ್ತದೆ.

---

## ೨. ಲೌಕಿಕದೃಷ್ಟಿಯೂ ಶಾಸ್ತ್ರದೃಷ್ಟಿಯೂ

( 31–7–69 )

ಭೌತಿಕವಿಜ್ಞಾನವು ಮಾನವನಿಗೆ ಕೊಟ್ಟಿರುವ ಜ್ಞಾನದಿಂದ ಅವನು ಎಷ್ಟರಮಟ್ಟಿಗೆ ಬಾಹ್ಯಜಗತ್ತನ್ನು ಜಯಿಸಿಕೊಂಡಿರುತ್ತಾನೆ ಎಂಬುದನ್ನು ಹೇಳಿದ್ದಾಯಿತು. ಜಗತ್ತೆಂಬುದು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ– ಎಂದು ಮೂರು ವಿಭಾಗಗಳಾಗಿ ವಿಂಗಡಿಸಿಕೊಂಡಿರುತ್ತದೆ. ವಿಜ್ಞಾನಶಾಸ್ತ್ರದಿಂದ ತಿಳಿವಳಿಕೆಯು ಎಷ್ಟೇ ಬೆಳೆದುಕೊಂಡರೂ ಅದು ಐಂದ್ರಿಯಕಪ್ರಪಂಚದ ಜ್ಞಾನವೇ ಆಗಿರುತ್ತದೆ. ಇನ್ನು ಇಂದ್ರಿಯಗಳನ್ನು ಮೀರಿರುವ ಆಧ್ಯಾತ್ಮಿಕವಿಚಾರದತ್ತ ನಾವು ತಿರುಗಬೇಕಾಗಿರುತ್ತದೆ.

ಒಂದು ದೃಷ್ಟಿಯಿಂದ ನೋಡಿದಾಗ ಭೌತಿಕವಿಜ್ಞಾನವೂ ಶರೀರವೇ ಮುಂತಾದ ಆಧ್ಯಾತ್ಮಿಕಪ್ರಪರಿಚವನ್ನೂ ಪರಿಶೀಲಿಸುತ್ತದೆ ಎನ್ನಬೇಕಾಗುವದು. ಅದು ಶರೀರರಚನಾಶಾಸ್ತ್ರ(Anatomy), ಶರೀರಾವಯವಕೃತ್ಯವಿಜ್ಞಾನಶಾಸ್ತ್ರ (Physiology), ತರ್ಕಶಾಸ್ತ್ರ (Logic), ನೀತಿಶಾಸ್ತ್ರ (Ethics)– ಮುಂತಾದ ಆಧ್ಯಾತ್ಮಿಕತತ್ತ್ವಗಳನ್ನು ಕುರಿತ ಶಾಸ್ತ್ರಗಳನ್ನೂ ಏರ್ಪಡಿಸಿಕೊಂಡಿದೆ. ಹೀಗಿರುವಾಗ ಆ ವಿಜ್ಞಾನಶಾಸ್ತ್ರದ ಕ್ಷೇತ್ರಕ್ಕೆ ಒಳಪಡದ ಅತೀಂದ್ರಿಯತತ್ತ್ವಗಳು ಎಲ್ಲಿರಬಹುದು !–ಎಂಬ ಶಂಕೆಯು ಎದ್ದುಕೊಳ್ಳುವದು ಸ್ವಾಭಾವಿಕವಾಗಿರುತ್ತದೆ.

ಈ ಶಂಕೆಗೆ ಪರಿಹಾರವೇನೆಂದರೆ : ಭೌತಿಕಶಾಸ್ತ್ರವು ಪ್ರತ್ಯಕ್ಷ, ಅನುಮಾನ –ಇವೆರಡರ ವಿಷಯಗಳನ್ನು ಮಾತ್ರ ವಿಚಾರಮಾಡುತ್ತದೆ. ಅವುಗಳ ವಿಷಯದಲ್ಲಿ ಹೆಚ್ಚಿನ ತಿಳಿವಳಿಕೆಯುಳ್ಳ ಆಪ್ತರ ವಾಕ್ಯವನ್ನೂ ವಿಚಾರಕ್ಕೆ ಆಧಾರವಾಗಿ ಮಾಡಿಕೊಂಡಿರುತ್ತದೆ. ವಸ್ತುಗಳನ್ನು ನಿರೀಕ್ಷಣಪರೀಕ್ಷಣಗಳಿಂದಲೂ ತನಗೆ

ಆಗಲೇ ತಿಳಿದಿರುವ ತತ್ತ್ವಗಳಿಗೆ ಹೊಂದಿಸಿನೋಡುವ ಸಂವಾದೀಕರಣದಿಂದಲೂ ಅವುಗಳ ತತ್ತ್ವನಿರ್ಣಯವನ್ನು ಮಾಡುತ್ತದೆ. ಹೀಗೆ ನಿರ್ಣಯಿಸಿದ ತತ್ತ್ವಗಳಿಗೆ ಅನುಗುಣವಾಗಿ ಕಲ್ಪನಾಶಕ್ತಿಯ ಸಹಾಯದಿಂದ ಹೊಸಹೊಸ ಯಂತ್ರಾದಿಗಳ ಮೂಲಕ ತನ್ನ ಶೋಧನಕ್ರಮದ ಫಲಿತಾಂಶವು ಜನರಿಗೆ ಪ್ರತ್ಯಕ್ಷವಾಗಿ ಕಾಣುವಂತೆ ಮಾಡಿರುತ್ತದೆ. ಆದರೆ ಅತೀಂದ್ರಿಯತತ್ತ್ವಗಳು ಪ್ರತ್ಯಕ್ಷಾದಿಪ್ರಮಾಣಗಳಿಗಾಗಲಿ, ನಿರೀಕ್ಷಣಪರೀಕ್ಷಣಾದಿಗಳಿಗಾಗಲಿ ಗೋಚರವಾಗುವದಿಲ್ಲ. ಅದು ಪರಿಶೀಲನೆಗೆ ತೆಗೆದುಕೊಂಡಿರುವ ಶರೀರ, ಇಂದ್ರಿಯ, ಮನಸ್ಸು—ಮುಂತಾದವುಗಳುಕೂಡ ಮತ್ತೊಬ್ಬರ ಶರೀರಾದಿಗಳೇ ಹೊರತು ತತ್ತ್ವಶೋಧಕನ ಸಾಕ್ಷಾತ್ಸ್ವಶರೀರೇಂದ್ರಿಯಾದಿಗಳಾಗಿರುವದಿಲ್ಲ. ಆದ್ದರಿಂದ ಅಂಥ ಅತೀಂದ್ರಿಯವಾದ ತತ್ತ್ವಗಳು ಬೇರೆಯಾಗಿ ಇವೆಯೆ ? ಅವನ್ನು ಶೋಧಿಸಿ ನಿರೂಪಿಸುವ ಶಾಸ್ತ್ರವೊಂದು ಇದೆಯೆ ? ಇದ್ದರೆ ಆ ಶಾಸ್ತ್ರವು ಬೋಧಿಸುವ ತತ್ತ್ವಗಳನ್ನು ಶ್ರೋತೃಗಳು ಯಾವ ಸಾಧನದಿಂದ ಹೇಗೆ ಅರಿತುಕೊಂಡು ನಿಶ್ಚಯಿಸಿಕೊಳ್ಳಬೇಕು ? ಆ ನಿಶ್ಚಯದಿಂದ ವ್ಯಾವಹಾರಿಕಜೀವನಕ್ಕೆ ಯಾವ ಪ್ರಯೋಜನವಿದೆ ?—ಎಂಬುದನ್ನು ಈಗ ನಾವು ವಿಚಾರಕ್ಕೆ ತೆಗೆದುಕೊಳ್ಳಬೇಕಾಗಿದೆ.

ಭೌತಿಕವಿಜ್ಞಾನವು ತಿಳಿಸಿಕೊಡುವ ಶರೀರವಿಷಯಕವಿಜ್ಞಾನವಾಗಲಿ ಮನೋವಿಷಯಕವಿಜ್ಞಾನವಾಗಲಿ ಯಾವ ಪ್ರಯೋಜನಕ್ಕೂ ಬರುವದಿಲ್ಲವೆಂದೇನೂ ತಿಳಿಯುವಹಾಗಿಲ್ಲ. ಔಷಧಪ್ರಯೋಗ, ಶಸ್ತ್ರಚಿಕಿತ್ಸಾದಿಗಳಿಂದ ಜನರಿಗೆ ಎಷ್ಟೋ ಉಪಯೋಗವಾಗಿದೆ-ಎಂಬುದು ಪ್ರತ್ಯಕ್ಷಸಿದ್ಧ. ಮನಸ್ಸಿನ ಸ್ವಭಾವವನ್ನು ಅರಿತವರು ಜನಸಾಮಾನ್ಯದ ಮನಸ್ಸಿನ ಅಂತಸ್ತಿಗೆ ತಕ್ಕಂತೆ ಭಾಷಣಾದಿಗಳಿಂದ ಶ್ರೋತೃಗಳನ್ನು ತಮ್ಮ ಪಕ್ಷಕ್ಕೆ ಒಲಿಸಿಕೊಳ್ಳುವ ಪಾಠಶಾಲೆಗಳಲ್ಲಿ ಬೋಧಕರು ವಿದ್ಯಾರ್ಥಿಗಳ ಮನಸ್ಸ್ವಭಾವವನ್ನು ಅರಿತು ಅವರಿಗೆ ತಕ್ಕ ಪ್ರಕಾರಗಳಿಂದ ಬೋಧನಕ್ರಮವನ್ನೇರ್ಪಡಿಸಿಕೊಳ್ಳುತ್ತಿರುವದೂ ಎಲ್ಲರಿಗೂ ತಿಳಿದೇಇದೆ. ಆದರೂ ಶರೀರೇಂದ್ರಿಯಮನಸ್ಸುಗಳ ಸ್ವರೂಪಪ್ರವೃತ್ತಿಗಳನ್ನೂ ಅವುಗಳ ಪರಮಾರ್ಥವನ್ನೂ ಅರಿಯುವದಕ್ಕೆ ಶೋಧಕನು ತನ್ನತನ್ನ ಶರೀರೇಂದ್ರಿಯಾದಿಗಳ ಸ್ವಭಾವವನ್ನು ನೇರಾಗಿ ಪರೀಕ್ಷಿಸಿಕೊಳ್ಳಬೇಕೆಂಬುದು ಸರ್ವಸಮ್ಮತವಾಗಿರುತ್ತದೆ. ಹೀಗೆಯೇ ಹೊರಗಿನ ವಿಷಯಗಳಿಗೆ ಅನ್ವಯಿಸುವ ತರ್ಕಶಾಸ್ತ್ರವು ಪ್ರಮೇಯಪ್ರಪಂಚಕ್ಕೆ ಹೊಂದುಗೆಯಾಗಿದ್ದರೂ ನಿಜವಾದ ಆಧ್ಯಾತ್ಮಿಕಪದ್ಧತಿಗಳ ಸತತ್ತ್ವನಿರ್ಧಾರಣೆಗೆ ಹೊಂದುವ ತರ್ಕಕ್ಕಿಂತ ಬೇರೆಯಾಗಿರಬೇಕೆಂಬುದೂ ನಿರೀಕ್ಷಿಸತಕ್ಕದ್ದಾಗಿದೆ. ಜನಸಾಮಾನ್ಯಮನಃಶಾಸ್ತ್ರ (Mass Psycology) ಬಾಲಮನಃಶಾಸ್ತ್ರ (Child Psycology) ಪ್ರತ್ಯಯಾಕಾರಗಳನ್ನು ಕುರಿತ ತರ್ಕ (Formal Logic) ಪದಾರ್ಥಾನ್ವಯಿತರ್ಕ (Material Logic)

—ಮುಂತಾದ ಶಾಸ್ತ್ರಗಳೂ ಹೀಗೆ ಬಾಹ್ಯಪ್ರಪಂಚನಿರೀಕ್ಷಣೆಗೇ ಸೀಮಿತವಾಗಿರುವದರಿಂದ ಅತೀಂದ್ರಿಯಶಾಸ್ತ್ರವೊಂದು ಮನುಷ್ಯನಿಗೆ ಬೇಕಾಗಿರುತ್ತದೆ. ಏಕೆಂದರೆ ಮನುಷ್ಯನಿಗೆ ಕೇವಲ ಬಾಹ್ಯಪ್ರಪಂಚಜ್ಞಾನದಿಂದಲೇ ತೃಪ್ತಿಯುಂಟಾಗುವದಿಲ್ಲ.

ಅಂಥ ಶಾಸ್ತ್ರವೊಂದಿದೆಯೆ ?- ಎಂದರೆ ಇದೆ. ಅದಕ್ಕೆ **ವೇದ** ಎಂದು ಹೆಸರು. ಪ್ರತ್ಯಕ್ಷದಿಂದಲಾಗಲಿ ಅನುಮಾನದಿಂದಲಾಗಲಿ ಅರಿಯಲಾಗದ ಇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯಗಳನ್ನು ಅರಿಯುವದಕ್ಕೆ ಸಾಧನವಾಗಿರುವದರಿಂದ ಅದಕ್ಕೆ ವೇದವೆಂದು ಹೆಸರು. ವೇದವೆಂಬುದು ಬೈಬಲ್, ಕೊರಾನ್ —ಮುಂತಾದವುಗಳಂತೆ ಒಂದು ಪುಸ್ತಕದ ಹೆಸರಲ್ಲ. ವೇದವೆಂದರೆ ಅತೀಂದ್ರಿಯಜ್ಞಾನಸಾಧನ. ಹೀಗೆ ವೇದವೆಂದರೆ ಅತೀಂದ್ರಿಯತತ್ತ್ವವಿಷಯಕವಾದ ಜ್ಞಾನರಾಶಿಯಾಗಿರುವದರಿಂದ ಅದು **ಅಪೌರುಷೇಯ**, ಎಂದರೆ ಪುರುಷನು ಸ್ವಾತಂತ್ರ್ಯದಿಂದ ರಚಿಸಿದ ಗ್ರಂಥವಲ್ಲವೆಂದೂ ಈ ಜ್ಞಾನವನ್ನು ತಪಃಶಕ್ತಿಯಿಂದ ಕಂಡುಹಿಡಿದುಕೊಂಡ ಮಹನೀಯರನ್ನು **ಋಷಿಗಳು** ( ಕಂಡುಕೊಂಡವರು ) ಎಂದೂ ನಮ್ಮ ದೇಶದಲ್ಲಿ ಕರೆಯುತ್ತಾರೆ. ಈ ವೇದವನ್ನು ಅನುಸರಿಸಿ ಅವುಗಳಲ್ಲಿರುವ ವಿಷಯಗಳನ್ನು ತಮ್ಮ ಮನಸ್ಸಿನಲ್ಲಿ ನೆನಪಿಗೆ ತಂದುಕೊಂಡು ತಮ್ಮ ತಮ್ಮ ಶಕ್ತ್ಯನುಸಾರವಾಗಿ ರಚಿಸಿರುವ ಧರ್ಮಗ್ರಂಥಗಳಿಗೆ **ಸ್ಮೃತಿಗಳು** ಎಂದು ಹೆಸರು. ಇದೇ ಅರ್ಥವನ್ನು ಐತಿಹಾಸಿಕವೃತ್ತಾಂತಗಳ ದ್ವಾರದಿಂದ ಯುಕ್ತಿಗೆ ಹೊಂದಿಸಿ ಸಾಮಾನ್ಯರಿಗೂ ಅರ್ಥವಾಗುವಂತೆ ಬರೆದಿರುವ ಗ್ರಂಥಗಳಿಗೆ **ಇತಿಹಾಸಗಳು, ಪುರಾಣಗಳು**—ಎಂದು ಹೆಸರು. ಈ ಎಲ್ಲಾ ವಾಙ್ಮಯದ ಮೂಲಕ ಅತೀಂದ್ರಿಯವಾದ ಆಧ್ಯಾತ್ಮಿಕತತ್ತ್ವಗಳನ್ನು ಅಧಿಕಾರಿಗಳಾದವರು ಅರಿತುಕೊಳ್ಳಬಹುದಾಗಿರುತ್ತದೆ.

ಕೃಷ್ಣದ್ವೈಪಾಯನವ್ಯಾಸರು ರಚಿಸಿರುವ **ಮಹಾಭಾರತ**ವೆಂಬ ಇತಿಹಾಸದೊಳಗೆ ಶ್ರೀಕೃಷ್ಣಾರ್ಜುನಸಂವಾದರೂಪವಾಗಿ ಬರೆದಿರುವ **ಭಗವದ್ಗೀತೆ**ಯು ಈಗ ಲೋಕವಿಖ್ಯಾತವಾಗಿರುತ್ತದೆ. ಅದನ್ನು ಈಗ ಮೂಲದಲ್ಲಿಯೂ ಭಾಷ್ಯಗಳ ಮತ್ತು ಭಾಷಾಂತರಗಳ ವ್ಯಾಖ್ಯಾನಗಳ ನೆರವಿನಿಂದಲೂ ಭೂಮಂಡಲದ ನಾಗರಿಕಪ್ರಪಂಚದ ವಿಚಾರಪರರೆಲ್ಲ ಓದುತ್ತಿದಾರೆ. ಆದ್ದರಿಂದ ಪ್ರಧಾನವಾಗಿ ಆ ಗ್ರಂಥವನ್ನೇ ನಾನು ಇಲ್ಲಿ ಆಗಾಗ್ಗೆ ಪ್ರಮಾಣವಾಗಿ ಉದಾಹರಿಸುವೆನು.

ಇನ್ನುಮೇಲೆ ನಾನು ಭೌತಿಕವಿಜ್ಞಾನಕ್ಕೆ ಆಧಾರವಾಗಿರುವ ದೃಷ್ಟಿಯನ್ನು ಲೌಕಿಕದೃಷ್ಟಿಯೆಂದೂ ಅತೀಂದ್ರಿಯಜ್ಞಾನಕ್ಕೆ ಆಧಾರವಾಗಿರುವ ದೃಷ್ಟಿಯನ್ನು ಶಾಸ್ತ್ರದೃಷ್ಟಿಯೆಂದೂ ವ್ಯವಹರಿಸುವೆನು. ಶ್ರೀಕೃಷ್ಣಭಗವಂತನು ಅರ್ಜುನನಿಗೆ

ಮಾಡಿದ ಉಪದೇಶದ ಸಂದರ್ಭದಲ್ಲಿ ಅತೀಂದ್ರಿಯವಾದ ವಿಷಯದ ವಿಚಾರವು ಪ್ರಸಕ್ತವಾಗಿರುವಲ್ಲಿ ಅರ್ಜುನನು ಹೀಗೆಂದು ಕೇಳಿರುತ್ತಾನೆ

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ |**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥** ಗೀ. ೩–೩೬

ಶ್ರೀಕೃಷ್ಣನೆ, ಈ ಮಾನವನು ಎಷ್ಟೋ ಮಾಡಬಾರದ ಕೆಲಸಗಳನ್ನು 'ಇದನ್ನು ಮಾಡಬಾರದು, ಮಾಡುವ ಇಚ್ಛೆಯೂ ನನಗಿಲ್ಲ' ಎಂದುಕೊಂಡಿದ್ದರೂ ಮಾಡಿಬಿಡುತ್ತಿರುವನಲ್ಲ! ಇವನ್ಕೆ ಪ್ರೇರಕರು ಯಾರು ? ಯಾರೋ ಇವನನ್ನು ಬಲಾತ್ಕಾರದಿಂದ ಅಕೃತ್ಯಗಳನ್ನು ಮಾಡುವಂತೆ ಮುಂದಕ್ಕೆ ತಳ್ಳುತ್ತಿದ್ದಾರೆ–ಎಂದು ಕಾಣುವದಲ್ಲ! ಹೀಗೆ ಮನುಷ್ಯನು ಪಾಪವನ್ನು ಮಾಡುವಂತೆ ಬಲಾತ್ಕರಿಸುತ್ತಿರುವ ಶಕ್ತಿ ಯಾವದು ?– ಎಂಬುದು ಅರ್ಜುನನ ಪ್ರಶ್ನೆ. ಈ ಪ್ರಶ್ನೆಯು ವಿವೇಕಿಗಳಾದವರಿಗೆಲ್ಲ ಹೊಳೆಯುವ ಪ್ರಶ್ನೆಯೇ ಆಗಿದೆ. ಇದನ್ನು ಪ್ರತ್ಯಕ್ಷಾದಿಪ್ರಮಾಣಗಳಿಂದ ನಿಶ್ಚಯಿಸುವದು ಆಗುವದಿಲ್ಲವೆಂಬುದು ಸ್ಪಷ್ಟ. ಶ್ರೀಕೃಷ್ಣನು ಇದಕ್ಕೆ ಕೊಟ್ಟಿರುವ ಉತ್ತರವೇನೆಂದರೆ :

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥** ೩–೩೭

ಕಾಮವೇ ಹೀಗೆ ಮನುಷ್ಯನನ್ನು ಪಾಪಕೃತ್ಯದಕಡೆಗೆ ದೂಡುತ್ತಿರುವ ಮನೋದೋಷವು. ಕಾಮವು ಬಂದಾಗ ಮನುಷ್ಯನು ಸ್ವಾಭಾವಿಕಸ್ಥಿತಿಯಲ್ಲಿರುವದಕ್ಕೆ ಆಗುವದೇಇಲ್ಲ. ಈ ಕಾಮಕ್ಕೆ ಏನಾದರೂ ಅಡ್ಡಿಯಾಗಿ ಬಂದರೆ ಅದೇ–ರಾಮನನ್ನು ವರಿಸುವದಕ್ಕೆ ಬಂದ ಶೂರ್ಪಣಖಿಯಂತೆ– ಕ್ರೋಧವಾಗುವದು. ಇದು ಮನಸ್ಸಿನಲ್ಲಿ ರಜೋಗುಣದಿಂದ ಹುಟ್ಟಿಕೊಳ್ಳುತ್ತದೆ. ತಮೋಗುಣವು ಆವರಿಸಿಕೊಂಡಾಗ ಮನಸ್ಸಿಗೆ ಮಂಕು ಕವಿದುಕೊಳ್ಳುವದು ; ಆಗ ಅತ್ತಿತ್ತ ಅಲುಗಾಡದೆ ಮನಸ್ಸು ಸುಮ್ಮನೆ ಇದ್ದುಕೊಂಡುಬಿಡುತ್ತದೆ. ಆದರೆ ರಜೋಗುಣವು ಎದ್ದುಕೊಂಡಾಗ ಇದನ್ನು ಮಾಡಬೇಕು, ಅಥವಾ ಮಾಡಬಾರದು–ಎಂಬ ವಿವೇಕವಿಲ್ಲದೆ ಮಾಡಬಾರದ್ದನ್ನು ಮಾಡುವಂತೆ ಮನುಷ್ಯನನ್ನು ಪ್ರೇರಿಸಿಬಿಡುತ್ತದೆ. ತನ್ನದಲ್ಲದ ವಸ್ತುವನ್ನು ತೆಗೆದುಕೊಂಡುಬಿಡುವದು, ಸುಳ್ಳನ್ನಾದರೂ ಆಡುವದು, ಮತ್ತೊಬ್ಬರನ್ನು ಹಿಂಸಿಸುವದು– ಇವೆಲ್ಲ ಕಾಮದ ಅಥವಾ ಅದರ ವಿಕಾರವಾದ ಕ್ರೋಧದ ಕಾರ್ಯವೇ. ಅದು ತಣ್ಣಗಾದಮೇಲೆಯೇ 'ಎಲ ಎಲಾ, ಹೀಗೇಕೆ ಮಾಡಿದೆ ನಾನು !' ಎಂಬ ಪಶ್ಚಾತ್ತಾಪವುಂಟಾಗುತ್ತದೆ.

ಈ ಕಾಮವು ಎಲ್ಲಿರುತ್ತದೆ ?– ಎಂಬುದನ್ನು ತಿಳಿದುಕೊಳ್ಳುವದು ಆವಶ್ಯ. ಮನುಷ್ಯನಿಗೆ ಹೀಗೆ ಅಪಕಾರವನ್ನು ಮಾಡುತ್ತಿರುವ ಪರಮಶತ್ರುವಾದ ಈ

ಕಾಮವು ಎಲ್ಲಿ ಅಡಗಿಕೊಂಡಿರುತ್ತದೆ ?– ಎಂಬುದನ್ನು ಅರಿತುಕೊಂಡರೆ ಅದನ್ನು ಸುಲಭವಾಗಿ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದಾಗುತ್ತದೆ. ಈ ಕಾಮವೆಂಬುದು ಬಕಾಸುರನಂತೆ ಎಷ್ಟು ಆಹಾರವು ಸಿಕ್ಕಿದರೂ ಸಾಕೆನ್ನದೆ ಇನ್ನೂ ಇನ್ನೂ ಬೇಕೆನ್ನುತ್ತಲೇ ಇರುವದು : ಇದಕ್ಕೆ ಎಂಥ ಪಾಪವನ್ನು ಮಾಡಿದರೂ ಹೇಸಿಗೆಯಾಗುವದಿಲ್ಲ.

**ಇನ್ದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥**
**ತಸ್ಮಾತ್ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್** ॥ ೩–೪೦, ೪೧

ಈ ಕಾಮಕ್ಕೆ ಇಂದ್ರಿಯಗಳು, ಮನಸ್ಸು, ಬುದ್ಧಿ– ಇವೇ ವಾಸಸ್ಥಾನಗಳು. ಇವುಗಳ ಮೂಲಕವೇ ಈ ಕಾಮವು ಮನುಷ್ಯನನ್ನು ಮೋಹಗೊಳಿಸಿ ಪಾಪಕ್ಕೀಡು ಮಾಡಿಬಿಡುತ್ತದೆ. ಶತ್ರುಗಳು ಬಲವಾದ ಕೋಟೆಯೊಳಗೆ ಭದ್ರವಾಗಿ ಅವಿತುಕೊಂಡಿರುವಂತೆ ಈ ಕಾಮವು ಇವುಗಳೊಳಗೆ ಅಡಗಿಕೊಂಡಿರುತ್ತದೆ. ಕೋಟೆಯೊಳಗಿನಿಂದ ಹೊರಕ್ಕೆ ಬಂದೇ ಶತ್ರುವು ಪರರನ್ನು ಬಾಧಿಸುತ್ತಾನೆ ; ಆದರೆ ಈ ಕಾಮವು ಹಾಗಲ್ಲ. ಮನುಷ್ಯನ ಇಂದ್ರಿಯಾದಿಗಳನ್ನೇ ಕಲಕಿ ಅವನಿಗೆ ದಿಕ್ಕು ತೋಚದಂತೆ ಮೋಹಗೊಳಿಸಿ ಕುಕೃತ್ಯದಲ್ಲಿ ತೊಡಗಿಸಿಬಿಡುತ್ತದೆ. ಅವನು ಮಾಡಬಾರದ್ದನ್ನು ಮಾಡುವದನ್ನು ಕಂಡರೆ ಅದಕ್ಕೆ ಬಹಳ ಹಿಗ್ಗು. ಆದ್ದರಿಂದ ನಾವು ಮೊದಲು ಇಂದ್ರಿಯಗಳನ್ನು ಬಿಗಿಹಿಡಿಯುವದನ್ನು ಅಭ್ಯಾಸಮಾಡಬೇಕು. ಏಕೆಂದರೆ ಮನೋಬುದ್ಧಿಗಳು ಇಂದ್ರಿಯಗಳ ಬೆನ್ನನ್ನೇ ಹತ್ತುತ್ತಿರುವವು. ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡರೆ ಮನೋಬುದ್ಧಿಗಳನ್ನೂ ಜಯಿಸಿದಂತೆ; ಪಾಪಿಯಾದ ಕಾಮವನ್ನೂ ನಾಶಪಡಿಸಿದಂತೆಯೇ ಸರಿ.

ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳುವದು ಹೇಗೆ ?– ಎಂದರೆ ಅದಕ್ಕೆ ಭಗವಂತನು ಹೇಳಿರುವ ಉಪಾಯವಿದು :

**ಇನ್ದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪನ್ಥಿನೌ** ॥ ಗೀ. ೩–೩೪.

ಒಂದೊಂದು ಇಂದ್ರಿಯಕ್ಕೂ ತನ್ನತನ್ನ ವಿಷಯದಲ್ಲಿ ರಾಗದ್ವೇಷಗಳು ಅವಶ್ಯವಾಗಿ ಉಂಟಾಗುತ್ತಿರುವವು. ಇದು ಬೇಕು, ಇದು ಬೇಡ– ಎಂದು ಬಾಯಿಬಿಟ್ಟೇನೂ ಇಂದ್ರಿಯಗಳು ಹೇಳುವದಿಲ್ಲ. ಅವಕ್ಕೆ ಸ್ವಭಾವದಿಂದಲೇ ಕೆಲಕೆಲವು ವಿಷಯಗಳನ್ನು ಕಂಡರೆ ರಾಗವುಂಟಾಗುವದು. ಸ್ವಚ್ಛವಾದ ನೀರಿನೊಳಕ್ಕೆ ಯಾವ ಬಣ್ಣದ ತೊಟ್ಟನ್ನು ಬಿಡುವೆವೋ, ಆದರ ರಂಗೇ ನೀರಿಗೂ ಹತ್ತಿಕೊಳ್ಳುವಂ

ವಿಷಯಗಳಿಂದ ಬೇರೆಬೇರೆಯ ರಂಗು ಇಂದ್ರಿಯಕ್ಕೆ ಬರುವದು. ಇದೇ ರಾಗವು. ಇನ್ನು ಕೆಲಕೆಲವು ವಿಷಯಗಳು ಎದುರಿಗೆ ಬಂದುನಿಂತರೆ, ಅದೇ ಇಂದ್ರಿಯಗಳೇ ಅವುಗಳಲ್ಲಿ ದ್ವೇಷವನ್ನು ಮಾಡುವವು. ಕಹಿಯಾದ ರಸವು ಬೇಡ, ಸಿಹಿಯಾದ ರಸವು ಬೇಕು ; ಕರ್ಕಶವಾದ ಶಬ್ದವನ್ನು ಕೇಳಿದರೆ ಆಗದು, ಇಂಪಾದ ಶಬ್ದವನ್ನು ಕೇಳಿದರೆ ಹರ್ಷವಾಗುವದು ; ಕಠಿನವಾದ ಹಾಸುಗಲ್ಲು ಮಲಗುವದಕ್ಕೆ ಬೇಡ, ಮೆತ್ತನೆಯ ಹಾಸಿಗೆಯು ಸುಖ : ಕುರೂಪವುಳ್ಳ ಮನುಷ್ಯರನ್ನು ಕಂಡರೆ ಅಸಹ್ಯ, ಸುಂದರಿಯರನ್ನು ಕಂಡರೆ ಕಣ್ಣರಳುವದು– ಇವೆಲ್ಲ ಯಾರೂ ಹೇಳಿಕೊಟ್ಟದ್ದರಿಂದ ಇಂದ್ರಿಯಗಳಿಗೆ ಹೊಸದಾಗಿ ಬಂದಿಲ್ಲ : ಸ್ವಭಾವದಿಂದಲೇ ಇಂಥ ರಾಗದ್ವೇಷಗಳು ಉಂಟಾಗುತ್ತಿರುವವು. ಆದರೆ ವಿವೇಕಿಯಾದವನು ಇವಕ್ಕೆ ವಶನಾಗಬಾರದು ; ಏಕೆಂದರೆ ಇವು ಹಾದಿಗೆ ಅಡ್ಡಲಾಗಿ ಬರುವ ದರೋಡೆಕೋರರಂತೆ ನಮ್ಮನ್ನು ಸುಲಿಗೆಮಾಡಿ ಕುಕರ್ಮಕ್ಕೆ ಎಳೆದುಬಿಡುತ್ತವೆ. ಶಂಕರಾಚಾರ್ಯರು ಈ ವಿಷಯ ದಲ್ಲಿ ಬರೆದಿರುವದೇನೆಂದರೆ ;

**ಯಾ ಹಿ ಪುರುಷಸ್ಯ ಪ್ರಕೃತಿಃ ಸಾ ರಾಗದ್ವೇಷಪುರಃಸರೈವ ಸ್ವಕಾರ್ಯೇ ಪುರುಷಂ ಪ್ರವರ್ತಯತಿ ।.... ಯದಾ ಪುನಃ ರಾಗ ದ್ವೇಷೌ ತತ್ಪ್ರತಿಪಕ್ಷೇಣ ನಿಯಮಯತಿ ತದಾ ಶಾಸ್ತ್ರದೃಷ್ಟಿರೇವ ಭವತಿ, ನ ಪ್ರಕೃತಿವಶಃ**

ಮನುಷ್ಯನ ಸ್ವಭಾವವು ರಾಗದ್ವೇಷಪೂರ್ವಕವಾಗಿಯೇ ತನ್ನ ಕಾರ್ಯದಲ್ಲಿ ಮನುಷ್ಯನನ್ನು ತೊಡಗಿಸುತ್ತದೆ. ಅವನಿಗೆ ರಾಗದ್ವೇಷಗಳುಂಟಾಗುತ್ತಿರುವದು ಸ್ವಭಾವವು; ಅದನ್ನು ಯಾರೂ ಹೇಳಿಕೊಟ್ಟಿರುವದಿಲ್ಲ. ಆದರೆ ಶಾಸ್ತ್ರವು ಅವನಿಗೆ ವಿನಯಾಧಾನವನ್ನುಂಟುಮಾಡುತ್ತಿರುವದು. ಯಾವಾಗ ಅವನು ಶಾಸ್ತ್ರ ದೃಷ್ಟಿಯನ್ನವಲಂಬಿಸುವನೋ ಆಗ ರಾಗದ್ವೇಷಗಳನ್ನು ಪ್ರತಿಪಕ್ಷಭಾವನೆಯಿಂದ ಹಿಡಿತದಲ್ಲಿಟ್ಟುಕೊಳ್ಳುತ್ತಾನೆ ; ರಾಗವನ್ನು ವೈರಾಗ್ಯದಿಂದಲೂ ದ್ವೇಷವನ್ನು ಪ್ರೇಮದಿಂದಲೂ ಗೆದ್ದುಕೊಳ್ಳುತ್ತಾನೆ. ಆಗ ಅವನಿಗೆ ಮಾಡಬಾರದ್ದನ್ನು ಮಾಡುವ ಒಲವು ಇಲ್ಲವಾಗಿಬಿಡುತ್ತದೆ. ಪ್ರಕೃತಿಯು ರಾಗದ್ವೇಷಗಳಮೂಲಕ ವಾಗಿ ಮನುಷ್ಯನನ್ನು ಹಿಂದಕ್ಕೂ ಮುಂದಕ್ಕೂ ಎಳೆದಾಡುತ್ತಿರುತ್ತದೆ. ಈ ರಾಗದ್ವೇಷಗಳು ಯಾವಾಗ ಯಾವ ವೇಷವನ್ನು ತಾಳಿ ಬರುವವೋ ಗೊತ್ತಾಗು ವಂತಿರುವದಿಲ್ಲ. ಇವೆರಡೂ ನಿಜವಾಗಿ ಕಾಮದ ವೇಷಗಳೇ ಆಗಿರುತ್ತವೆ. ಹೆಗ್ಗಣ ಒಂದುಕಡೆ ಸು ರಂ ಗ ವ ನ್ನು ಮಾಡಿಕೊಂಡು ನೆಲವನ್ನು ಕೊರೆದು ಇನ್ನೊಂದುಕಡೆಯಿಂದ ಹೊರಕ್ಕೆ ಬರುತ್ತಿರುತ್ತದೆ. ಹಳ್ಳಿಯವರು ಆ ಎರಡು ಕಂಡಿಗಳಿಗೂ ಹೊಗೆಯನ್ನು ಹಾಕಿ ಅದಕ್ಕೆ ಉಸಿರುಕಟ್ಟುವಂತೆ ಮಾಡುತ್ತಾರೆ ; ಅದು ಕೂಡಲೆ ವ್ಯಥೆಯನ್ನು ತಡೆಯಲಾರದೆ ಹೊರಕ್ಕೆ ಬಂದುಬಿಡುತ್ತದೆ ; ಆಗ

ಅದನ್ನು ಹಿಡಿದು ಕೊಳ್ಳುತ್ತಾರೆ. ಹೀಗೆಯೇ ಇಂದ್ರಿಯಗಳಿಗೆ ರಾಗದ್ವೇಷಗಳೆಂಬ ಎರಡು ಕಂಡಿಗಳಿರುವವು; ಅವೆರಡನ್ನೂ ಪ್ರತಿಪಕ್ಷಭಾವನೆಯಿಂದ ಬಿಗಿಹಿಡಿದರೆ ಅವುಗಳಲ್ಲಿ ದುಷ್ಪ್ರವೃತ್ತಿಗೆ ಅವಕಾಶವಿಲ್ಲವಂತಾಗಿ ಕಾಮವನ್ನು ವಶಪಡಿಸಿಕೊಳ್ಳು ವದು ಸಾಧ್ಯವಾಗುತ್ತದೆ.

ಇಂದ್ರಿಯಗಳಿಗೆ ಉತ್ತೇಜನವನ್ನು ಕೊಡುವ ಬಾಹ್ಯವಿಷಯಗಳ ಸಂಗವನ್ನು ಹೆಚ್ಚಿಸುವದರಿಂದ ಕಾಮಕ್ಕೆ ತೃಪ್ತಿಯನ್ನುಂಟುಮಾಡಿಕೊಳ್ಳಬಹುದೆಂದು ತಿಳಿ ಯುವದು ಮೌಢ್ಯವೇ ಸರಿ. ಇಂದ್ರಿಯಗಳನ್ನು ಅವು ಇದ್ದಂತೆಯೇ ಬಿಟ್ಟುಕೊಂಡು ವಿಷಯವ ಆಹಾರವನ್ನು ಕೊಟ್ಟು ಸಾಕಿ ಕೊಬ್ಬುವಂತೆ ಮಾಡುವದು ಲೌಕಿಕ ದೃಷ್ಟಿಯ ಫಲ; ಆದರೆ ಅವುಗಳಲ್ಲಿ ಸ್ವಭಾವದಿಂದ ಉಂಟಾಗುತ್ತಿರುವ ರಾಗದ್ವೇಷಗಳ ಹುಟ್ಟನ್ನಡಗಿಸಿಕೊಂಡು ಶಾಸ್ತ್ರದೃಷ್ಟಿಯನ್ನವಲಂಬಿಸುವದೇ ಜಾಣತನ.

ಯಾರಿಗೆ ಶಾಸ್ತ್ರದೃಷ್ಟಿಯ ಅವಲಂಬನೆಯಿಂದ ಮನಸ್ಸು ಸಮಾಧಾನವನ್ನು ಪಡೆದುಕೊಂಡಿರುವದೋ, ಅವರು ಯಾವ ಪ್ರಲೋಭನಕ್ಕೂ ಒಳಗಾಗರು; ಯಾವ ಬೆದರಿಕೆಗೂ ಅಂಜರು. ಗ್ರೀಸುದೇಶದ ರಾಜನಾದ ಅಲೆಗ್ಝಾಂಡರಮಹಾಶಯನು ನಮ್ಮ ದೇಶಕ್ಕೆ ಬಂದಾಗ ಕೆಲವು ಮುನೀಶ್ವರರನ್ನು ಕಂಡು ತನ್ನ ದೇಶಕ್ಕೆ ಬರು ವಂತೆ ಅವರನ್ನು ಪ್ರೇರಿಸಿದನಂತೆ. ಅವರಿಗೆ ಯಾವಯಾವ ಪ್ರಲೋಭನವನ್ನು ತೋರಿಸಿದರೂ ಅವರು ಸ್ವಲ್ಪವೂ ಅದಕ್ಕೆ ಜೋಲುಬೀಳಲಿಲ್ಲ. ಕೊನೆಗೆ ಅವನು ಕ್ರೋಧದಿಂದ 'ನಿಮ್ಮನ್ನು ಈಗಲೆ ಕೊಂದುಹಾಕುವೆನು' ಎಂದು ಗದರಿಸಿದನಂತೆ. ಆದರೆ ಆ ವನಾಸಿಗಳು ಹುಸಿನಗೆಯಿಂದ "ಅಯ್ಯೋ ಹುಚ್ಚ! ನೀನು ನಮ್ಮನ್ನು ಕೊಂದುಹಾಕುವದು ಅಷ್ಟು ಸುಲಭವೆಂದು ತಿಳಿದೆಯ? ಶರೀರಾತ್ಮಭಾವನೆಯಿರು ವವರು ಮರಣಕ್ಕೆ ಅಂಜಬಹುದು. ಆದರೆ ಶರೀರಪಂಜರವನ್ನು ಕಸಕ್ಕೆ ಕಡೆಯೆಂದು ತಿಳಿದಿರುವ ತಪೋಧನರನ್ನು ನೀನು ಹೇಗೆ ಏತರಿಂದ ನಾಶಗೊಳಿಸುವೆ ? ನೀನು ನಿಮ್ಮ ದೇಶದಿಂದ ಬಂದು ಎಷ್ಟೋ ದೇಶಗಳನ್ನು ಜಯಿಸಿರುವೆನೆಂಬ ಹೆಮ್ಮೆಯಿಂದ ಬೀಗುತ್ತಿರುವೆ. ಆದರೆ ನಿನ್ನನ್ನು ನೀನೇ ಜಯಿಸಿಕೊಂಡಿರುವೆಯ ? ಎಂದೆಂದಿಗೂ ನಾಶವಾಗದಿರುವ ತತ್ತ್ವವನ್ನು ಕಂಡುಕೊಂಡಿರುವೆಯ ? ಇದನ್ನೆಲ್ಲ ಆಲೋಚನೆ ಮಾಡಿನೋಡಿಕೊ!" ಎಂದು ಬುದ್ಧಿ ಹೇಳಿದರಂತೆ. ಇಂಥ ಉಚ್ಚಪದವಿಗೇರಿಸು ವದು ಶಾಸ್ತ್ರದೃಷ್ಟಿ!

---

# ೩. ಧರ್ಮಾಧರ್ಮಗಳು

( 1-8-69 )

ಭೌತಿಕಶಾಸ್ತ್ರವು ಮುಖ್ಯವಾಗಿ ಪ್ರತ್ಯಕ್ಷಾನುಮಾನಗಳನ್ನೇ ಪ್ರಮಾಣಗಳನ್ನಾಗಿ ಹಿಡಿದುಕೊಂಡಿರುತ್ತದೆ. ಅದು ಹೊರಗಿನ ಪ್ರಮೇಯಪ್ರಪಂಚದ ತತ್ತ್ವವನ್ನೇ ನಿರೀಕ್ಷಣಪರೀಕ್ಷಣಾದಿಗಳಿಂದ ಗೊತ್ತುಮಾಡುವದರಲ್ಲಿ ನಿರತವಾಗಿರುತ್ತದೆ. ಅದು ಶರೀರ, ಇಂದ್ರಿಯಗಳು, ಮನಸ್ಸು- ಮುಂತಾದವುಗಳನ್ನು ಪರಿಶೀಲಿಸುತ್ತದೆಯಾದರೂ ಪರೀಕ್ಷಕನಿಗಿಂತ ಹೊರಗೆ ಇರುವ ಬೇರೆಯವರ ಶರೀರಾದಿಗಳನ್ನೇ ಪರಿಶೀಲಿಸುತ್ತದೆಯೇ ಹೊರತು ಶೋಧಕನು ತನ್ನ ಶರೀರಾದಿಗಳನ್ನೇ ನೇರಾಗಿ ಪರೀಕ್ಷಿಸುವಂತೆ ಪ್ರೇರಿಸುತ್ತಿಲ್ಲ. ನಮಗೆ ನಮ್ಮನಮ್ಮ ಶರೀರೇಂದ್ರಿಯಾದಿಗಳು ನೇರಾಗಿ ಅನುಭವಕ್ಕೆ ಗೋಚರವಾಗುವಂತೆ ಮತ್ತೊಬ್ಬರ ಶರೀರಾದಿಗಳು ಗೋಚರವಾಗುತ್ತಿಲ್ಲ. ನಮ್ಮ ಎದುರಿಗೆ ಕೆಲವರು ಮನುಷ್ಯರು ಇದ್ದಾರೆಂದೂ ಅವರಿಗೂ ನಮ್ಮಂತೆಯೇ ಶರೀರೇಂದ್ರಿಯಮನಸ್ಸುಗಳಿರುವವೆಂದೂ ಇಟ್ಟುಕೊಂಡು ನಾವು ವ್ಯವಹರಿಸುತ್ತಿರುವದು ನಿಜ. ಇದು ವ್ಯವಹಾರಕ್ಕೆ ಸಾಕಾಗಿಯೂ ಇರುತ್ತದೆ. ಆದರೆ ತತ್ತ್ವನಿರ್ಣಯಕ್ಕೆ ಇಷ್ಟೇ ಸಾಲದು.

ಕೆಲವು ಸಂಸ್ಥೆಗಳಲ್ಲಿ ಮಾತನಾಡುವ ಗೊಂಬೆಗಳನ್ನು ಬಾಗಿಲಮುಂದೆ ಇಟ್ಟಿರುತ್ತಾರೆ: ಅವು ಜೀವಂತಮನುಷ್ಯರಂತೆಯೇ, 'ಬನ್ನಿರಿ, ಒಳಕ್ಕೆ ಹೋಗಿರಿ' ಎಂದುಮುಂತಾಗಿ ಹೇಳುವಂತೆಯೇ ಪ್ರತೀತಿಯಾಗುತ್ತಿರುತ್ತದೆಯಂತೆ. ಆದರೆ ಅಷ್ಟುಮಾತ್ರದಿಂದ ಅವು ಬದುಕಿರುವ ಶರೀರೇಂದ್ರಿಯಾದಿಗಳುಳ್ಳ ಮನುಷ್ಯರೇ ಎಂದು ಯಾರಾದರೂ ಭಾವಿಸುವರೇನು ? ಇಲ್ಲ. ಕೆಲವರು ಪರರ ಮನಸ್ಸಿನಲ್ಲಿರುವ ಆಲೋಚನೆಗಳನ್ನು ಕಂಡುಹಿಡಿದುಕೊಳ್ಳಬಲ್ಲ ಸಾಮರ್ಥ್ಯವುಳ್ಳವರಾಗಿರುತ್ತಾರೆ, 'ನೀವು ಈಗ ಇಂಥಿಂಥ ವಿಚಾರಗಳನ್ನು ಮಾಡುತ್ತಿದ್ದೀರಿ' ಎಂದು ನಿಶ್ಚಯಿಸಿ ತಿಳಿಸಬಲ್ಲ ಕೌಶಲವೂ ಅವರಿಗೆ ಇರುತ್ತದೆ. ಆದರೆ ಆ ವಿದ್ಯೆಯಲ್ಲಿ ಪರಿಣತರಾಗಿರುತ್ತಾರೆಂಬ ಕಾರಣದಿಂದ ಅವರಿಗೆ ಮನಸ್ಸಿನ ತತ್ತ್ವವೂ ಗೊತ್ತಾಯಿತೆಂದು ಹೇಳಬಹುದೇನು ? ಮತ್ತೊಬ್ಬರ ಮನಸ್ಸಿನ ವಿಚಾರಗಳನ್ನು ನಾವು ಹೇಳುವದನ್ನು ಕಲಿತರೂ ಅವರೂ 'ನಿಜ: ನೀವು ನನ್ನ ಮನಸ್ಸಿನಲ್ಲಿರುವ ಆಲೋಚನೆಯನ್ನು ಸರಿಯಾಗಿ ಹೇಳುತ್ತೀರಿ' ಎಂದು ಒಪ್ಪಬಹುದು. ಆದರೆ ನಮ್ಮ ಮನಸ್ಸಿನ ಸ್ವಭಾವವನ್ನು ನಾವು ನೇರಾಗಿ ಪರೀಕ್ಷಿಸಿ ತಿಳಿದುಕೊಳ್ಳುವಂತೆ ಮತ್ತೊಬ್ಬರ ಮನಸ್ಸನ್ನು ನಾವು ತಿಳಿದುಕೊಳ್ಳುವದಕ್ಕೆ ಆದೀತೇನು ! ನಮ್ಮ ಎದುರಿಗೆ ಕುಳಿತಿರುವವರು ನಿಜವಾಗಿ ನಮ್ಮಮುಂದೆ ಕುಳಿತಿದ್ದಾರೊ,

ಅಥವಾ ಇದೆಲ್ಲ ಕನಸಿನಲ್ಲಿ ಆಗುವ ಕಲ್ಪನೆಗಳಂತೆ. ಬರಿಯ ಕಲ್ಪನೆಯೋ?–ಎಂಬ ಸಂಶಯವು ಎದ್ದುಕೊಂಡರೆ ಅವನ್ನು ಸಿದ್ಧಾಂತಮಾಡಿ ಹೇಳುವುದಕ್ಕೆ ನಮಗೆ ಯಾವ ಆಧಾರವಿದೆ ? ನಮ್ಮ ಸ್ವಂತವಿಚಾರದಲ್ಲಿ ಹೀಗಿಲ್ಲ. 'ನಾನು ಇಲ್ಲಿದ್ದೇನೆಯೊ, ಇಲ್ಲವೊ ? ನಾನು ನಾನೇಯೊ, ಅಲ್ಲವೊ ?' ಎಂಬುದುಂತಾಗಿ ಯಾರೊಬ್ಬರಿಗೂ ಎಂದಿಗೂ ಸಂಶಯವುಂಟಾಗುವಂತಿಲ್ಲ. ಭೌತಿಕಶಾಸ್ತ್ರವು ಪ್ರತ್ಯಕ್ಷಾನುಮಾನಗಳಿಂದ ಎಷ್ಟೇ ನಿಶ್ಚಿತವಾಗಿ ವಿಷಯಗಳನ್ನು ನಿರ್ಧರಿಸಿಕೊಟ್ಟರೂ ಅವಕ್ಕೆ ಗೋಚರವಾಗುವದೆಲ್ಲವೂ ಊಹೆಗೆ ವಿಷಯವಾಗಿಯೇ ಉಳಿದುಕೊಳ್ಳುತ್ತದೆ. ಅದಕ್ಕೆ ಅನುಮಿತಶರೀರ, ಅನುಮಿತಇಂದ್ರಿಯಗಳು, ಅನುಮಿತ ಮನಸ್ಸು–ಮುಂತಾದವುಗಳೇ ವಿಚಾರವಿಷಯ. ಅತೀಂದ್ರಿಯವಾದ ವಿಷಯಗಳನ್ನು ತಿಳಿಸಿಕೊಡುವ ವೇದರೂಪವಾದ ಶಾಸ್ತ್ರವು ಹಾಗಲ್ಲ. ಅದು ನೇರಾಗಿ ನನ್ನ ಶರೀರ, ನನ್ನ ಮನಸ್ಸು, ನನ್ನ ಬುದ್ಧಿ– ಮುಂತಾದವುಗಳನ್ನೇ ನನಗೆ ನೇರಾಗಿ ಅನುಭವಕ್ಕೆ ಬರುವ ವಿಷಯಗಳನ್ನೇ ಕುರಿತು ಉಪದೇಶಿಸುತ್ತದೆ. ಅದು ನನಗೆ ಆಗಬೇಕಾಗಿರುವ ಪುರುಷಾರ್ಥವನ್ನು ಕುರಿತೇ ಹೇಳಿರುವುದರಿಂದ ನನ್ನ ಅನುಭವದ ಒರೆಗಲ್ಲಿಗೆ ತಿಕ್ಕಿಯೇ ಅದರ ತತ್ತ್ವವನ್ನು ನಿರ್ಧರಿಸಬಹುದಾಗಿರುತ್ತದೆ. ಆದ್ದರಿಂದಲೇ ಅವಕ್ಕೆ **"ವೇದ"**ವೆಂಬ ಅನ್ವರ್ಥವಾದ ಹೆಸರು ಬಂದಿರುತ್ತದೆ.

ಶ್ರೀಕೃಷ್ಣಭಗವಂತನು 'ಮನುಷ್ಯನನ್ನು ಪಾಪಕ್ಕೆಳಸುವಂತೆ ಮಾಡುವದು ಕಾಮವೇ ಕ್ರೋಧವೇ" ಎಂದು ಬೋಧಿಸಿದಾಗ ಅರ್ಜುನನಿಗೆ 'ಅದು ನಿಜ. ಕಾಮಕ್ರೋಧಗಳಿಗೆ ವಶನಾಗಿಯೇ ನಾನು ಮಾಡಬಾರದ್ದನ್ನು ಮಾಡುವದಕ್ಕೆ ಸಿದ್ಧನಾಗಿರುತ್ತೇನೆ. ಭಗವಂತನು ಹೇಳಿದಂತೆ ಈ ಕಾಮವು ನನ್ನ ಇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ಕಲಕಿ ದುಷ್ಕೃತ್ಯಕ್ಕೆ ಕೈಹಾಕುವಂತೆ ಮಾಡುತ್ತದೆ– ಎಂಬುದು ನಿಶ್ಚಯ. ಆತನು ಹೇಳಿರುವಂತೆ ರಾಗದ್ವೇಷಗಳಿಗೆ ವಶನಾಗದೆ ಇದ್ದರೆ, ಪ್ರತಿಪಕ್ಷಭಾವನೆಯನ್ನು ಮಾಡುತ್ತಾಹೋದರೆ ಕಾಮವನ್ನು ಜಯಿಸಬಹುದೆಂಬುದೂ ನಿಜ' ಎಂಬುದು ನೇರಾಗಿ ಗೊತ್ತಾಗಿಬಿಡುವಂತಿತ್ತು. ಇದೇ ಶಾಸ್ತ್ರದೃಷ್ಟಿಯು ಅವಲಂಬನೆಯಲ್ಲಿರುವ ವಿಶೇಷ. ಅರ್ಜುನನು ಶೋಕಮೋಹಗಳಿಗೆ ತುತ್ತಾಗಿ 'ಯುದ್ಧವನ್ನು ಮಾಡಲೊಲ್ಲೆನು' ಎಂದು ಗಾಂಡೀವವನ್ನು ಕೆಳಕ್ಕೆ ಹಾಕಿದಾಗ ಶ್ರೀಕೃಷ್ಣನು **'ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ !'** ಶೋಚ್ಯರಲ್ಲದವರ ಬಗ್ಗೆ– ಎಂದರೆ ಭೀಷ್ಮದ್ರೋಣಾದಿಗಳ ವಿಷಯದಲ್ಲಿ 'ನೀನು ಶೋಕಿಸುತ್ತಿರುವೆ ! ಪ್ರಜ್ಞಾವಂತರಾಡುವ ಮಾತುಗಳನ್ನೂ ಆಡುತ್ತಿದ್ದೀಯೆ' ಎಂದು ಅದರ ಮಹಾತ್ಮ್ಯವನ್ನು ತೋರಿಸಿಕೊಟ್ಟು ಆತ್ಮತತ್ತ್ವವನ್ನು ಬೋಧಿಸುವದಕ್ಕಾರಂಭಿಸಿದಾಗ ಅರ್ಜುನನ

ನಿಗೆ ಲೌಕಿಕದೃಷ್ಟಿಯು ಪರಿಚ್ಛಿನ್ನತೆಯೂ ಶಾಸ್ತ್ರದೃಷ್ಟಿಯ ವೈಶಾಲ್ಯವೂ ಮನದಟ್ಟಾಯಿತು.

ಶಾಸ್ತ್ರವನ್ನು ಈಗ ಬಹುಜನರು ಕಡೆಗಣಿಸುತ್ತಿರುವದಕ್ಕೆ ಪ್ರತ್ಯಕ್ಷಪ್ರಧಾನವಾದ ಭೌತಿಕವಿಜ್ಞಾನದಲ್ಲಿಯೇ ಹೆಚ್ಚಿನ ಶ್ರದ್ಧೆಯಿರುವದೇ ಕಾರಣ. ಸಕಲ ವ್ಯವಹಾರಗಳಿಗೂ ವಿಜ್ಞಾನಶಾಸ್ತ್ರದ ಬಲದಿಂದ ಕಂಡುಹಿಡಿದಿರುವ ಸಾಧನಗಳು ಆವಶ್ಯಕವಾಗಿರುವದರಿಂದ ಜನರಿಗೆ ಭೌತಿಕವಿಜ್ಞಾನದಲ್ಲಿ ಗೌರವವು ಹೆಚ್ಚಾಗಿರುವದು ಸ್ವಾಭಾವಿಕವೇ ಆಗಿರುತ್ತದೆ. ಶಿಷ್ಟಸಂಪ್ರದಾಯದಿಂದ ನಮ್ಮಲ್ಲಿ ಅನುಗತವಾಗಿರುವ ಆಚಾರಗಳನ್ನು ಆಸ್ತಿಕರ ಕುಲದಲ್ಲಿ ಹುಟ್ಟಿರುವವರುಕೂಡ 'ಶಾಸ್ತ್ರಕ್ಕೆ ಹೀಗೆ ಮಾಡುತ್ತೇವೆ' ಎಂದುಕೊಳ್ಳುತ್ತಾ ಹೇಗೋ ನಡೆಯಿಸಿಕೊಂಡುಬರುತ್ತಿದ್ದಾರೆ. ಒಂದು ಪರೀಕ್ಷಾಕಾಲದಲ್ಲಿ ಅರ್ಜುನನಿಗೆ ಧರ್ಮದಲ್ಲಿ ಹೆಚ್ಚಿನ ಔತ್ಸುಕ್ಯವೂ ಶ್ರದ್ಧೆಯೂ ಉಂಟಾದಂತೆ ಅವರಿಗೂ ಸತ್ಪುರುಷರ ಉಪದೇಶದಿಂದ ವೇದಶಾಸ್ತ್ರ ಪುರಾಣಾದಿಶ್ರವಣದಲ್ಲಿ ಶ್ರದ್ಧಾಪೂರ್ವಕವಾದ ಪ್ರವೃತ್ತಿಯುಂಟಾಗಬೇಕಾಗಿ ಬಂದಿದೆ.

ನಚಿಕೇತನು ಮೃತ್ಯುದೇವತೆಯು ತನಗೆ ಕೊಟ್ಟ ವರಗಳಲ್ಲಿ ಮೂರನೆಯದಾದ ವರವನ್ನು ಹೀಗೆ ಕೇಳಿಕೊಂಡನು ; 'ಈ ಶರೀರವನ್ನು ಬಿಟ್ಟು ಜನ್ಮಾಂತರ ಸಂಬಂಧವನ್ನು ಪಡೆಯುವ ಆತ್ಮನೊಬ್ಬನು ಇದಾನೆಂದು ಕೆಲವರು, ಅವನು ಇಲ್ಲವೆಂದು ಕೆಲವರು'– ಹೀಗೆ ಜನರ ಅಭಿಪ್ರಾಯಭೇದಗಳಿರುವದರಿಂದ ಮನುಷ್ಯನ ನಿಜವಾದ ಸ್ವರೂಪದ ಬಗೆಗೆ ಸಂಶಯವುಂಟಾಗಿರುತ್ತದೆ. ಶರೀರೇಂದ್ರಿಯಮನೋಬುದ್ಧಿಗಳಿಗಿಂತ ವ್ಯತಿರಿಕ್ತನಾದ ಆತ್ಮನೊಬ್ಬನು ನಿಜವಾಗಿ ಇದಾನೆಯೆ, ಇಲ್ಲವೆ ? –ಎಂಬುದನ್ನು ನಿಃಸಂಶಯವಾಗಿ ನನಗೆ ಹೇಳಿಕೊಡು !' (ಕಾ. ೧–೨೦) ಇದಕ್ಕೆ ಯಮನು ಕೊಟ್ಟ ಉತ್ತರವೇನೆಂದರೆ :

**ನ ಸಾಂಪರಾಯಃ ಪ್ರತಿಭಾತಿ ಬಾಲಂ**
**ಪ್ರಮಾದ್ಯಂತಂ ವಿತ್ತ ಮೋಹೇನ ಮೂಢಮ್ ।**
**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ**
**ಪುನಃ ಪುನರ್ವಶಮಾಪದ್ಯತೇ ಮೇ ॥ ಕಾ. ೨–೬.**

"ನಾವು ಸತ್ತಬಳಿಕ ಹೋಗಿ ಸೇರಬೇಕಾದ ಪರಲೋಕವೊಂದಿದೆ –ಎಂಬುದು ಅವಿವೇಕಿಯಾದ ಮೂಢನ ಮನಸ್ಸಿನಲ್ಲಿ ಮಿಂಚುವದೇ ಇಲ್ಲ ; ಏಕೆಂದರೆ ಅವನು ಹೆಂಡಿರುಮಕ್ಕಳು, ದನಕರುಗಳು, ಮನೆಮಠ– ಮುಂತಾದವುಗಳಲ್ಲಿಯೇ ನೆಟ್ಟ ಮನಸ್ಸಿನಿಂದ ಮೋಹಿತನಾಗಿರುತ್ತಾನೆ. 'ಈ ಲೋಕವೊಂದೇ ಲೋಕವು, ಪರಲೋಕವೆಂಬುದೇ ಇಲ್ಲ' ಎಂದುಕೊಂಡು ಇಲ್ಲಿಯ ಭೋಗ್ಯವಸ್ತುಗಳಲ್ಲಿಯೇ

ಅಜ್ಞಾನಿಯೇ ಶಬ್ದಸ್ಪರ್ಶಾದಿವಿಷಯಗಳಿಂದ ಅವನು ಮತ್ತೆಮತ್ತೆ ನನ್ನ ವಶಕ್ಕೆ ಬರುತ್ತಿರುವನು" ಎಂದು ಯಮನು ನಚಿಕೇತನಿಗೆ ನುಡಿದಿರುತ್ತಾನೆ. ಇದರಿಂದಾಗಿ

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ
ಸ್ಥಾಣುಮನ್ಯೇಽನುಸಂಯಂತಿ ಯಥಾ-ಕರ್ಮ ಯಥಾ ಶ್ರುತಮ್ ॥
ಕಾ. ೫-೭

'ಕೆಲವುಜನ ಅಜ್ಞರು, ಶುಕ್ಲಶೋಣಿತಗಳಿಂದಾದ ಶರೀರವನ್ನು ಪಡೆಯುವದಕ್ಕಾಗಿ ತಾಯಿಯ ಹೊಟ್ಟೆಯನ್ನು ಮತ್ತೆಮತ್ತೆ ಹೊಗುತ್ತಿರುವರು ; ಇನ್ನು ಕೆಲವರು ಗಿಡಮರಗಳೇ ಮುಂತಾದ ಸ್ಥಾವರಜನ್ಮವನ್ನು ಪಡೆಯುತ್ತಿರುವರು. ಯಾರು ಯಾರು ಎಂಥ ಕರ್ಮವನ್ನು ಮಾಡಿರುವರೋ, ಎಂಥ ಉಪಾಸನೆಯಿಂದ ಯುಕ್ತರಾಗಿರುವರೋ– ಅಂಥ ಕರ್ಮಜ್ಞಾನಗಳಿಗೆ ಅನುಸಾರವಾಗಿ ಬೇರೆಬೇರೆಯ ಶರೀರವನ್ನು ಪಡೆಯುತ್ತಿರುವರು.

ಧರ್ಮಾಧರ್ಮಗಳ ಅಂಜಿಕೆಯಿಲ್ಲದವರಿಗೆ ಮತ್ತೆಮತ್ತೆ ಶರೀರಗ್ರಹಣರೂಪವಾದ ಸಂಸಾರವು ತಪ್ಪಿದ್ದಲ್ಲ. ಅವರಿಗೆ ಈ ಲೋಕಕ್ಕಿಂತ ಬೇರೆಯಾದ ಪರಲೋಕವೊಂದಿದೆ ಎಂಬ ವಿಚಾರವು ಮನಸ್ಸಿಗೆ ಹೊಳೆಯುವದೇ ಇಲ್ಲ. ಪರಲೋಕವೊಂದಿದೆ, ಜನ್ಮಾಂತರವುಂಟು– ಎಂಬ ಶ್ರದ್ಧೆಯುಂಟಾಗುವದು ಪುಣ್ಯದ ಫಲವೇ ಸರಿ. ಜನ್ಮಾಂತರದ ಸ್ಮರಣೆಯುಳ್ಳವರನೇಕರ ದೃಷ್ಟಾಂತಗಳನ್ನು ವರ್ಣಿಸಿ ಬೇರೆಬೇರೆಯ ಲೇಖಕರು ಬರೆದ ಒಂದು ಪುಸ್ತಕವನ್ನು ಡಾ|| ರಾಧಾಕೃಷ್ಣನ್ ರವರಿಗೆ ವಿದೇಶಿಯರು ಸಮರ್ಪಿಸಿದರೆಂಬುದನ್ನು ನಾನು ಒಂದು ಇಂಗ್ಲಿಷು ಪತ್ರಿಕೆಯಲ್ಲಿ ಓದಿರುತ್ತೇನೆ. ಗೋರಖಪುರದಲ್ಲಿ ಪ್ರಕಟವಾಗುತ್ತಿರುವ ಹಿಂದಿ ಕಲ್ಯಾಣಪತ್ರಿಕೆಯಲ್ಲಿಯೂ ಇಂಥ ಹಲವು ದೃಷ್ಟಾಂತಗಳನ್ನು ಕುರಿತು ಬರೆದ ಲೇಖನಗಳನ್ನು ಓದಿರುತ್ತೇನೆ. ಸದ್ಯಕ್ಕೆ ನಾವು ನಮ್ಮನಮ್ಮ ಕನಸಿನ ಅನುಭವವನ್ನು ಮನದಂದುಕೊಂಡರೇ ಜನ್ಮಾಂತರಪರಲೋಕಗಳಿರುವದು ಅಸಂಭಾವಿತವಲ್ಲವೆಂಬುದನ್ನು ಮನವರಿಕೆಮಾಡಿಕೊಳ್ಳಬಹುದಾಗಿರುತ್ತದೆ. ಏಕೆಂದರೆ ಈಗಿರುವ ಶರೀರೇಂದ್ರಿಯಸಂಘಾತದ ಹಂಗೇ ಇಲ್ಲದೆ ತೋರಿಕೆಯ ಶರೀರಾದಿಗಳನ್ನು ಪಡೆದುಕೊಂಡು, ತೋರಿಕೆಯ ಪ್ರಾಣಿಗಳೂ ಮನುಷ್ಯರೂ ಇದ್ದು ವ್ಯವಹರಿಸುವ ಒಂದು ಪ್ರಪಂಚದಲ್ಲಿ ನಾವು ಒಂದೊಂದು ಕನಸಿನಲ್ಲಿಯೂ ಸುಖದುಃಖಗಳನ್ನು ಅನುಭವಿಸುತ್ತಿರುವದು ನಮಗೆಲ್ಲರಿಗೂ ನಿತ್ಯಾನುಭವದಲ್ಲಿರುತ್ತದೆಯಲ್ಲವೆ? ಆಗ ಆಧ್ಯಾತ್ಮಿಕ, ಆಧಿಭೌತಿಕ; ಆಧಿದೈವಿಕ– ಎಂದು ವಿಂಗಡಿಸಿಕೊಂಡಿರುವ ಪ್ರಪಂಚವು ಸಂಪೂರ್ಣವಾಗಿ ಒರಸಿಹಾಕಿದಂತೆ ಇಲ್ಲವಾಗಿ ಇದರ ಪ್ರತಿಕೃತಿಯಂತೆ ಇರುವ ಮತ್ತೊಂದು ಲೋಕವೇ ನಮಗೆ ಕಾಣಿಸಿಕೊಳ್ಳುತ್ತದೆಯಷ್ಟೆ?

ಹೀಗೆಯೇ ನಮಗೆ ಎಳ್ಳಷ್ಟೂ ಈಗ ಅನುಭವದಲ್ಲಿಲ್ಲದ ಮತ್ತೊಂದು ಲೋಕವು ಇರುವುದೆಂದು ಶಾಸ್ತ್ರಾಧಾರದಿಂದ ನಂಬುವುದಕ್ಕೆ ಅಡ್ಡಿಯೇನಿದೆ ?

ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣ ಪರಮಹಂಸರ ಬಳಿಗೆ ಬರುವ ಮುನ್ನ ಅವರನ್ನು 'ನರೇನ್' ಎಂಬ ಹೆಸರಿನಿಂದ ಜನರು ವ್ಯವಹರಿಸುತ್ತಿದ್ದರು. ಆಗ ಅವರಿಗೆ ಯಾವ ಆಧ್ಯಾತ್ಮಿಕವಿಷಯಗಳಲ್ಲಿಯೂ ನಂಬಿಕೆಯಿರಲಿಲ್ಲ. ಯಾರಾದರೂ ಈಶ್ವರ, ಪುಣ್ಯ, ಪಾಪ – ಮುಂತಾದ ಅತೀಂದ್ರಿಯತತ್ತ್ವಗಳನ್ನು ಕುರಿತು ಉಪನ್ಯಾಸಮಾಡುತ್ತಿದ್ದರೆ ಉಪನ್ಯಾಸಕರ ವೇದಿಕೆಯ ಬಳಿಗೆ ಬಂದು 'ನೀವು ಈಶ್ವರನನ್ನು ಕಂಡಿದ್ದೀರೊ ?' ಎಂದು ಕೇಳುತ್ತಿದ್ದರಂತೆ. ಎಂಥ ವಾಗ್ಮಿಯಾದ ಭಾಷಣಕಾರನೇ ಆಗಲಿ, ಕೇವಲ ಗ್ರಂಥಾಧಾರದಿಂದ ಮಾತನಾಡುವವರಾದ್ದರಿಂದ 'ನಾನೇನೋ ಕಂಡಿಲ್ಲ ; ಆದರೆ ಶಾಸ್ತ್ರಗಳಲ್ಲಿ ಈಶ್ವರನಿದಾನೆಂದು ಬರೆದಿದೆ. ದೊಡ್ಡವರೂ ಹಾಗೆಂದೇ ಬೋಧಿಸುತ್ತಿದಾರೆ. ಆದ್ದರಿಂದ ನಾನೂ ಜನರಿಗೆ ಅವನು ಇದಾನೆಂದೇ ಹೇಳುತ್ತಿದ್ದೇನೆ' ಎಂದು ಒಪ್ಪಿಕೊಳ್ಳುತ್ತಿದ್ದರು. 'ಹಾಗಾದರೆ ಇಷ್ಟೊಂದು ಭರದಿಂದ ಬರಿಯ ಬಾಯಿಬ್ರಹ್ಮವನ್ನು ಘೋಷಣೆಮಾಡುತ್ತೀರೇಕೆ? ನೀವು ಹೇಳುವದು ಸತ್ಯವೆನ್ನುವದಕ್ಕೆ ಯಾವ ಪ್ರಮಾಣವನ್ನು ಕೊಡಬಲ್ಲಿರಿ?' ಎಂದು ಆ ಉಪನ್ಯಾಸಕರನ್ನು ನರೇಂದ್ರರು ಜರಿದು ಹಂಗಿಸುತ್ತಿದ್ದರು. ಒಮ್ಮೆ ಅವರು ಶ್ರೀರಾಮಕೃಷ್ಣ ಪರಮಹಂಸರ ಬಳಿಗೆ ಬಂದಾಗ ಅವರೂ ಶ್ರೋತೃಗಳಿಗೆ ತತ್ತ್ವಬೋಧನೆಯನ್ನು ಮಾಡುತ್ತಿರುವದನ್ನು ಕಂಡು 'ನೀವು ದೇವರನ್ನು ಕಂಡಿದ್ದೀರೊ?' ಎಂದು ಕೇಳಲಾಗಿ ಆ ಮಹಾತ್ಮರು 'ಹೌದು, ನೋಡಿದ್ದೇನೆ. ನಿನ್ನನ್ನು ಕಾಣುವದಕ್ಕಿಂತಲೂ ಸ್ಫುಟತರವಾಗಿ ಕಾಣುತ್ತಿದೇನೆ ; ಬೇಕಾಗಿದ್ದರೆ ನಿನಗೂ ತೋರಿಸುತ್ತೇನೆ' ಎಂದರು. ಆಗ ನರೇಂದ್ರನ ಗರ್ವವು ಮಾಯವಾಯಿತು. ಭರ್ತೃಹರಿಯು :

**ಯದಾ ಕಿಞ್ಚಿಜ್ಞೋಽಹಂ ಗಜ ಇವ ಮದಾನ್ಧಃ ಸಮಭವಂ**
**ತದಾ ಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನಃ ।**
**ಯದಾ ಕಿಞ್ಚಿತ್ ಕಿಞ್ಚಿತ್ ಬುಧಜನಸಕಾಶಾದವಗತಂ**
**ತದಾ ಮೂರ್ಖೋಽಸ್ಮೀತಿ ಜ್ವರ ಇವ ಮದೋ ಮೇ ವ್ಯಪಗತಃ ॥**

ಎಂದಿರುವಂತೆ ಆಧುನಿಕವಿದ್ಯಾಮದದಿಂದ ಉಬ್ಬಿದ್ದ ಆ ತರುಣನಿಗೆ 'ಇನ್ನೂ ನಾನು ಅರಿತುಕೊಳ್ಳದೆ ಇರುವ ವಿಷಯಗಳು ಈ ವೃದ್ಧರಲ್ಲಿವೆ' ಎಂಬ ಅರಿವಾಯಿತು.

ಅತೀಂದ್ರಿಯವಾದ ಪ್ರಪಂಚವೊಂದಿದೆ. ಅದನ್ನು ಅರಿಯುವದಕ್ಕೆ ಅತೀಂದ್ರಿಯವಾದ ಸಾಧನವು ಬೇಕು. ಇಂದ್ರಿಯಗಳು ವರ್ತಮಾನಕಾಲದಲ್ಲಿರುವ ವಿಷಯವನ್ನು ಮಾತ್ರ ಬೆಳಗಬಲ್ಲವಾದರೂ ಮನಸ್ಸೆಂಬ ದೈವಚಕ್ಷುವಿಗೆ ಮೂರು

ಕಾಲವಲ್ಲಿರುವ ವಿಷಯಗಳೂ ಗೋಚರವಾದಾವು. ಸಂಸ್ಕೃತವಾದ ಮನಸ್ಸು ಅತೀಂದ್ರಿಯವಸ್ತುಗಳನ್ನು ತೋರಿಸಿಕೊಡುವ ಸಾಧನವಾಗಿರುತ್ತದೆ.

**ಪರಾಚಃ ಕಾಮಾನನುಯಂತಿ ಬಾಲಾಸ್ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ । ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥ ಕಾ. ೪-೨**

ಶಾಸ್ತ್ರವು ಲೌಕಿಕರಾದ ನಮ್ಮಗಳನ್ನು 'ಬಾಲರು' ಹುಡುಗರು-ಎನ್ನುತ್ತದೆ ; ಏಕೆಂದರೆ ನಾವು ಹೊರಗಿನ ಕಾಮ್ಯವಿಷಯಗಳ ಬೆನ್ನುಹತ್ತಿ, ಅವರ ನಿಮಿತ್ತದಿಂದ-ಹರಡಿದ ಬಲೆಯಮೇಲೆ ಉದುರಿಸಿದ್ದ ಅಕ್ಕಿಕಾಳುಗಳ ಲೋಭದಿಂದ ಹಾರಿ ಬಂದು ಸಿಕ್ಕಿಕೊಂಡ ಚಿತ್ರಗ್ರೀವಾದಿಕಪೋತಗಳಂತೆ- ಮತ್ತೆಮತ್ತೆ ಮೃತ್ಯುವು ಹರಡಿರುವ ಬಲೆಗೆ ಬೀಳುತ್ತಿರುವೆವು. ಆದರೆ ಅಮೃತತ್ವವೊಂದಿದೆ ಎಂದು ಅರಿತಿರುವ ವಿವೇಕಿಗಳು ಅನಿತ್ಯವಾದ ಈ ವಿಷಯಗಳಲ್ಲಿ ಧ್ರುವವಾದ ಪುರುಷಾರ್ಥವು ಸಿಕ್ಕೀತೆಂದು ಭಾವಿಸಿ ಹಂಬಲಿಸುವದಿಲ್ಲ- ಎಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ. ವಿವೇಕಿಗಳು ಶಾಸ್ತ್ರದೃಷ್ಟಿಯನ್ನೇ ಆಶ್ರಯಿಸಿಕೊಂಡು ರಾಗದ್ವೇಷಗಳ ಪ್ರತಿಪಕ್ಷವನ್ನು ಭಾವಿಸಿ ಪರಮಪುರುಷಾರ್ಥವನ್ನು ಪಡೆದುಕೊಳ್ಳುವದಕ್ಕೆ ಹವಣಿಸುತ್ತಾರೆ.

ಪ್ರಾತಃಕಾಲದಲ್ಲಿ ಎದ್ದಾಗ ಯಾರಾದರೂ ಮುಂದೆ ಬರಲಿರುವ ಸುಖದುಃಖಹೇತುಗಳನ್ನು ಪ್ರಾಕೃತಜನರು ಮನಸ್ಸಿಗೆ ತಂದುಕೊಳ್ಳುವದು ರೂಢಿಯಲ್ಲಿದೆ. **'ಹರ್ಷಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ । ದಿವಸೇ ದಿವಸೇ ಮೂಢಮಾವಿಶನ್ತಿ ನ ಪಣ್ಡಿತಮ್ ॥'** ಹರ್ಷಕ್ಕೆ ಕಾರಣವಾಗಿರುವ ಸಾವಿರಾರು ವಿಷಯಗಳ ಚಿಂತೆಯೂ ಶೋಕಕ್ಕೆ ಕಾರಣವಾಗಿರುವ ನೂರಾರು ವಿಷಯಗಳ ಚಿಂತೆಯೂ ಪ್ರತಿದಿನವೂ ಮೂಢನ ಮನಸ್ಸಿನಲ್ಲಿ ಹೊಗುವವು, ಪಂಡಿತನಿಗೆ ಅವುಗಳ ಚಿಂತೆಯು ಬರುವದಿಲ್ಲ- ಎಂದು ಭಾರತದಲ್ಲಿ ಮತ್ತೆಮತ್ತೆ ಹೇಳಿರುತ್ತದೆ. ಭಾರತಸಾವಿತ್ರಿಯೆಂಬ ಹೆಸರಿನಿಂದ ವ್ಯಾಸರು ತಮ್ಮ ಪುತ್ರರಾದ ಶುಕರಿಗೆ ಬೋಧಿಸಿದಂತೆ ಬರೆದಿರುವ ಶ್ಲೋಕಗಳನ್ನು ಅರ್ಥಾನುಸಂಧಾನಪೂರ್ವಕವಾಗಿ ಹೇಳಿಕೊಳ್ಳುವ ಪದ್ಧತಿಯನ್ನು ಇಟ್ಟುಕೊಳ್ಳುವದು ಶ್ರೇಯಸ್ಕರವಾಗಿರುತ್ತದೆ.

**ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ ।**
**ಸಂಸಾರೇಷ್ವನುಭೂತಾನಿ ಯಾನ್ತಿ ಯಾಸ್ಯನ್ತಿ ಚಾಪರೇ ॥ ೧ ॥**

**ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।**
**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥ ೨ ॥**

ನ ಜಾತು ಕಾಮಾನ್ನ ಭಯಾನ್ನ ಲೋಭಾದ್
ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ ।
ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ
ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ॥ ೩ ॥

ಮಹಾಭಾರತ ಸ್ವರ್ಗ ೫–೬೦, ೬೩

ಸಂಸಾರದ ತೊಳಲುವಿಕೆಗಳಲ್ಲಿ ಸಾವಿರಾರು ಮಂದಿ ತಂದೆತಾಯಿಗಳಾಗಿ ಸತೀಪುತ್ರರಾಗಿ ಈಗಲೂ ಬಂದಿರುತ್ತಾರೆ, ಮುಂದೆಯೂ ಬಂದುಹೋಗುವರು–ಎಂಬುದನ್ನು ನೆನಪಿಗೆ ತಂದುಕೊಳ್ಳುತ್ತಿರಬೇಕು. ವ್ಯಾಸರು ಸಂಸಾರಿಗಳನ್ನು ಕುರಿತು ಮರುಕದಿಂದ ಸಾರಿಹೇಳುತ್ತಿರುವದೇನೆಂದರೆ : ಎರಡು ಕೈಗಳನ್ನೂ ಎತ್ತಿ ಕೂಗಿಕೂಗಿ ಹೇಳುತ್ತಿದ್ದೇನೆ ; ಧರ್ಮದಿಂದ ಅರ್ಥವೂ ಕಾಮವೂ ಲಭಿಸುವದು ; ಹೀಗಿರುವಲ್ಲಿ ಅದನ್ನೇತಕ್ಕೆ ಸೇವಿಸದೆ ಇರುವಿರಿ ? ಕಾಮಪೂರ್ತಿಗಾಗಿ ಎಂದಿಗೂ ಧರ್ಮವನ್ನು ಬಿಡಬಾರದು ; ಎಂತಹ ಅಂಜಿಕೆಯಿಂದಲೂ ಧರ್ಮವನ್ನು ಬಿಡಬಾರದು, ಅತ್ಯಾಶೆಯಿಂದ ನಮ್ಮ ವಶದಲ್ಲಿರುವ ವಸ್ತುಗಳು ಹೋದಾವೆಂಬ ಜಿಪುಣತನದಿಂದಲೂ ಧರ್ಮವನ್ನು ಬಿಡಬಾರದು. ಹೆಚ್ಚೇಕೆ? ನಮ್ಮ ಪ್ರಾಣವೇ ಹೋಗುವಂತಿದ್ದರೂ ಅದರ ರಕ್ಷಣೆಗಾಗಿ ಧರ್ಮವನ್ನು ಕೈಬಿಡಬಾರದು. ಏಕೆಂದರೆ ಧರ್ಮವು ನಿತ್ಯ, ನಮಗೆ ಬರುತ್ತಿರುವ ಸುಖದುಃಖಗಳು ಅನಿತ್ಯ ; ಜೀವನು ನಿತ್ಯ, ಜೀವತ್ವದ ಹೇತುವು ಅನಿತ್ಯ. ಆದ್ದರಿಂದ ನಿತ್ಯವಾದ ಧರ್ಮವನ್ನು ಪುರುಷಾರ್ಥಕ್ಕೆ ಅಧಿಕಾರಿಯಾದ ಜೀವನು ಅನಿತ್ಯವಾದ ಸುಖದುಃಖನಿಮಿತ್ತಗಳಿಂದ ಕೈಬಿಡಬಾರದು.

ಧರ್ಮಾಧರ್ಮಗಳ ತಾರತಮ್ಯವನ್ನು ತೂಗಿನೋಡಿ ಧರ್ಮವನ್ನೇ ಸ್ವೀಕರಿಸುವದು ಯುಕ್ತ. ಜಾಜಲಿಯೆಂಬುವನು ತುಲಾಧಾರನೆಂಬ ವೈಶ್ಯನ ಬಳಿಗೆ ಬಂದು ಧರ್ಮತತ್ತ್ವವನ್ನು ಅರಿತುಕೊಂಡು ಕೃತಕೃತ್ಯನಾದನೆಂಬ ಮಹಾಭಾರತದಲ್ಲಿರುವ ಆಖ್ಯಾನವನ್ನು ಓದಿನೋಡಬೇಕು. ಧರ್ಮಕ್ಕಾಗಿ ವಿವೇಕಿಗಳು ಎಷ್ಟು ಕಷ್ಟಪಟ್ಟು ಅದರ ಮರ್ಮವನ್ನು ಅರಿತುಕೊಳ್ಳುತ್ತಾರೆ–ಎಂಬುದು ಆಗ ಮನದಟ್ಟಾಗುವದು. ಅತೀಂದ್ರಿಯವಾದ ಧರ್ಮಾಧರ್ಮಗಳ ತತ್ತ್ವವನ್ನು ತಿಳಿಯುವದಕ್ಕೆ ಶಾಸ್ತ್ರವೇ ಸಾಧನವೆಂಬುದನ್ನು ನಂಬಿ ಶಾಸ್ತ್ರಜ್ಞಾನದ ಸಂಪಾದನೆಗೆ ಪ್ರಯತ್ನವನ್ನು ಮಾಡಬೇಕು. ಅಧರ್ಮದಿಂದ ಆಗುವ ಕ್ಷಣಿಕಸುಖಕ್ಕೆ ಮನಸೋತು ದುರಾಚಾರಕ್ಕೆ ಬೀಳಬಾರದು. ಬರಿಯ ಶಾಸ್ತ್ರಾಭ್ಯಾಸದಿಂದ ಮನುಷ್ಯನಿಗೆ ಎಂದಿಗೂ ಧರ್ಮಫಲವು ದೊರಕಲಾರದು.

ಆಚಾರಹೀನಂ ನ ಪುನನ್ತಿ ವೇದಾಃ
ಯದ್ಯಪ್ಯಧೀತಾ ಸಹ ಷಡ್ಭಿರಙ್ಗೈಃ ।

ಛನ್ದಾಂಸ್ಯೇನಂ ಮೃತ್ಯುಕಾಲೇ ತ್ಯಜನ್ತಿ
ನೀಡಂ ಶಕುನ್ತಾ ಇವ ಜಾತಪಕ್ಷಾಃ ॥

ದುರಾಚಾರೋ ಹಿ ಪುರುಷೋ ಲೋಕೇ ಭವತಿ ನಿನ್ದಿತಃ ।
ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ

ವಸಿಷ್ಠಸ್ಮೃತಿ ೬–೪, ೬

ಸಾಂಗವಾಗಿ ಅಧ್ಯಯನವನ್ನು ಮಾಡಿದ್ದರೂ ಆಚಾರಹೀನನಾಗಿದ್ದರೆ ಅವನನ್ನು ವೇದಗಳು ಪವಿತ್ರಗೊಳಿಸಲಾರವು. ರೆಕ್ಕೆಬಂದ ಹಕ್ಕಿಗಳು ಗೂಡನ್ನು ಬಿಟ್ಟು ಹಾರಿಹೋಗುವಂತೆ, ಮರಣಕಾಲದಲ್ಲಿ ವೇದಗಳೆಲ್ಲವೂ ಅವನನ್ನು ಕೈಬಿಡುವವು. ದುರಾಚಾರರತನಾದವನು ಲೋಕನಿಂದಿತನಾಗುವನು, ದುಃಖಭಾಗಿಯಾಗುವನು, ರೋಗಿಯಾಗಿ ಅಲ್ಪಾಯುವಾಗುವನು—ಎಂಬ ವಸಿಷ್ಠಸ್ಮೃತಿಯನ್ನು ನಾವು ಸ್ಮರಿಸಿಕೊಳ್ಳುತ್ತಿರಬೇಕು.

## ೪. ಆಸ್ತಿಕ್ಯ

( 2–8–69 )

ಭೌತಿಕವಿಜ್ಞಾನಶಾಸ್ತ್ರದ ವಿಷಯವು ಪ್ರತ್ಯಕ್ಷಾನುಮಾನಪ್ರಮಾಣಗಳಿಗೆ ಸೀಮಿತವಾಗಿರುವದರಿಂದ ಅದರ ಕ್ಷೇತ್ರವು ಪರಿಚ್ಛಿನ್ನವಾಗಿರುವದೆಂಬುದನ್ನೂ ವೇದರೂಪವಾದ ಶಾಸ್ತ್ರದ ಕ್ಷೇತ್ರವು ಅತೀಂದ್ರಿಯವಾದ ತತ್ತ್ವಗಳನ್ನು ಒಳಗೊಂಡಿರುವದರಿಂದ ವಿಶಾಲವಾಗಿರುವದೆಂಬುದನ್ನೂ ತಿಳಿದುಕೊಂಡದ್ದಾಗಿದೆ.

ಈ ದಿನ ನಾನು ಆಸ್ತಿಕ್ಯವನ್ನು ಕುರಿತು ಮಾತನಾಡಬೇಕೆಂದಿರುತ್ತೇನೆ. ಬುದ್ಧಿಶಕ್ತಿಯಿಂದ ತಿಳಿದುಕೊಳ್ಳಬೇಕಾದ ವಿಷಯದ ಜೊತೆಗೆ ಶ್ರದ್ಧೆಯಿಂದ ವಿಚಾರಮಾಡಿ ನಿಶ್ಚಯಿಸಬೇಕಾದ ವಿಷಯಗಳೂ ಶಾಸ್ತ್ರಕ್ಕೆ ಸೇರಿರುತ್ತವೆ. ಇಂಥ ವಿಷಯಗಳು ಕೇವಲ ಬಾಲಪಾಠಗಳು ಎಂದು ಕೆಲವರು ಇವನ್ನು ಉಪೇಕ್ಷಿಸುವ ಸಂಭವವಿದೆ. ಈಗಿನ ಕಾಲಕ್ಕೆ ಅತಿಗಹನವಾದ ವೇದಾಂತವಿಚಾರಗಳನ್ನು ಅಡಕಮಾಡಿಕೊಂಡಿರುವ ಪುಸ್ತಕಗಳು ಅಚ್ಚಾಗಿಬಿಟ್ಟಿವೆ. ಅವನ್ನು ಓದಿ, ಅಷ್ಟರಿಂದಲೇ ನನಗೆ ಆ ವಿಷಯಗಳೆಲ್ಲವೂ ತಿಳಿದಿವೆಯೆಂದು ಜನರು ಭ್ರಾಂತಿ

ನನಿತ್ಯಾಂತರದಿಂದ ಒಬ್ಬ

ಮತ್ತೆ ಗೀತಾಭಾಷ್ಯದ ಇಂಗ್ಲಿಷು ಅನುವಾದವನ್ನು ನೋಡಲಾಗಿ, “ಶೀತೋಷ್ಣ ಎರಡೂ ವಿಕಾರಮಾತ್ರವೇ, ವಿಕಾರವು ಸ್ವರೂಪದಲ್ಲಿ ಮಾರ್ಪಡುತ್ತಲೇ ಇರುತ್ತದೆ ಎಂಬ ಭಾಷ್ಯವನ್ನು ಅನುವಾದಿಸುವಾಗ ವಿಕಾರವೆಂಬ ಶಬ್ದಕ್ಕೆ Change (ಮಾರ್ಪಾಡು) ಎಂಬ ಅರ್ಥವನ್ನು ಬರೆದಿದ್ದನ್ನು ಕಂಡೆನು. ಆಗತಾನೆ ನಾನು ಅಭ್ಯಾಸಮಾಡುವದಕ್ಕೆ ಹೊರಟಿದ್ದ ಭೌತಿಕವಿಜ್ಞಾನಗ್ರಂಥಗಳಲ್ಲಿ ಉಷ್ಣ ವೆಂಬುದು ವಸ್ತುವಲ್ಲ, ಅದೊಂದು ಶಕ್ತಿಮಾತ್ರವೇ ಎಂದಿದ್ದಂತೆ ನಿಷ್ಕರ್ಷಿಸಿ ಕೊಂಡಿದ್ದೆನು. ನಮ್ಮ ಪುರಾತನರೂ ಉಷ್ಣವೆಂಬುದು ವಿಕಾರಮಾತ್ರವೇ, ವಸ್ತುವಲ್ಲ–ಎಂದಿರುತ್ತಾರಾದ್ದರಿಂದ ‘ಅವರಿಗೂ ಆ ಕಾಲದಲ್ಲಿಯೇ ಪದಾರ್ಥಶಾಸ್ತ್ರ ಗಳ ಸ್ವರೂಪವಿಜ್ಞಾನವಿದ್ದಿತು’ ಎಂದು ನಾನು ತೀರ್ಮಾನಮಾಡಿಕೊಂಡು ಆಶ್ಚರ್ಯಪಟ್ಟೆನು. ಮುಂದೆ ನಾನು ಸಂಸ್ಕೃತಕಾವ್ಯದ ಪುಸ್ತಕವೊಂದನ್ನು ಕೊಳ್ಳುವದಕ್ಕೊಂದು ಪುಸ್ತಕವಿಕ್ರಯಸ್ಥಾನಕ್ಕೆ ಹೋದಾಗ ಅವರು ‘ಗೀತೆಯ ಶಾಂಕರಭಾಷ್ಯವು ತೆಲುಗಿನಲ್ಲಿ ಅಚ್ಚಾಗಿದೆ ; ಅದು ಬೇಕೆ ?’ ಎಂದು ಕೇಳಿದರು. ಪುಸ್ತಕಕ್ಕೆ ಎಂಟೇ ಅಣೆ ಬೆಲೆಯಾಗಿದ್ದದ್ದರಿಂದ ಕೂಡಲೆ ಅದನ್ನು ನಾನು ಕೊಂಡು ಕೊಂಡೆನು. ತಟ್ಟನೆ ಓದಲಾಗಿ ಕೆಲವು ವಾಕ್ಯಗಳಿಗೆ ಅರ್ಥವೂ ಆಯಿತು. ಅದ್ದರಿಂದ ‘ದಿನಕ್ಕೆ ಮೂರು ಶ್ಲೋಕಗಳನ್ನಾದರೂ ಓದಬೇಕು’ ಎಂದು ನನ್ನ ಧ್ಯೇಯವನ್ನು ಅದರಲ್ಲಿ ಬರೆದುಕೊಂಡೆನು. ಮುಂದೆ ಒಬ್ಬ ಮಹನೀಯರ ಸಹವಾಸದಿಂದ ನನಗೆ ಸಾಮಾನ್ಯಲೌಕಿಕವಿಜ್ಞಾನಕ್ಕೆ ನಿಲುಕದ ಎಷ್ಟೋ ವಿಷಯ ಗಳು ಗೀತೆಯಲ್ಲಿವೆ–ಎಂಬ ಅರಿವಾಯಿತು. ಆಗಿನಿಂದ ಇಂದಿನವರೆಗೂ ನಾನು ಗೀತೆಯನ್ನು ಅಭ್ಯಾಸಮಾಡಿದಂತೆಲ್ಲ ಅದರ ಅಭಿಪ್ರಾಯವನ್ನು ಹೆಚ್ಚುಹೆಚ್ಚು ಆಳವಾಗಿ ಹೊಕ್ಕು ತಿಳಿಯಬೇಕೆಂಬ ನಿಶ್ಚಯವಾಗಿದೆ. ಪುಸ್ತಕಗಳು ನಮ್ಮ ಬಳಿಯಿದ್ದಮಾತ್ರದಿಂದ, ಅಥವಾ ಅಲ್ಲಿಷ್ಟು ಇಲ್ಲಿಷ್ಟು–ವೃತ್ತಾಂತಪತ್ರಿಕೆಗಳನ್ನು ಓದಿದಂತೆ–ಓದಿದಮಾತ್ರದಿಂದ, ಅವುಗಳ ವಿಷಯಕ್ಕೆ ಕೆಲವು ಚರ್ಚೆಗಳನ್ನು ಮಾಡಿದ್ದರಿಂದ ಅಥವಾ ಉಪನ್ಯಾಸಗಳನ್ನು ಕೇಳಿದ್ದರಿಂದ, ವಿಷಯವು ನಮಗೆ ಸ್ವಾಧೀನವಾಗಿದೆಯೆಂದು ಭಾವಿಸುವದಕ್ಕೆ ಬರುವದಿಲ್ಲ. ನಾವು ಶ್ರದ್ಧೆಯಿಂದ ಕ್ರಮವಾಗಿ ಸಾಧನವನ್ನು ಮಾಡಿ ತತ್ತ್ವವಿಚಾರವನ್ನು ಪರಿಪೂರ್ಣಗೊಳಿಸಿ ಕೊಳ್ಳಬೇಕೆಂಬುದು ನನ್ನ ಅನುಭವಕ್ಕೆ ಈ ರೀತಿಯಲ್ಲಿ ಬಂದಿರುತ್ತದೆ.

ಎಷ್ಟೋಮಂದಿ ವೇದಾಂತಿಗಳೆನಿಸಿಕೊಂಡಿದ್ದರೂ ಅವರಿಗೆ ಗುರುವಾಕ್ಯ ವಲ್ಲಾಗಲಿ ಶಾಸ್ತ್ರದಲ್ಲಾಗಲಿ ಶ್ರದ್ಧೆಯಿರುವದೇ ಇಲ್ಲ. ‘ಶ್ರದ್ಧಾಮಯೋऽಯಂ ಪುರುಷಃ’ ಎಂಬ ಗೀತೋಕ್ತಿಯಲ್ಲಿ ಹೆಚ್ಚಿನ ಸತ್ಯವಿರುತ್ತದೆ. ಕೆಲವರಿಗೆ ವಿತ್ತದಲ್ಲಿ–ಅಂದರೆ ಮನೆಮಾರು, ಹೆಂಡಿರುಮಕ್ಕಳು, ಹೊಲಗದ್ದೆಗಳು, ಹಣ– ಮುಂತಾದ ಸಂಪತ್ತಿನ ಗಳಿಕೆಯಲ್ಲಿ–ಶ್ರದ್ಧೆಯಿರುತ್ತದೆ. ಅವರು ವಿತ್ತಮಯರು

ರಾಗಿರುತ್ತಾರೆ. ಕೆಲವರಿಗೆ ಕೀರ್ತಿಯಲ್ಲಿ ಶ್ರದ್ಧೆ; ಅವರು ತಮ್ಮ ಹೆಸರು ಎಲ್ಲಾ ಕಡೆಯಲ್ಲಿಯೂ ಹರಡಿಕೊಳ್ಳಬೇಕೆಂದು ಅದಕ್ಕಾಗಿ ತಮ್ಮ ಸರ್ವಸ್ವವನ್ನೂ ಕಳೆದುಕೊಳ್ಳುವದಕ್ಕೂ ಸಿದ್ಧರಾಗಿರುತ್ತಾರೆ. ಎಷ್ಟೋ ಜನರಿಗೆ ತಮ್ಮ ಹೆಸರೂ ಛಾಯಚಿತ್ರವೂ ವರ್ತಮಾನಪತ್ರಿಕೆಯಲ್ಲಿ ಬಂದರೆ ಸಾಕು; ಅಷ್ಟರಿಂದ ತಾವು ಕೃತಾರ್ಥರಾದೆವೆಂದು ಎಣಿಸುತ್ತಾರೆ. ಅವರು ಕೀರ್ತಿಮಯರು. ಇನ್ನು ಕೆಲವರು ಕಾಮುಕರು, ಸ್ತ್ರೀಸಂಗದಲ್ಲಿ ಶ್ರದ್ಧೆಯುಳ್ಳವರು; ಅವರಿಗೆ ಸ್ತ್ರೀಯರ ಮಾತು, ಸ್ತ್ರೀಯರ ಶೃಂಗಾರವನ್ನು ನೋಡಿ ಬೆರಗಾಗುವದು—ಇಂಥ ವ್ಯಾಪಾರ ದಲ್ಲಿಯೇ ಮನಸ್ಸು ನೆಟ್ಟಿರುತ್ತದೆ. ಅವರು ಸ್ತ್ರೀಮಯರಾಗಿರುತ್ತಾರೆ. ಯಾರೊಡನೆಯಾದರೂ ಹತ್ತುನಿಮಿಷಗಳಕಾಲ ಮಾತಾಡುವದರೊಳಗೆ ಅವರಿಗೆ ಏತರಲ್ಲಿ ಶ್ರದ್ಧೆಯಿದೆ, ಅವರು ಏತರಲ್ಲಿ ತನ್ಮಯರಾಗಿರುತ್ತಾರೆ— ಎಂಬುದನ್ನು ಗೊತ್ತುಮಾಡಿಕೊಳ್ಳಬಹುದು. ರೈಲಿನಲ್ಲಿ ಕೆಲವರು ಜಿನಸಿಗಳ ಧಾರಣೆಬಾಸಿ ಗಳನ್ನು ಕುರಿತು ಮಾತಾಡುತ್ತಿರುವರು. ಮತ್ತೆ ಕೆಲವರು ರಾಜಕಾರಣದ ವಿಷಯ ದಲ್ಲಿ ಮಾತನಾಡುತ್ತಿರುತ್ತಾರೆ, ಇತ್ಯಾದಿ ಇತ್ಯಾದಿ. ಅವರವರು ತಮ್ಮ ತಮ್ಮ ಶ್ರದ್ಧೆಗೆ ಅನುಸಾರವಾಗಿ ತನ್ಮಯರಾಗಿರುತ್ತಾರೆ. ಎಷ್ಟೋ ಜನಗಳು ದೈವಿಕ ವಾಗಿ ತಮಗೆ ಶ್ರದ್ಧೆಯಿಲ್ಲದ ಸ್ಥಾನದಲ್ಲಿರುತ್ತಾರೆ: ಅಂಥವರು ಆ ಸ್ಥಾನದಲ್ಲಿ ತೃಪ್ತರಾಗದೆ ಜೀವನವನ್ನು ಹೇಗೋ ಸಾಗಿಸುತ್ತಿರುತ್ತಾರೆ; ಇಲ್ಲವೆ ಬಲುಬೇಗನೆ ಆ ಉದ್ಯೋಗವನ್ನು ಬಿಟ್ಟು ಮತ್ತೊಂದು ಉದ್ಯೋಗಕ್ಕೆ ಬದಲಾಯಿಸಿಕೊಳ್ಳು ತ್ತಾರೆ. ವೇದಾಂತಿಗಳಾದ ಪಂಡಿತರುಕೂಡ, ತಮ್ಮ ಪಾಂಡಿತ್ಯದಿಂದ ಧನ ಸಂಪಾದನೆಯಾಗುವದೆಂದೋ, ಅಥವಾ ಮತ್ತೆ ಯಾವದಾದರೊಂದು ಕಾರಣ ದಿಂದಲೋ ವೇದಾಂತಿಗಳಾಗಿಬಿಡುತ್ತಾರೆ. ಆದರೆ ಅವರ ಶ್ರದ್ಧೆಯು ವೇದಾಂತ ದಲ್ಲಿರುವದಿಲ್ಲ. ಒಬ್ಬರು ಅನೇಕ ಬಿರುದುಗಳನ್ನು ಪಡೆದ ಪಂಡಿತರಾಜರಾಗಿ ದ್ದರು; ಅವರು ಒಮ್ಮೆ ನನ್ನೊಡನೆ ಜಾಗ್ರತ್ಸ್ವಪ್ನಗಳ ಸಂಬಂಧದ ವಿಷಯಕ್ಕೆ ರಾತ್ರಿ ಹನ್ನೆರಡುಘಂಟೆಯವರೆಗೂ ಚರ್ಚೆಮಾಡಿದರು. ಅನೇಕ ವೇದಾಂತದ ಉದ್ಗ್ರಂಥಗಳ ವಚನಗಳನ್ನು ಉದಾಹರಿಸುತ್ತಿದ್ದರು. ಆದರೆ ಮಾರನೆಯ ದಿನ ಪುತ್ರಕಾಮನೆಯಿಂದ ಅವರು ಸೇತುದರ್ಶನಕ್ಕೆಂದು ಹೊರಟಿದ್ದರು; ಸೇತುದರ್ಶನದಿಂದ ಪುತ್ರಸಂತಾನವು ಲಭಿಸುವದೆಂಬ ಧರ್ಮಶಾಸ್ತ್ರದಲ್ಲಿದ್ದಷ್ಟು ನಂಬಿಕೆಯು ಅವರಿಗೆ ವೇದಾಂತದಲ್ಲಿರಲೇ ಇಲ್ಲ.

ಒಬ್ಬ ಸಂನ್ಯಾಸಿಯು ಒಮ್ಮೆ ಮಳೆಗಾಲದಲ್ಲಿ ಕೆರೆಯ ಏರಿಯಮೇಲೆ ನಡೆದುಕೊಂಡುಹೋಗುತ್ತಿದ್ದನು. ಅಲ್ಲಿ ಕೆಲವರು ಹುಡುಗರು ಬಂದು ಏಡಿ ಯನ್ನು ಹಿಡಿದುಕೊಂಡು ಅದನ್ನು ಚಚ್ಚುವದಕ್ಕೆ ಪ್ರಯತ್ನಿಸುತ್ತಿದ್ದರು.

ಅದನ್ನು ನೋಡಿ ಸಂನ್ಯಾಸಿಯು 'ಛೆ, ಇವರು ಎಷ್ಟಾದರೂ ಹುಡುಗರು. ಏಡಿಯನ್ನು ಬೆನ್ನುಕೆಳಗಾಗಿಟ್ಟುಕೊಂಡು ಚುಚ್ಚಿದರೆ ಬೇಗನೆ ಒಡೆದುಕೊಳ್ಳುವದೆಂಬುದು ಇವರಿಗೆ ತಿಳಿಯದು. ನಾವಂತೂ ಸಂನ್ಯಾಸಿಗಳು, ನಮಗೇಕೆ ಈ ಚಿಂತೆ?' ಎಂದು ಗಟ್ಟಿಯಾಗಿ ಹೇಳುತ್ತಾ ಮುಂದಕ್ಕೆ ನಡೆದನು. ಹುಡುಗರು ಕೂಡಲೆ ಅವನು ಹೇಳಿದಂತೆ ಏಡಿಯನ್ನು ಚುಚ್ಚಿದರಂತೆ! ಆ ಸಂನ್ಯಾಸಿಯು ಬಾಲ್ಯದಲ್ಲಿ ಬೆಸ್ತರ ಸಹವಾಸ ಮಾಡಿದ್ದನು. ಅವನಿಗೆ ಜಲಚರಪ್ರಾಣಿಗಳನ್ನು ಹಿಡಿಯುವದು- ಮುಂತಾದ ಕೆಲಸಗಳಲ್ಲಿಯೇ ಸಂಸ್ಕಾರವು ಇದ್ದಿತು. ಆದ್ದರಿಂದ ಅವನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದಮೇಲೂ ಅವನಿಗೆ ಆ ವಾಸನೆಯು ಹೋಗಿರಲಿಲ್ಲ!

ಶ್ರುತಿಯು 'ಬಾಹ್ಯವಿಷಯಗಳ ಬೆನ್ನುಹತ್ತುತ್ತಿರುವವರು ಬಾಲರು; ಅವರು ಹರಡಿಕೊಂಡಿರುವ ಮೃತ್ಯುವಿನ ಬಲೆಯಲ್ಲಿ ಬೀಳುವರು. ಯಾವನೋ ಒಬ್ಬ ವಿವೇಕಿಯು ಇಂದ್ರಿಯಗಳನ್ನು ಜಗ್ಗಿ ಪ್ರತ್ಯಗಾತ್ಮನನ್ನು ಕಾಣುವದಕ್ಕೆ ಪ್ರಯತ್ನಿಸುತ್ತಾನೆ: ಏಕೆಂದರೆ ಅವನಿಗೆ ಅಮೃತತತ್ವದ ಇಚ್ಛೆಯಿದೆ' ಎಂದು ಹೇಳುತ್ತಿರುವದಕ್ಕೆ ಇದೇ ಕಾರಣ. ಯಾವನಿಗೆ ಏತರಲ್ಲಿ ಶ್ರದ್ಧೆಯಿರುವದೋ ಅವನು ಅದಕ್ಕೆ ಪ್ರಯತ್ನವನ್ನು ಮಾಡುತ್ತಾನೆ. **'ಯೋ ಯಚ್ಛ್ರದ್ಧಃ ಸ ಏವ ಸಃ'** ಯಾವನು ಏತರಲ್ಲಿ ಶ್ರದ್ಧೆಯುಳ್ಳವನಾಗಿರುತ್ತಾನೋ ಅವನು ಅದೇ ಆಗಿಬಿಡುತ್ತಾನೆ.

ಈಗ ನಮಗೆ ಬಾಹ್ಯವಿಷಯಗಳಲ್ಲಿಯೇ ಹೆಚ್ಚಿನ ಶ್ರದ್ಧೆಯಿರುವದರಿಂದ ಅತೀಂದ್ರಿಯವಾದ ತತ್ತ್ವಗಳನ್ನು ತಿಳಿದುಕೊಳ್ಳುವದಕ್ಕೆ ಬಾಹ್ಯಜಗತ್ತಿನ ವಾಸನೆಯೇ ಅಡ್ಡಿಯಾಗಿರುತ್ತದೆ. ಆದ್ದರಿಂದ ನಾವು ಆಧ್ಯಾತ್ಮಿಕವಿಷಯಗಳಲ್ಲಿ ಹೆಚ್ಚಿನ ಶ್ರದ್ಧೆಯನ್ನು ಸಂಪಾದಿಸಿಕೊಳ್ಳಬೇಕು. ನಾವು ಹೊರಗಿನ ಕಾಮಗಳನ್ನೇ ಬೆನ್ನುಹತ್ತಿರುವವರಿಂದ ನಮ್ಮನ್ನು 'ಬಾಲಕರು' ಎಂದು ಶ್ರುತಿಯು ಕರೆದಿರುವದು ಯುಕ್ತವೇ ಆಗಿರುತ್ತದೆ. ವಿವೇಕಿಗಳಾದವರ ದೃಷ್ಟಿಯನ್ನು ಆಶ್ರಯಿಸಿ ಅಂತರ್ದೃಷ್ಟಿಯನ್ನು ಸಂಪಾದಿಸಿಕೊಂಡರೆ ನಾವೂ ಅಮೃತತ್ವಕ್ಕೆ ಅರ್ಹರಾಗುವೆವು. ನಮಗೆ ದೊಡ್ಡದೊಡ್ಡ ಸೂಕ್ಷ್ಮತರವಾದ ವಿಷಯಗಳ ಜ್ಞಾನವೂ ಇದೆ; ಅತ್ಯಂತ ಗಹನವಾದ ವಿಷಯಗಳನ್ನು ನೇರಾಗಿ ವಿಚಾರಮಾಡುವದಕ್ಕೆ ನಾವು ಅರ್ಹರು- ಎಂದೇ ನಮಗೆ ಅಭಿನಿವೇಶವುಂಟಾಗಿಬಿಟ್ಟಿದೆ. ಇದು ಸಲ್ಲದು. ನಮಗೆ ಯಾವ ಯಾವ ವಿಚಾರಗಳಲ್ಲಿ ಸುನಿಶ್ಚಿತವಾದ ತಿಳಿವಳಿಕೆಯಿದೆ? ಇನ್ನೂ ಸೂಕ್ಷ್ಮವಾಗಿರುವ ಯಾವಯಾವ ವಿಷಯಗಳನ್ನು ಕ್ರಮಕ್ರಮವಾಗಿ ಅರಿತುಕೊಳ್ಳಬೇಕಾದದ್ದಿದೆ?- ಎಂಬುದನ್ನು ಆಲೋಚಿಸುವವರ ಸೌಕರ್ಯಕ್ಕಾಗಿ ಈಗ ನಾನು ಆಸ್ತಿಕ್ಯವಿರಬೇಕಾದ ತತ್ತ್ವಗಳನ್ನು ಮೆಟ್ಟಿಲುಮೆಟ್ಟಿಲಾಗಿ ಪಟ್ಟಿಹಾಕಿದಂತೆ ತಿಳಿಯಿಸುವೆನು:

(೧) ಅಸ್ತ್ಯಾತ್ಮಾ– ಆತ್ಮನು ಇದ್ದಾನೆ ಎಂಬ ಶ್ರದ್ಧೆಯು ಬೇಕು. ಈಗ ನಮಗೆ ಶರೀರ, ಇಂದ್ರಿಯ– ಮುಂತಾದವುಗಳಲ್ಲಿ ಯಾವದೋ ಒಂದರಲ್ಲಿ ಆತ್ಮಬುದ್ಧಿಯಿದೆ. ಅಂಗಡಿಗೆ ಹೋದಾಗ 'ಸಕ್ಕರೆಯ ಬೆಲೆ ಹೇಗಿದೆ ?' –ಎಂದು ಕೇಳುವಂತೆ, ಯಾರಾದರೂ ವೇದಾಂತಿಗಳು ಸಿಕ್ಕಿದಾಗ 'ಆತ್ಮನಿಗೆ ಬಂಧಮೋಕ್ಷಗಳು ಹೇಗೆ ಆಗುತ್ತವೆ ?' ಎಂದು ಮುಂತಾಗಿ ಕೇಳುತ್ತೇವೆಯೋ ಹೊರತು ನಿಜವಾದ ಆತ್ಮಜ್ಞಾನವು ನಮಗೆ ಆಗಿರುವದಿಲ್ಲ. ಬೈಸಿಕಲ್ ಎಂಬ ಎರಡು ಚಕ್ರದ ಕಾಲುಗಾಡಿ ನಮಗೆ ಬಹಳವಾಗಿ ಬೇಕಾಗಿರುವಾಗ ಅದು ನನ್ನದು ಎಂದು ಮಾತ್ರವಲ್ಲ, 'ಅದೇ ನಾನು' ಎಂಬವರೆಗೂ ಅಭಿಮಾನವುಂಟಾಗಿಬಿಟ್ಟಿರುತ್ತದೆ. ಹಾಗೆಯೇ ನಮಗೆ ಶರೀರವೂ ಇಂದ್ರಿಯಗಳೂ ವ್ಯವಹಾರದಲ್ಲಿ ಬಹಳ ಅವಶ್ಯವಾಗಿ ಬಳಕೆಗೆ ಬೇಕಾಗಿರುವದರಿಂದ ಮನುಷ್ಯಮಾತ್ರಕ್ಕೆ ಸ್ವಾಭಾವಿಕವಾಗಿ ಅಧ್ಯಾಸದಿಂದ (ಮಿಥ್ಯಾಬುದ್ಧಿಯಿಂದ) ಶರೀರವೇ ನಾನು, ಕಣ್ಣುಕೈಕಾಲುಕಿವಿಗಳೇ ನಾನು– ಎಂಬ ಬುದ್ಧಿಯು ದೃಢವಾಗಿದೆ. ನಾನು ಶರೀರಾದಿಗಳ ಒಡೆಯನು; ಶರೀರೇಂದ್ರಿಯಸಂಘಾತಕ್ಕಿಂತ ವ್ಯತಿರಿಕ್ತನಾಗಿದೇನೆ– ಎಂಬ ಜ್ಞಾನವು ಶಾಸ್ತ್ರಶ್ರದ್ಧೆಯಿಂದ ಮಾತ್ರ ಬಂದೀತು.

(೨) ಅಸ್ತ್ಯಾತ್ಮಾನ್ತರಮ್– ಇನ್ನು ನಮ್ಮ ಹಾಗೆಯೇ ಬೇರೆ ಆತ್ಮರೂ ಇದ್ದಾರೆ ಎಂಬ ಆತ್ಮಾಂತರಾಸ್ತಿತ್ವಶ್ರದ್ಧೆಯು ಬರುವದೂ ಹೀಗೆಯೇ ಅವಶ್ಯವಾಗಿರುತ್ತದೆ. ಕೆಲವು ಮತಗಳಲ್ಲಿ ಪ್ರಾಣಿಗಳಿಗೆ ಆತ್ಮನಿಲ್ಲವೇ ಇಲ್ಲ ಎಂಬ ಬೋಧೆಯಿರುವಂತೆ ಕಾಣಿಸುತ್ತಿದೆ; ಇನ್ನು ಕೆಲವರು 'ಸ್ತ್ರೀಯರಿಗೆ ಆತ್ಮನೇ ಇಲ್ಲ' ಎಂದು ಭಾವಿಸಿರುತ್ತಾರೆ ! ಆತ್ಮಾಂತರದ ಅಸ್ತಿತ್ವದಲ್ಲಿ ಶ್ರದ್ಧೆಯಿಲ್ಲದಿದ್ದರೆ ನೀತಿಶಾಸ್ತ್ರಕ್ಕೆ ಅಡಿಗಟ್ಟೇ ಇಲ್ಲದಂತೆ ಆಗಿಬಿಡುತ್ತದೆ. ಪ್ರಾಣಿಗಳ ಹಿಂಸೆ, ಸ್ತ್ರೀಯರ ವಿಷಯಕ್ಕೆ ಕ್ಷುದ್ರಬುದ್ಧಿ– ಇವುಗಳು ನಮಗೆ ಉಂಟಾಗುತ್ತವೆ. ನನ್ನಂತೆಯೇ ಬೇರೆಯ ಜೀವಾತ್ಮರುಗಳೂ ಇದ್ದಾರೆ ಎಂಬ ನಂಬಿಕೆಯಿಲ್ಲದವರಿಗೆ ಈ ದುರ್ಬುದ್ಧಿಯು ಹೇಗೆತಾನೆ ಹೋದೀತು ?

(೩) ಅಸ್ತಿ ಧರ್ಮಃ, ಅಧರ್ಮಶ್ಚ ; ಆಚಾರಾದ್ಧರ್ಮಪ್ರಾಪ್ತಿಶ್ಚ– ಧರ್ಮವೆಂಬುದಿದೆ, ಅಧರ್ಮವೂ ಇದೆ. ಆಚಾರದಿಂದಾಗುವ ಧರ್ಮಪ್ರಾಪ್ತಿಯೂ ಇದೆ.

(೪) ಅಸ್ತಿ ಶಾಸ್ತ್ರಂ ಪ್ರಮಾಣಭೂತಂ ಧರ್ಮಾಧರ್ಮಯೋಃ– ಧರ್ಮಾಧರ್ಮಗಳಿಗೆ ಪ್ರಮಾಣವಾದ ಶಾಸ್ತ್ರವುಂಟು.

(೫) ಅಸ್ತಿ ಜನ್ಮಾನ್ತರಂ ಲೋಕಾನ್ತರಂ ಚ– ನಾವು ಮಾಡುವ ಕರ್ಮಗಳಿಗೆ ಫಲವನ್ನು ಭೋಗಿಸುವದಕ್ಕೆ ಅವಶ್ಯವಾದ ಜನ್ಮಾಂತರವೂ ಲೋಕಾಂತರವೂ ಉಂಟು.

(೬) ಅಸ್ತೀಶ್ವರಃ ಕರ್ಮಫಲದಾತಾ– ನಾವು ಮಾಡಿದ ಕರ್ಮಗಳಿಗೆ ಫಲವನ್ನು ಕೊಡುವ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನಿದ್ದಾನೆ.

(೭) ಅಸ್ತಿ ಅರ್ಚನಪ್ರಾರ್ಥನಾಸ್ತೋತ್ರಜಪಧ್ಯಾನಪ್ರಕಾರೈರ್ಭಿನ್ನಮುಪಾಸನಮ್ ಈಶ್ವರಪ್ರಸಾದಹೇತುಃ– ಈಶ್ವರನ ಪ್ರಸಾದಕ್ಕೆ ಕಾರಣವಾಗಿ ಅರ್ಚನ, ಪ್ರಾರ್ಥನೆ, ಸ್ತೋತ್ರ, ಜಪ, ಧ್ಯಾನ– ಎಂಬ ಪ್ರಕಾರಗಳುಳ್ಳ ಉಪಾಸನೆಯೆಂಬುದಿದೆ.

(೮) ಅಸ್ತಿ ಸಂಸಾರಬನ್ಧಃ ಮೋಕ್ಷಶ್ಚ—ಈಶ್ವರನ ಅಸ್ತಿತ್ವವನ್ನು ಮರೆತು ನಡೆಯುವವರಿಗಾಗುವ ಬಂಧವುಂಟು. ಆತನ ಪ್ರಸಾದದಿಂದ ದೊರಕುವ ಮೋಕ್ಷವೂ ಉಂಟು,

(೯) ಅಸ್ತಿ ಪ್ರವೃತ್ತಿನಿವೃತ್ತಿಪ್ರಕಾರಾಭ್ಯಾಂ ಭಿನ್ನಂ ಧರ್ಮದ್ವಯಮ್—ಪ್ರವೃತ್ತಿ ನಿವೃತ್ತಿಗಳೆಂಬ ಎರಡು ಪ್ರಕಾರಗಳ ಧರ್ಮವುಂಟು.

(೧೦) ಅಸ್ತಿ ಕರ್ಮಣೋ ವೀರ್ಯವತ್ತರತ್ವಮ್ ಉಪಾಸನಾಸಹಕೃತಸ್ಯ ಕರ್ಮಕ್ಕೆ ಉಪಾಸನೆಯ ಸಹಕಾರದಿಂದ ವೀರ್ಯವು ಹೆಚ್ಚುವದೆಂಬುದೂ ಉಂಟು.

(೧೧) ಅಸ್ತಿ ಸರ್ವದಾ ಸರ್ವತ್ರ ವ್ಯವಹಾರಾತೀತಃ ಪರಮಾರ್ಥಃ— ವ್ಯವಹಾರವನ್ನು ಮೀರಿರುವ ಪರಮಾರ್ಥವು ಯಾವಾಗಲೂ ಎಲ್ಲೆಲ್ಲಿಯೂ ಇರುತ್ತದೆ.

(೧೨) ವ್ಯಾವಹಾರಿಕಪಾರಮಾರ್ಥಿಕಭೇದಭಿನ್ನಂ ದೃಷ್ಟಿದ್ವಯಮ್— ವ್ಯಾವಹಾರಿಕದೃಷ್ಟಿ, ಪಾರಮಾರ್ಥಿಕದೃಷ್ಟಿ— ಎಂದು ಭಿನ್ನಭಿನ್ನವಾಗಿರುವ ಎರಡು ದೃಷ್ಟಿಗಳುಂಟು.

ಶ್ರೀಕೃಷ್ಣಭಗವಂತನು :

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥**

ಎಂದಿರುತ್ತಾನೆ. ಅವರವರ ಸಂಸ್ಕಾರಸಹಿತಅಂತಃಕರಣಕ್ಕೆ ಅನುಗುಣವಾಗಿ ಶ್ರದ್ಧೆಯುಂಟಾಗಿರುತ್ತದೆ.

# ೫. ಆ ತೆ

( 3–8–69 )

ಆಸ್ತಿಕ್ಯದ ವಿಷಯದಲ್ಲಿ ಕೆಲವು ವಿಷಯಗಳನ್ನು ಹೇಳಿದ್ದಾಯಿತು. ಅತೀಂದ್ರಿಯವಾಗಿರುವ ಆತ್ಮಾದಿಜ್ಞಾನಕ್ಕೆ ಶ್ರದ್ಧೆಯು ಅವಶ್ಯವಾಗಿರುತ್ತದೆ ಎಂದು ಹೇಳಿದೆನಷ್ಟೆ ? ಶ್ರದ್ಧೆಯೆಂದರೆ ಶಾಸ್ತ್ರ, ಆಚಾರ್ಯ— ಇವರ ವಚನದಲ್ಲಿ ಇರಬೇಕಾದ ವಿಶ್ವಾಸ. ಇದು ಎರಡು ವಿಧ. ಈ ಲೋಕದಲ್ಲಿ ಈಗಲೆ ಕಾಣುವದಕ್ಕೆ ಅಶಕ್ಯವಾದ ವಿಷಯಗಳು ಪರೋಕ್ಷವೇ ಆಗಿದ್ದರೂ ಪ್ರಮಾಣಭೂತವಾದ ಶಾಸ್ತ್ರವೂ ಆಪ್ತರಾದ ಆಚಾರ್ಯರೂ ಹೇಳುವವರಿಂದ ಅವು ಸತ್ಯವಾಗಿರಬೇಕೆಂದು ನಂಬುವದು ಒಂದು ಬಗೆಯ ಶ್ರದ್ಧೆ. ಇಲ್ಲಿಯೇ ಕಾಣುವದಕ್ಕೆ ಅವಕಾಶವಿದ್ದರೂ ಬಹುಸೂಕ್ಷ್ಮವಾಗಿರುವದರಿಂದ ಅಥವಾ ಸರಿಯಾದ ಸಾಧನೆಗಳನ್ನು ಉಪಯೋಗಿಸದೆ ಇರುವದರಿಂದ ನಮಗೆ ಗೋಚರವಾಗದೆ ಇರುವ ಪದಾರ್ಥಗಳೂ ಇವೆ—ಎಂದು ನಂಬುವದು ಮತ್ತೊಂದು ಬಗೆಯ ಶ್ರದ್ಧೆ.

ಧರ್ಮಾಧರ್ಮಗಳು, ಅವುಗಳ ಫಲವಾದ ಸ್ವರ್ಗಾದಿಪ್ರಾಪ್ತಿ— ಇವೇ ಮುಂತಾದ ತತ್ತ್ವಗಳು ಮೊದಲನೆಯ ವರ್ಗಕ್ಕೆ ಸೇರಿದವು. ಅವುಗಳನ್ನು ನಾವು ಪ್ರಯತ್ನಪಟ್ಟರೂ ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ಇವೆಯೆಂದು ನಿಶ್ಚಯಿಸುವದಕ್ಕೆ ಆಗುವಂತಿರುವದಿಲ್ಲ. ಆದರೂ ಜನ್ಮಾಂತರಗಳು ಇಲ್ಲದಿದ್ದರೆ ಸೃಷ್ಟಿಯಲ್ಲಿ ಜೀವರ ಸ್ವಭಾವವೈಚಿತ್ರ್ಯವುಂಟಾಗುತ್ತಿರಲೇ ಇಲ್ಲ. ಶರೀರದ ರಚನೆಯಲ್ಲಿ, ಇಂದ್ರಿಯಗಳ ಪಾಟವದಲ್ಲಿ ಮತ್ತು ಮನಸ್ಸಿನ ಅಂತಸ್ತಿನಲ್ಲಿ ಜೀವರುಗಳಲ್ಲಿ ಬಹಳ ವೈಷಮ್ಯವಿರುತ್ತದೆ. ಜನ್ಮವು ಒಂದೇ ಆಗಿದ್ದರೆ ನಿಷ್ಕಾರಣವಾಗಿ ಹೀಗೆ ಜೀವರುಗಳಲ್ಲಿ ತಾರತಮ್ಯವಿರಬಾರದಾಗಿತ್ತು. ಈಶ್ವರನು ಈ ಜಗತ್ತನ್ನು ಸೃಷ್ಟಿಸಿರುತ್ತಾನೆಂದು ನಂಬುವವರೂ ಕೆಲವರು ಜನ್ಮಾಂತರವನ್ನು ಒಪ್ಪುತ್ತಿಲ್ಲ. ಅವರ ಮತದಲ್ಲಿ ಈಶ್ವರನ ಇಚ್ಛೆಯೇ ಈ ಹೆಚ್ಚುಕಡಿಮೆಗಳಿಗೆ ಕಾರಣವೆಂದಾಗಬೇಕಾಗಿದೆ. ಒಬ್ಬರನ್ನು ಅನೇಕ ಸಾಧನಸಂಪತ್ತುಗಳೆಲ್ಲವುಗಳಿಂದಲೂ ಕೂಡಿ ಸೃಷ್ಟಿಸಿರುವದು, ಇನ್ನೊಬ್ಬರನ್ನು ಅನೇಕ ಕುಂದುಕೊರತೆಗಳಿಂದೊಡಗೂಡಿರುವಂತೆ ಸೃಷ್ಟಿಸಿರುವದು—ಇವುಗಳು ಸರ್ವಜ್ಞನೂ ಸರ್ವಶಕ್ತನೂ ದಯಾಳುವೂ ನಿಷ್ಪಕ್ಷಪಾತಿಯೂ ಆದ ಈಶ್ವರನಿಗೆ ಇರಬಹುದೆ ? ಜೀವರ ವೈಚಿತ್ರ್ಯವನ್ನು ಹೀಗೆ ಸೃಷ್ಟಿಸಿರುವದರಿಂದ ಈಶ್ವರನು ಪಕ್ಷಪಾತಿಯೆಂದೂ ನಿಷ್ಕರುಣಿಯೆಂದೂ ಆಗುವದಿಲ್ಲವೆ ?—ಎಂಬ ಶಂಕೆಗಳಿಗೆ ಆ ಮತಗಳಲ್ಲಿ ಸಮುತ್ತರವು ಸಿಕ್ಕುವದಿಲ್ಲ. ಆದ್ದರಿಂದ ಧರ್ಮಾಧರ್ಮಗಳೂ ಅವುಗಳ ಫಲವಾಗಿ

**ರುವ ಪರಲೋಕವೂ ಜನ್ಮಾಂತರವೂ ಇರಬೇಕು— ಎಂದು ಸಂಭಾವನಾಯುಕ್ತಿಯಿಂದ ನಿಶ್ಚಯಿಸಬಹುದಾಗಿರುತ್ತದೆ.**

ಇನ್ನು ನಮ್ಮ ಎದುರಿಗೇ ಇಲ್ಲಿಯೇ ಇದ್ದರೂ ಅತಿಸೂಕ್ಷ್ಮವಾಗಿರುವದರಿಂದಲೂ ಅವನ್ನು ಕಾಣುವದಕ್ಕೆ ಸರಿಯಾದ ಸಾಧನವನ್ನು ನಾವು ಉಪಯೋಗಿಸದೆ ಇರುವದರಿಂದಲೂ ನಮಗೆ ಗೋಚರವಾಗದೆ ಇರುವ ಪದಾರ್ಥಗಳೂ ಉಂಟು. ಶ್ರದ್ಧೆಯಿಂದ ಶೋಧಿಸಿ ಅವುಗಳ ಅಸ್ತಿತ್ವವನ್ನು ಕಂಡುಕೊಳ್ಳಬೇಕು. ಭೌತಿಕಶಾಸ್ತ್ರದ ಕ್ರಮವನ್ನನುಸರಿಸಿದವರು ಶ್ರದ್ಧೆಯಿಂದಲೇ ಅಲ್ಲವೆ, ಹೊಸ ಹೊಸ ಲೋಹಗಳನ್ನು ಕಂಡುಹಿಡಿದಿರುವದು ? ಅವರಿಗೆ ಅಚಲವಾದ ಶ್ರದ್ಧೆಯೂ ಅನ್ವೇಷಣೆಯಲ್ಲಿ ತತ್ಪರತೆಯೂ ಇಲ್ಲದೆಇದ್ದಿದ್ದರೆ ಸೂಕ್ಷ್ಮನಾಗಿರುವ ಭೂಮಿಜಲವಾಯುತೇಜಸ್ಸುಗಳಲ್ಲಿರುವ ಸೂಕ್ಷ್ಮವಸ್ತುಗಳನ್ನೂ ಶಕ್ತಿವಿಶೇಷಗಳನ್ನೂ ಕಂಡುಹಿಡಿದು ರೈಲು, ಹಡಗು, ವಿಮಾನ— ಮುಂತಾದ ಯಾನಸಾಧನೆಗಳನ್ನು ನಿರ್ಮಿಸಿ ಚಂದ್ರಗ್ರಹವೇ ಮುಂತಾದ ಆಕಾಶಸ್ಥಿತಗ್ರಹಗಳನ್ನುಕೂಡ ಮುಟ್ಟುವದು ಸಾಧ್ಯವಾಗುತ್ತಿತ್ತೆ ? ಹೀಗೆಯೇ ಇಲ್ಲಿಯೇ ಇದ್ದರೂ ಪ್ರತ್ಯಕ್ಷಾದಿಗಳಿಗೆ ಎಟುಕದ ತತ್ತ್ವಗಳನ್ನು ಋಷಿಗಳು ಶ್ರದ್ಧೆಯಿಂದ ಪ್ರಕಾರಾಂತರವನ್ನು ಅನುಸರಿಸಿ ಕಂಡುಹಿಡಿದಿರುತ್ತಾರೆ. ಇಂಥವುಗಳೇ ಅತೀಂದ್ರಿಯವಾದ ಆತ್ಮಾದಿ ತತ್ತ್ವಗಳು.

ಈ ದಿವಸ ಆತ್ಮನನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕೆಂದಿರುವೆನು. ಮೊದಲನೆಯದಾಗಿ ಆತ್ಮನಿದ್ದಾನೆ ಎಂಬುದು ಹೇಗೆ ಗೊತ್ತು ?— ಇದಕ್ಕೆ ಉತ್ತರವೇನೆಂದರೆ, ಆತ್ಮನೆಂದರೆ ಸ್ವರೂಪ ; ಆತ್ಮನು ಕಾಣುವದಿಲ್ಲವೆಂಬುದು ನಿಜ. ಆದರೇನು ? ಆತ್ಮಜ್ಞಾನವನ್ನು ಸಂಪಾದಿಸುವದಕ್ಕೆ ಬೇಕಾದ ಮಾರ್ಗವನ್ನು ನಾವು ಹಿಡಿದಿಲ್ಲ ; ಅಷ್ಟೆ. ನೀರಿನಲ್ಲಿ ಕರಗಿರುವ ಉಪ್ಪನ್ನು ಕೈಯಿಂದ ತೆಗೆಯುವದಕ್ಕಾಗದೆಇದ್ದರೂ ನಾಲಗೆಯಿಂದ ಸವಿದು, ಅದು ನೀರಿನಲ್ಲಿಯೇ ಇದೆ ಎಂದು ನಿಶ್ಚಯಿಸಿಕೊಳ್ಳುವಂತೆ ನಾವು ಸರಿಯಾದ ಪ್ರಕಾರದಿಂದ ಆತ್ಮನನ್ನು ಹುಡುಕಿ ಕಂಡುಕೊಳ್ಳಬೇಕಾಗಿರುತ್ತದೆ.

ನಮ್ಮ ದೇಶದಲ್ಲಿ ಚಾರ್ವಾಕರು ಪ್ರತ್ಯಕ್ಷವನ್ನೇ ಪ್ರಮಾಣವಾಗಿ ಹಿಡಿದು ದೇಹಕ್ಕಿಂತ ವ್ಯತಿರಿಕ್ತನಾದ ಆತ್ಮನೇಇಲ್ಲವೆಂದು ವಾದಿಸುತ್ತಿದ್ದರು. ಪಾಶ್ಚಾತ್ಯರಲ್ಲಿ ಹೆಕೆಲ್ ಎಂಬಾತನು ಭೌತಿಕವಸ್ತುವೇ ಪರಮಾರ್ಥವೆಂದು ಇಟ್ಟುಕೊಂಡು ಪರಮಾರ್ಥಿಕತ್ವವನ್ನು ಸಾಧಿಸಬಹುದೆಂಬುದನ್ನು ತೋರಿಸುವದಕ್ಕಾಗಿ ವಿಶ್ವದ ತೊಡಕು (Riddle of The Universe) ಎಂಬ ಗ್ರಂಥವೊಂದನ್ನು ವಿರಚಿಸಿರುತ್ತಾನೆ. ಇನ್ನು ಕೆಲವರು ಆತ್ಮನೆಂಬ ಒಂದು ತತ್ತ್ವವೇ ಇಲ್ಲದಿದ್ದರೂ

ಅದು ಇದೆ ಎಂಬುದು ಚೇತನೀಭಾವನೆ (Animism). ಎಂದರೆ ಅಚೇತನ ಕ್ಕೂ ಚೈತನ್ಯಯುಕ್ತವಾದ ಒಂದು ಜೀವವಿದೆ ಎಂಬ ಮಿಥ್ಯಾಕಲ್ಪನೆಯೊಂದು, ಅಥವಾ – ಕೆಂಪು ಎಂಬ ಬಣ್ಣವನ್ನು ಕೆಂಪುವಸ್ತುಗಳಿಗಿಂತ ಬೇರೆಯಲ್ಲದಿದ್ದರೂ ಅದು ಸ್ವತಂತ್ರವಾಗಿದೆಯೆಂದು ದುರಾಗ್ರಹದಿಂದ ಕಲ್ಪಿಸುವಂತೆ ಪ್ರಾಣ್ಯಾದಿಗಳಿ ಗಿಂತ ಆತ್ಮತತ್ತ್ವವು ಬೇರೆಯಿರುವದೆಂದು ಮಾಡಿದ ಮಿಥ್ಯಾವಿಕಲ್ಪ (Abstra-cton) ಎಂದು ವಾದಿಸಿರುತ್ತಾರೆ.

ಇಂಗರ್ಸಾಲ್ (Ingersol) ಎಂಬಾತನೊಬ್ಬನು ಅಜ್ಞಾತಪರಪದಾರ್ಥವಾದಿ (Agnostic). ಅತಿಭೌತಿಕವಾದ ಆತ್ಮಾದಿತತ್ತ್ವಗಳ ನಿಜವನ್ನು ಇದುವರೆಗೆ ಯಾರೂ ಕಂಡುಹಿಡಿದಿಲ್ಲ, ಅವುಗಳನ್ನು ಕಂಡುಹಿಡಿಯಲು ಸಾಧ್ಯವೂ ಇಲ್ಲ ಎಂಬ ದರ್ಶನವಿಶೇಷವನ್ನವಲಂಬಿಸಿದವನು. ಆತನು ಒಮ್ಮೆ ಸ್ವಾಮಿ ವಿವೇಕಾನಂದ ರೊಡನೆ ಮಾತನಾಡುತ್ತಿರುವಾಗ 'ಈ ಪ್ರಪಂಚವೆಂಬುದೊಂದು ಹಣ್ಣು ಇದ್ದಂತೆ; ಇದರ ಸಾರವನ್ನು ಹೀರಿಕೊಳ್ಳುವುದನ್ನು ಬಿಟ್ಟು ಒಣತರ್ಕದಲ್ಲಿ ಮುಳುಗುವದು ಅಯುಕ್ತ' ಎಂದನಂತೆ. ಅದಕ್ಕೆ ವಿವೇಕಾನಂದರು 'ನೀವು ಹೇಳುವದು ನಿಜ; ನನ್ನ ಮತದಲ್ಲಿಯೂ ಇದು ಒಂದು ಹಣ್ಣೇ ಆಗಿರುತ್ತದೆ. ಆದರೆ ನೀವು ಇದೊಂದು ಕಿತ್ತಲೆಹಣ್ಣು ಅನ್ನುತ್ತಿದ್ದೀರಿ, ನನಗೆ ಇದು ಮಾವಿನಹಣ್ಣೆಂದು ತೋರುತ್ತಿದೆ!' ಎಂದರಂತೆ. ಇದೇ ಪ್ರಕೃತಿವಾದಿಗಳಿಗೂ ವೇದಾಂತಿಗಳಿಗೂ ಇರುವ ಮತಭೇದ. ಪ್ರಕೃತಿವಾದಿಗಳು ಜಗತ್ತು ಎಂಬುದು ಒಂದು ಸ್ವತಂತ್ರತತ್ತ್ವ; ಅದರಲ್ಲಿ ಯಾವ ಅತೀಂದ್ರಿಯತತ್ತ್ವವೂ ಇಲ್ಲ–ಎನ್ನುತ್ತಾರೆ; ವೇದಾಂತಿಗಳಾದರೋ, ಈ ಜಗತ್ತಿನ ತಿರುಳು ಪರಮಾತ್ಮವಸ್ತು, ಪರಮಾತ್ಮನೇ ನಮ್ಮಗಳ ನಿಜವಾದ ಆತ್ಮ–ಎನ್ನು ತ್ತಾರೆ. ಸದ್ಯಕ್ಕೆ ಪರಮಾತ್ಮವಿಚಾರವಂತಿರಲಿ–ಶರೀರಾದಿಗಳಿಗಿಂತ ವ್ಯತಿರಿಕ್ತನಾದ ಆತ್ಮನೊಬ್ಬನು ಇದ್ದಾನೆಯೆ?– ಎಂಬುದೇ ಈಗ ನಾವು ವಿಚಾರಕ್ಕೆ ತೆಗೆದು ಕೊಂಡಿರುವ ಪ್ರಶ್ನೆ.

ನಚಿಕೇತನು ಯಮನನ್ನು ಕುರಿತು ಈ ಪ್ರಶ್ನೆಯನ್ನು ಕೇಳಿದ್ದಾನೆ:

"ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ
ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ।"

ಈ ಶರೀರವನ್ನು ತ್ಯಜಿಸಿಹೋದ ಮನುಷ್ಯನು ಇದಕ್ಕಿಂತ ಬೇರೆಯಾಗಿ ಇರುತ್ತಾನೆ ಎಂದು ಕೆಲವರು, ಇರುವದಿಲ್ಲ– ಎಂದು ಕೆಲವರು. ಇದರ ತತ್ತ್ವವನ್ನು ನನಗೆ ಹೇಳಿಕೊಡು– ಎಂಬುದು ಅವನ ಪ್ರಶ್ನೆ. ಮೃತ್ಯುದೇವತೆಯನ್ನು ಕಂಡಾಗಲೂ ಧೈರ್ಯದಿಂದ ಇಂಥ ಪ್ರಶ್ನೆಯನ್ನು ಕೇಳುವ ಬಾಲಕರು ನಮ್ಮ ದೇಶದಲ್ಲಿದ್ದರು!

ಭಗವದ್ಗೀತೆಯಲ್ಲಿ ಜೀವಾತ್ಮನನ್ನು ಕುರಿತು ಈ ಶ್ಲೋಕಗಳು ಕಾಣ ಬರುತ್ತವೆ :

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗನ್ಧಾನಿವಾಶಯಾತ್ ॥
ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥
ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ ।
ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥

ಗೀ. ೧೫–೮, ೯, ೧೦

ಒಂದು ಶರೀರಕ್ಕೆ ಬಂದು ಸೇರುವದು, ಇನ್ನೊಂದು ಶರೀರವನ್ನು ಬಿಟ್ಟು ಪ್ರಾಣಸಹಿತವಾಗಿ ಹೊರಟುಹೋಗುವದು– ಹೀಗೆ ಶರೀರದಿಂದ ಶರೀರಕ್ಕೆ ಹೋಗು ತ್ತಿರುವಾಗ ಈ ಜೀವನು– ಗಾಳಿಯು ಹೂಗಳೇ ಮುಂತಾದ ಆಶ್ರಯಸ್ಥಾನಗಳಿಂದ ವಾಸನೆಯನ್ನು ತೆಗೆದುಕೊಂಡುಹೋಗುದಂತೆ ಶ್ರೋತ್ರ, ಚಕ್ಷುಸ್ಸು, ತ್ವಗಿಂದ್ರಿಯ ರಸನೇಂದ್ರಿಯ, ಘ್ರಾಣೇಂದ್ರಿಯ, ಮತ್ತು ಮನಸ್ಸು– ಇವುಗಳಲ್ಲಿದ್ದು ವಿಷಯ ಗಳನ್ನು ಸೇವಿಸುತ್ತಿದ್ದವನು ಈ ಇಂದ್ರಿಯಗಳನ್ನು ತೆಗೆದುಕೊಂಡಹೋಗುತ್ತಾನೆ. ಮೊದಲು ಪಡೆದುಕೊಂಡಿದ್ದ ದೇಹವನ್ನು ಬಿಟ್ಟು ತೆರಳುತ್ತಿರುವ, ಅಥವಾ ದೇಹ ದಲ್ಲಿರುವ, ಸುಖದುಃಖಮೋಹಾದಿಗುಣಗಳಿಂದ ಕೂಡಿ ವಿಷಯಸೇವನೆಯನ್ನು ಮಾಡುತ್ತಿರುವ ಈ ಆತ್ಮನನ್ನು ವಿಮೂಢರು–'ಇಗೊ, ಈ ವಿಷಯವು ಸಿಕ್ಕಿತು, ಇನ್ನು ಅದನ್ನು ಉಪಭೋಗಿಸುವೆನು' ಎಂದು ವಿವಿಧವಾದ ವಿಷಯಗಳಿಂದ ಮೋಹಿತರಾಗಿರುವ ಅಜ್ಞಜನರು–ಕಾಣಲಾರದೆ ಇರುವರು. ಇಷ್ಟು ಸ್ಪಷ್ಟವಾಗಿ ದೇಹದೊಡನೆಯೇ ಇದ್ದು, ವಿಷಯಗಳನ್ನುಂಡು ದೇಹವನ್ನು ಬಿಟ್ಟು ತೆರಳು ತ್ತಿರುವ, ನೇರಾಗಿ ಅನುಭವಕ್ಕೆ ಬರುತ್ತಿರುವ, ಈ ಆತ್ಮನನ್ನು ಮೂಢರು– ಅರಿ ಯದೆ ಇರುವರಲ್ಲ! ಎಂದು ಭಗವಂತನು ಮರುಕವನ್ನು ತೋರಿಸಿರುತ್ತಾನೆ. ಅವರೆ ಬಾಹ್ಯೇಂದ್ರಿಯಗಳಿಂದ ಇವನನ್ನು ಕಾಣಲಶಕ್ಯವಾಗಿರುತ್ತಿದ್ದರೂ ಯಾರು ಜ್ಞಾನವೆಂಬ ಚಕ್ಷುಸ್ಸಿನಿಂದ ನೋಡುವರೋ, ಅವರಿಗೆ ಇವನು ಕಾಣಿಸುತ್ತಾನೆ. ದೇಹವಿರುವಾಗಲೂ ದೇಹವಿಲ್ಲದಾಗಲೂ ಆತ್ಮನು ಇರುವದು ಅನ್ವಯವ್ಯತಿರೇಕ ಗಳಿಂದ ಅನುಭವಿಗಳಿಗೆ ಗೊತ್ತಾಗುತ್ತಿದೆ. ಅನುಭವರೂಪನಾದ ಆತ್ಮನಿಂದಲೇ ಅಲ್ಲವೆ, ದೇಹವೂ ಇಂದ್ರಿಯಗಳೂ ನಮಗೆ ತೋರಿಬರುತ್ತಿರುವದು ? ಯಾವ ದೀಪದಿಂದ ವಸ್ತುಗಳು ತೋರುತ್ತಿರುವವೋ ಆ ದೀಪವನ್ನು ಕಾಣುವದಕ್ಕೆ ಮತ್ತೊಂದು ದೀಪವೇನೂ ಬೇಕಿಲ್ಲವಷ್ಟೆ ? ಹಾಗೆಯೇ ಚೈತನ್ಯಪ್ರಕಾಶರೂಪ ನಾಗಿರುವ ಆತ್ಮನನ್ನು ನೇರಾಗಿಯೇ ಕಾಣಬಹುದು.

ಹೀಗೆ ಆತ್ಮಜ್ಞಾನಕ್ಕೆ ಮತ್ತೊಂದು ಸಾಧನವು ಬೇಕಿಲ್ಲದಿದ್ದರೂ ಬಾಹ್ಯ ದೃಷ್ಟಿಯಿಂದ ನೋಡುವವರಿಗೆ ಅವನು ಕಾಣಿಸುವುದೇ ಇಲ್ಲ. ಶಸ್ತ್ರಚಿಕಿತ್ಸಕರಿಗೆ ಶರೀರದಲ್ಲಿ ರಕ್ತ, ಮಾಂಸ, ಮೂಳೆ- ಮುಂತಾದ ಧಾತುಗಳು ಕಾಣುವವೇ ಹೊರತು ಜಡವಾದ ಆತ್ಮನೂ ಅಲ್ಲಿ ಸಿಕ್ಕುವದಿಲ್ಲ. ಆತ್ಮನು ಅಚ್ಛೇದ್ಯನು, ಅದಾಹ್ಯನು, ಅಶೋಷ್ಯನು- ಎಂದುಮುಂತಾಗಿ ಶಾಸ್ತ್ರವು ಹೇಳುತ್ತಿದೆ. ದೇವಾಸಂಪದರಸ್ತರಿಗಳು ಒಮ್ಮೆ ನದಿಯಲ್ಲಿ ತೇಲಿಹೋಗುತ್ತಿದ್ದ ಒಂದು ಶವವನ್ನು ಕತ್ತರಿಸಿ ಎಲ್ಲೆಲ್ಲಿ ಹುಡುಕಿದರೂ ಯೋಗಿಗಳು ಹೇಳುವ ಮೂಲಾಧಾರವೇ ಮುಂತಾದ ಚಕ್ರಗಳು ಕಾಣಿಸಲೇ ಇಲ್ಲವಾದ್ದರಿಂದ ಆ ಚಕ್ರಗಳೇ ಇಲ್ಲವೆಂಬ ತೀರ್ಮಾನಕ್ಕೆ ಬಂದರಂತೆ! ಚಕ್ರಗಳು ಕಣ್ಣಿಗೆ ಕಾಣಿಸುವ ಸ್ಥೂಲವಸ್ತುಗಳಲ್ಲವೆಂಬುದನ್ನು ಅವರಿಗೆ ಅವರೆಗೆ ಯಾರೂ ಹೇಳಿದಲಿಲ್ಲ!

ಆತ್ಮನು ಜ್ಞಾತೃವೂ ಕರ್ತೃವೂ ಭೋಕ್ತೃವೂ ಆಗಿರುತ್ತಾನೆ- ಎಂಬುದು ನಮಗೆಲ್ಲ ತಿಳಿದಿದೆ. ಇದನ್ನು ಅರಿಯುತ್ತಿದ್ದೇನೆ, ಇದನ್ನು ಮಾಡುವೆನು, ಇದನ್ನು ಅನುಭವಿಸುವೆನು-ಎಂಬುದು ನಮ್ಮೆಲ್ಲರ ವ್ಯವಹಾರದಲ್ಲಿಯೂ ಅನುಭವಗೋಚರವಾಗಿರುತ್ತದೆ. ಆದರೆ ಇಲ್ಲಿ ಆತ್ಮನು ವಿಷಯಗಳನ್ನು ರಿಯುವದಕ್ಕೂ ಕರ್ಮಗಳನ್ನು ಮಾಡುವದಕ್ಕೂ ಕರ್ಮಫಲವನ್ನು ಅನುಭವಿಸುವದಕ್ಕೂ ಏನೇನು ಬೇಕು?-ಇದನ್ನು ಗೀತೆಯಲ್ಲಿ ಹೀಗೆಂದು ವಿವರಿಸಿರುತ್ತದೆ.

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಞ್ಚಮಮ್ ॥**
**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಞ್ಚೈತೇ ತಸ್ಯ ಹೇತವಃ ॥**

ಗೀ. ೧೮-೧೪, ೧೫

(೧) "ಅಧಿಷ್ಠಾನ"ವೆಂದರೆ ಇಚ್ಛೆ, ದ್ವೇಷ, ಸುಖ, ದುಃಖ, ಜ್ಞಾನ- ಮುಂತಾದವುಗಳು ತೋರಿಕೊಳ್ಳುವದಕ್ಕೆ ಆಶ್ರಯವಾಗಿರುವ ಶರೀರವು. (೨) **ಕರ್ತೃ**- ಎಂದರೆ ಕರ್ಮವನ್ನು ಮಾಡುವ, ದೇಹೇಂದ್ರಿಯೋಪಾಧಿಗಳಿಂದ ವಿಶಿಷ್ಟನಾದ ಜೀವನು. (೩) **ಕರಣಗಳು** ಎಂದರೆ ಚಕ್ಷುಃ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು- ಎಂಬ ರೂಪ, ಶಬ್ದ, ರಸ, ಗಂಧ, ಸ್ಪರ್ಶರೂಪವಾದ ವಿಷಯಗಳನ್ನು ಅರಿಯುವದಕ್ಕೆ ಬೇಕಾದ ಜ್ಞಾನೇಂದ್ರಿಯಗಳು ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ-ಎಂಬ ಕೆಲಸವನ್ನು ಮಾಡುವದಕ್ಕೆ ಕರಣವಾದ ಕರ್ಮೇಂದ್ರಿಯಗಳು, ಮತ್ತು ಮನಸ್ಸು. (೪) **ಚೇಷ್ಟೆಗಳು** ಎಂದರೆ ಪ್ರಾಣ, ಅಪಾನ,

ವ್ಯಾನ, ಉದಾನ, ಸಮಾನ—ಎಂಬ ಪಂಚಪ್ರಾಣಗಳ ವ್ಯಾಪಾರಗಳು. (೫) 'ದೈವ'ವೆಂದರೆ ಚಕ್ಷುರಾದೀಂದ್ರಿಯಗಳ ವ್ಯಾಪಾರಕ್ಕೆ ಅನುಗ್ರಾಹಕವಾಗಿರುವ ಆದಿತ್ಯಾದಿಗಳು. ಹೀಗೆ ಶರೀರವಾಙ್ಮನೋರೂಪವಾದ ತ್ರಿಕರಣಗಳಿಂದ ಮನುಷ್ಯನು ಮಾಡುವ ಕರ್ಮಗಳಿಗೆಲ್ಲ ಈ ಐದೂ ಬೇಕಾಗಿರುತ್ತವೆ. ವಿಷಯಗಳನ್ನು ನೋಡುವದು, ಕೇಳುವದು, ಮೂಸುವದು, ಮುಟ್ಟುವದು— ಮುಂತಾದ ಜ್ಞಾನಕ್ಕೆ ಬೇಕಾದ ಕರ್ಮವಾಗಲಿ, ಹಿಡಿಯುವದು, ಹೋಗುವದು—ಮುಂತಾದ ಕ್ರಿಯಾರೂಪವಾದ ಕರ್ಮವಾಗಲಿ ಆಗುವದಕ್ಕೆ ನಾಲ್ಕು ಉಪಕರಣಗಳಿಂದು ಕೂಡಿದ ಕರ್ತೃವಾದ ಜೀವನು ಬೇಕು. ಬರೆಯುವವನೊಬ್ಬನಿಗೆ ಲೇಖನಿ, ಮಸಿ, ಕಾಗದ—ಮುಂತಾದ ಉಪಕರಣಗಳು ಬೇಕೇಬೇಕಾಗಿರುವಂತೆ ಜೀವನಿಗೆ ಶರೀರೇಂದ್ರಿಯಪ್ರಾಣಗಳೂ ಸಹಾಯಕವಾದ ದೈವಿಕವಾದ ಉಪಕರಣವೂ ಬೇಕಾಗಿರುತ್ತವೆ. ಉಪಕರಣಗಳಿಂದ ಆರಿತು ಕರ್ಮವನ್ನು ಮಾಡಿ ಫಲವನ್ನು ಅನುಭವಿಸುವವನೇ ಜೀವಾತ್ಮನು, ಉಪಕರಣಗಳಿದ್ದರೂ ಬರೆಯುವವನು ಅವಕ್ಕಿಂತ ಬೇರೆಯಾಗಿದ್ದರೇ ಬರವಣಿಗೆಯೆಂಬ ಕೆಲಸವು ಆಗುವಂತೆ, ಶರೀರಾದಿಗಳಿಗಿಂತ ವ್ಯತಿರಿಕ್ತನಾದ ಆತ್ಮನಿರುವದರಿಂದಲೇ ಜ್ಞಾನವೂ ಕರ್ಮವೂ ಆಗುತ್ತಿರುವವು.

ಹೀಗಿದ್ದರೂ ಬಾಹ್ಯದೃಷ್ಟಿಯಿಂದ ನೋಡುವವರಿಗೆ ಆತ್ಮನು ಬೇರೆಯಾಗಿರಬೇಕೆಂದೆನಿಸುವದಿಲ್ಲ. ವಿಜ್ಞಾನವಾದಿಗಳಾದ ಬೌದ್ಧರು ವಿಜ್ಞಾನಕ್ಕಿಂತ ವ್ಯತಿರಿಕ್ತನಾದ ಆತ್ಮನೊಬ್ಬನು ಇರುವನೆಂಬುವದಕ್ಕೆ ಪ್ರಮಾಣವೇ ಇಲ್ಲ—ಎಂದು ವಾದಿಸುತ್ತಿದ್ದರು. ಪೂರ್ವಮೀಮಾಂಸಾಸೂತ್ರಗಳಿಗೆ ಭಾಷ್ಯವನ್ನು ಬರೆದ **ಶಬರಸ್ವಾಮಿಗಳು** 'ಯಾಗವನ್ನು ಮಾಡಿದ ಯಜಮಾನನು ಸ್ರುಕ್ಕು, ಸ್ರುವ—ಮುಂತಾದ ಯಜ್ಞಾಯುಧಗಳುಳ್ಳವನಾಗಿ ಸ್ವರ್ಗಲೋಕಕ್ಕೆ ಹೋಗುತ್ತಾನೆ'—ಎಂಬರ್ಥದ ಶ್ರುತಿಯ ಅಭಿಪ್ರಾಯವನ್ನು ಚರ್ಚಿಸುವ ಸಂದರ್ಭದಲ್ಲಿ 'ಈ ಯಜ್ಞಾಯುಧಿ ಎಂಬವನು ಯಾರು ? ಇವನು ಕಾಣಿಸುತ್ತಿಲ್ಲವಲ್ಲ !' ಎಂಬ ಆಕ್ಷೇಪವನ್ನು ತೆಗೆದು ಶರೀರಾದಿಗಳಿಗಿಂತ ಬೇರೆಯಾದ ಆತ್ಮನೊಬ್ಬನು ಇರಬೇಕು—ಎಂಬುದನ್ನು ಯುಕ್ತಿಯಿಂದ ಸ್ಥಾಪಿಸಿರುತ್ತಾರೆ. **ಕುಮಾರಿಲಭಟ್ಟರು** ಭಾಷ್ಯದಭಿಪ್ರಾಯವನ್ನು ವಿವರಿಸಿದ ಬಳಿಕ 'ನಾಸ್ತಿಕ್ಯವನ್ನು ನಿರಾಕರಣೆಮಾಡುವದಕ್ಕೋಸ್ಕರ ಇಲ್ಲಿ ಭಾಷ್ಯಕಾರರು ಹೀಗೆಂದು ಹೇಳಿರುತ್ತಾರೆ ; ಈ ಆತ್ಮಾಸ್ತಿತ್ವವು ವೇದಾಂತವನ್ನು ಅಭ್ಯಾಸಮಾಡುವದರಿಂದ ಸ್ಫುಟವಾಗುವದು' ಎಂದ್ರು ಬರೆದಿರುತ್ತಾರೆ. **'ಏಕ ಆತ್ಮನಃ ಶರೀರೇ ಭಾವಾತ್', 'ವ್ಯತಿರೇಕಸ್ತದ್ಭಾವಭಾವಿತ್ವಾನ್ನ ತೂಪಲಬ್ಧಿವತ್'** ಎಂಬ ( ವೇ. ಸೂ. ೩—೩—೫೩, ೫೪ ) ಸೂತ್ರಗಳ ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ ಆತ್ಮಸಿದ್ಧಿಯನ್ನು ಯುಕ್ತ್ಯನು

ಭವಗಳಿಂದ ಸಿದ್ಧಪಡಿಸಿರುತ್ತಾರೆ. ಬಾಹ್ಯಾಧ್ಯಾತ್ಮಿಕವಾದ ಭೂತಭೌತಿಕ ವಸ್ತುಗಳನ್ನು ನಾವು ಅರಿಯುತ್ತಿರುವುದರಿಂದ ಅರಿವಿನ ರೂಪವಾದ ಅನುಭವವೇ ಆತ್ಮನು ಎಂಬುದು ಇಲ್ಲಿ ಶಂಕರಾಚಾರ್ಯರು ಮಾಡಿರುವ ಸಿದ್ಧಾಂತದ ಸಾರವು.

ವ್ಯವಹಾರದಲ್ಲಿ ಆತ್ಮನು ಇದ್ದಾನೆಯೆ, ಇಲ್ಲವೆ ?–ಎಂಬ ಚರ್ಚೆಗೆ ಅಷ್ಟೇನೂ ಬೆಲೆಯಿಲ್ಲ. **'ನ ಹಿ ದೇಹವ್ಯತಿರಿಕ್ತಾತ್ಮಜ್ಞಾನಂ ಲೌಕಿಕೇಷು ಕರ್ಮಸೂಪಯುಜ್ಯತೇ ; ಸರ್ವಥಾ ದೃಷ್ಟಾರ್ಥಪ್ರವೃತ್ತ್ಯುಪಪತ್ತೇಃ । ವೈದಿಕೇಷು ತು ದೇಹಪಾತೋತ್ತರಕಾಲಫಲೇಷು ದೇಹವ್ಯತಿರಿಕ್ತಾತ್ಮಜ್ಞಾನಮನ್ತರೇಣ ಪ್ರವೃತ್ತಿರ್ನೋಪಪದ್ಯತ ಇತ್ಯುಪಯುಜ್ಯತೇ ವ್ಯತಿರೇಕ ವಿಜ್ಞಾನಮ್ ॥'** (ಸೂ. ಭಾ. ೩–೪–೨, ) ಲೌಕಿಕಕರ್ಮಗಳಲ್ಲಿ ಉಂಡರೆ ತೃಪ್ತಿಯಾಗುವದು ಎಂಬಂತೆ ದೃಷ್ಟಾರ್ಥವನ್ನು ಕಂಡು ಪ್ರವೃತ್ತಿಯಾಗಬಹುದಾಗಿರುತ್ತದೆ ; ಆದರೆ ದೇಹಪಾತವಾದ ಬಳಿಕ ಆಗುವ ಸ್ವರ್ಗಾದಿಫಲಗಳುಳ್ಳ ವೈದಿಕಕರ್ಮಗಳ ವಿಷಯದಲ್ಲಿ ಆತ್ಮನಿದ್ದಾನೆ ಎಂಬ ಜ್ಞಾನವಿದ್ದ ಹೊರತು, ಪ್ರವೃತ್ತಿಯುಂಟಾಗಲಾರದು. ಆದ್ದರಿಂದ ಇಲ್ಲಿ ಆತ್ಮಜ್ಞಾನವು ಅವಶ್ಯವಾಗಿರುತ್ತದೆ–ಎಂದು ಶಂಕರಾಚಾರ್ಯರು ಬರೆದಿರುತ್ತಾರೆ. ಆದ್ದರಿಂದಲೇ ಲೋಕದಲ್ಲಿ ಜನರು ಸಾಮಾನ್ಯವಾಗಿ ದೇಹವ್ಯತಿರಿಕ್ತನಾದ ಆತ್ಮನು ಇದ್ದಾನೆಯೆ ?– ಎಂಬ ವಿಚಾರದಲ್ಲಿ ಆಸಕ್ತಿಯನ್ನು ತೋರಿಸುತ್ತಿಲ್ಲ.

ಆತ್ಮನಿದ್ದಾನೆ ಎಂದು ನಂಬಿ ಧರ್ಮಾಧರ್ಮಗಳೇ ಮುಂತಾದ ವಿಚಾರದಲ್ಲಿ ಪ್ರಸಕ್ತರಾದವರು ಆತ್ಮಜ್ಞಾನಕ್ಕೆ ಪ್ರಯತ್ನಪಡಬೇಕಾಗಿರುತ್ತದೆ. ಇದಕ್ಕೆ **'ಪಶ್ಯನ್ತಿ ಜ್ಞಾನಚಕ್ಷುಷಃ'** (ಅನುಭವವೆಂಬ ಚಕ್ಷುಸ್ಸುಳ್ಳವರು ಆತ್ಮನನ್ನು ಅರಿತುಕೊಳ್ಳುತ್ತಾರೆ)–ಎಂಬ ವಾಕ್ಯವು ಸಹಾಯಕವಾಗಿರುತ್ತದೆ. **'ಸ್ವಪ್ನಾಂತಂ ಜಾಗರಿತಾಂತಂ ಚ ಉಭೌ ಯೇನಾನುಪಶ್ಯತಿ । ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ॥' (ಕಾ. ೪–೪)** ಎಂಬ ಶ್ರುತಿಯಲ್ಲಿ ಜಾಗ್ರತ್ ಸ್ವಪ್ನಗಳೆಂಬ ಎರಡು ಅವಸ್ಥೆಗಳನ್ನೂ ಅನುಭವಿಸುತ್ತಿರುವ ಆತ್ಮನು ಅವುಗಳೆರಡಕ್ಕಿಂತಲೂ ವ್ಯತಿರಿಕ್ತನಾಗಿ ಹೆಚ್ಚು ವ್ಯಾಪಕನಾಗಿರುತ್ತಾನೆ ಎಂಬ ಯುಕ್ತ್ಯುಪೇತಾನುಭವವನ್ನು ತೋರಿಸಿಕೊಟ್ಟಿರುತ್ತದೆ. ಜಾಗ್ರತ್ತಿನಲ್ಲಿರುವ ಶರೀರಾದಿಗಳು ಯಾವವೂ ಸ್ವಪ್ನದಲ್ಲಿರುವದಿಲ್ಲವೆಂಬುದು ಎಲ್ಲರ ಅನುಭವದಲ್ಲಿಯೂ ಇರುವದರಿಂದ ದೇಹಾದಿವ್ಯತಿರಿಕ್ತನಾದ ಆತ್ಮನ ಅಸ್ತಿತ್ವಕ್ಕೆ ಇದೊಂದು ಪ್ರಬಲವಾದ ಪ್ರಮಾಣವಾಗಿರುತ್ತದೆ. ಇನ್ನೂ ಸೂಕ್ಷ್ಮವಾದ ವಿಚಾರಶಕ್ತಿಯುಳ್ಳವರಿಗೆ **'ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್'** (ಗೀ.೨–೧೭) ಎಂಬ ಶ್ಲೋಕಾರ್ಥದ ಜ್ಞಾನವೇ ಸಾಕಾಗಿರುತ್ತದೆ. ಆತ್ಮನು ಚೈತನ್ಯಸ್ವರೂಪನಾಗಿದ್ದು ಎಲ್ಲವನ್ನೂ ಬೆಳಗುತ್ತಿರುವ

ವಲ್ಲದೆ, ಎಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನೆ. ಚೈತನ್ಯಕ್ಕೆ ಸಂಬಂಧ ಪಡದೆ ಇರುವ ಬೇರಾವ ವಸ್ತುವಿನ ಜ್ಞಾನವೂ ನಮಗೆ ಆಗಲೇ ಆರದಾದ್ದರಿಂದ ದೇಹಾದಿಗಳೆಲ್ಲವೂ— ಮಂಜಿನಗಡ್ಡೆಯು ನೀರಿನಿಂದ ವ್ಯಾಪ್ತವಾಗಿರುವಂತೆ—ಆತ್ಮಚೈತನ್ಯದಿಂದಲೇ ವ್ಯಾಪ್ತವಾಗಿರುತ್ತವೆ ಎಂಬುದನ್ನು ಮನದಂದುಕೊಂಡವರಿಗೆ ಆತ್ಮನೊಬ್ಬನೇ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಪರಮಾರ್ಥ ಎಂಬುದು ಮನದಟ್ಟಾಗುವದು. ಆತ್ಮನು ಇಲ್ಲ, ಆತ್ಮನು ಇಂಥಲ್ಲಿ ಅನುಭವಕ್ಕೆ ಬರುವದಿಲ್ಲ— ಎನ್ನುವಂತೆಯೇ ಇಲ್ಲ. 'ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ' ಇದನು ಕಾಣದಂತೆ ಮಾಡುವ ವಕ್ತಿ ಯಾವುದಿಂದಲೂ ಆಗಲಾರದು. ಯಾವನು ಆತ್ಮನನ್ನು ಇಲ್ಲವೆಂದು ವಾದಿಸುವನೋ ಅವನ ಸ್ವರೂಪವೇ ಆತ್ಮನಾಗಿರುತ್ತದೆ. 'ನಾನಿಲ್ಲ' ಎಂದು ಕಲ್ಪಿಸುವದೇ ಯಾರಿಗೂ ಶಕ್ಯವಿಲ್ಲ.

ಪರಮುಕೃಪ್ರತವೇನೆಂದರೆ: ಆತ್ಮನು ಪ್ರತ್ಯಕ್ಷವಿಷಯನಲ್ಲದಿದ್ದರೂ ಶಾಸ್ತ್ರವು ತೋರಿಸಿಕೊಟ್ಟಿರುವ ರೀತಿಯಿಂದ ಆತ್ಮನು ಇದ್ದಾನೆ. ಅವನಿಗೆ ಧರ್ಮಾಧರ್ಮಗಳ ಸಂಬಂಧದಿಂದ ಲೋಕಾಂತರಜನ್ಮಾಂತರಸಂಬಂಧವಾಗುತ್ತಿದೆಯೆಂದು ಆಸ್ತಿಕರಾದವರು ಅರಿತುಕೊಳ್ಳಬಹುದಾಗಿರುತ್ತದೆ.

# ೬. ದೇವತೆಗಳು, ಋಷಿಗಳು, ಪಿತೃಗಳು

(4–8–69)

ಶಾಸ್ತ್ರಜ್ಞಾನಕ್ಕೆ ಶ್ರದ್ಧೆಯು ಅವಶ್ಯ. ಜನ್ಮಾಂತರಸಂಬಂಧಿಯಾದ, ಲೋಕಾಂತರಸಂಬಂಧಿಯಾದ ಆತ್ಮನು ಇದಾನೆ ಎಂಬುದಕ್ಕೆ ಶಾಸ್ತ್ರವೇ ಪ್ರಮಾಣ. ಈ ತಿಳಿವಳಿಕೆಯು ಶಾಸ್ತ್ರದಲ್ಲಿರುವ ಶ್ರದ್ಧೆಯಿಂದಲೇ ದೊರಕಬೇಕಾಗಿರುತ್ತದೆ. ಇದರ ಜೊತೆಗೆ ಇಲ್ಲಿಯೇ ಕಾಣಬಹುದಾಗಿದ್ದರೂ ಸೂಕ್ಷ್ಮವಾಗಿರುವ ವಸ್ತುವಿನ ಜ್ಞಾನಕ್ಕೂ ಶ್ರದ್ಧೆಯು ಬೇಕಾಗುತ್ತದೆ. ಶಾಸ್ತ್ರಜನ್ಯಜ್ಞಾನಕ್ಕೆ ಹೇಗೋ ಹಾಗೆ ಇಂದ್ರಿಯಗೋಚರವಾಗುವ ವಸ್ತುಗಳ ಜ್ಞಾನಕ್ಕೂ ಶ್ರದ್ಧೆಯು ಬೇಕಾಗುತ್ತದೆ. ಮಣ್ಣಿನಲ್ಲಿಯೇ ಅಲ್ಯುಮಿನಿಯಂ ಲೋಹವು ಇದೆ— ಎಂಬುದನ್ನು ಪರೀಕ್ಷಿಸಿ ಕೆಲವು ಕಲ್ಪನೆಗಳನ್ನು ಮಾಡಿಕೊಂಡು ಶ್ರದ್ಧೆಯಿಂದ ಅನ್ವೇಷಣೆಯನ್ನು ಮಾಡದಿದ್ದರೆ ಭೌತಿಕ

ಶಾಸ್ತ್ರಜ್ಞರಿಗಾದರೂ ಅದು ತಿಳಿಯುತ್ತಿತ್ತೆ ? ಈಗ ಹೊಸಹೊಸದಾಗಿ ಮಾಡಿರುವ ಶೋಧನೆಗಳಿಗೆ ಶ್ರದ್ಧೆಯೇ ಮೂಲಾಧಾರವಾಗಿರುತ್ತದೆ. ಅತೀಂದ್ರಿಯವಾಗಿರುವ ಆತ್ಮಾದಿತತ್ತ್ವಗಳ ಜ್ಞಾನಕ್ಕೆ ಶ್ರದ್ಧೆಯು ಅತ್ಯಂತಆವಶ್ಯವಾಗಿರುತ್ತದೆ. **'ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ'** (ಗೀ.೪-೩೯) ಶಾಸ್ತ್ರಾಚಾರ್ಯವಚನದಲ್ಲಿ ಶ್ರದ್ಧೆಯಿದ್ದವನಿಗೇ ಆತ್ಮಜ್ಞಾನವು ದೊರಕುತ್ತದೆ. ಶ್ರದ್ಧೆಯಿದ್ದರೂ ಅದರಲ್ಲಿಯೇ ತಾತ್ಪರ್ಯವಿಲ್ಲದಿದ್ದರೆ ಅವನಿಗೆ ಎಂದಿಗೂ ಜ್ಞಾನವುಂಟಾಗಲಾರದು. ಆದ್ದರಿಂದ ಆತ್ಮಜ್ಞಾನವೇ ನನಗೆ ಬೇಕು ಎಂದು ತಾತ್ಪರ್ಯದಿಂದ ಶೋಧನೆಗೆ ಹೊರಟವನು ಜ್ಞಾನಕ್ಕೆ ಅಧಿಕಾರಿಯಾಗುವನು. ಇವೆರಡೇ ಅಲ್ಲದೆ ಇಂದ್ರಿಯಜಯವೂ ಆತ್ಮಾನ್ವೇಷಕನಿಗೆ ಬೇಕಾಗಿರುತ್ತದೆ. ಬಾಹ್ಯವಿಷಯಗಳಲ್ಲಿ ಆಸಕ್ತನಾಗಿರುವವನಿಗೆ ಎಲ್ಲಕ್ಕೂ ಒಳಗಿರುವ, ಸರ್ವಸೂಕ್ಷ್ಮನಾಗಿರುವ ಆತ್ಮನ ಜ್ಞಾನವು ಹೇಗೆತಾನೆ ದೊರಕೀತು ? ಆದ್ದರಿಂದ ಶ್ರದ್ಧೆ, ತಾತ್ಪರ್ಯ, ಇಂದ್ರಿಯಜಯ– ಈ ಮೂರೂ ಅತೀಂದ್ರಿಯಜ್ಞಾನಕ್ಕೆ ಅತ್ಯವಶ್ಯವಾಗಿರುತ್ತವೆ.

ಕರ್ತೃಭೋಕ್ತೃವಾದ ಆತ್ಮನು ಇದ್ದಾನೆ ಎಂಬ ಸಾಮಾನ್ಯಜ್ಞಾನವಿದ್ದರೂ ಇಲ್ಲಿ ಅಧಿಷ್ಠಾನವಾದ ಶರೀರ, ಕರಣಗಳು, ಪ್ರಾಣದ ವ್ಯಾಪಾರಗಳು, ಮತ್ತು ಕರಣಾನುಗ್ರಾಹಕರಾದ ಆದಿತ್ಯಾದಿದೇವತೆಗಳು ಇದ್ದಾರೆ ಎಂದು ತಿಳಿದುಕೊಳ್ಳುವದು ಅವಶ್ಯ. ದೇವತೆಯೆಂದರೆ ಕಣ್ಣಿಗೆ ಕಾಣುವ ಆದಿತ್ಯಮಂಡಲಾದಿಗಳು ಮಾತ್ರವೇ ಅಲ್ಲ; ಚಂದ್ರಮಂಡಲಕ್ಕೆ ಹೋಗಿ ಅಲ್ಲಿಂದ ಮಣ್ಣು ತಂದವರಿಗೂ ಚಂದ್ರದೇವತೆಯ ಜ್ಞಾನವಾಗಿರುವದಿಲ್ಲ. ಭೂಮಿಯಮೇಲೆಯೇ ಓಡಾಡುತ್ತಿರುವವರಿಗೆ ಭೂದೇವಿಯ ಅರಿವಾಗಿರುತ್ತದೆಯೇನು ? ಇಲ್ಲವಷ್ಟೆ. ಭೌತಿಕಜ್ಞಾನದ ಅಭಿನಿವೇಶವು ದಿನದಿನಕ್ಕೂ ಹೆಚ್ಚುತ್ತಿರುವ ಈ ಕಾಲದಲ್ಲಿ ಅತೀಂದ್ರಿಯವಾಗಿರುವ ದೇವತೆಗಳೂ ಇದ್ದಾರೆ– ಎಂಬ ಶ್ರದ್ಧೆಯು ಹುಟ್ಟುವದು ಕಷ್ಟವೇ ಸರಿ;

ಹಿಂದಿನ ಕಾಲದಲ್ಲಿಯೂ ವೈದಿಕವಾಕ್ಯಗಳ ವಿಚಾರಮಾಡುವವರು ಎರಡು ತಂಡದವರಾಗಿದ್ದರು. ಐತಿಹಾಸಿಕರು ಯಥಾದೃಷ್ಟವಾದಿಗಳಾಗಿದ್ದರು; ಅವರು ಆದಿತ್ಯನೆಂದರೆ ಸೂರ್ಯಬಿಂಬವೇ, ಪರ್ಜನ್ಯವೆಂದರೆ ಮಳೆಯೇ– ಎಂದು ಅಭಿಪ್ರಾಯಪಟ್ಟಿದ್ದರು; ಸಾಂಪ್ರದಾಯಿಕರು ಆದಿತ್ಯಮಂಡಲಕ್ಕಿಂತ ಬೇರೆಯಾಗಿ ಆದಿತ್ಯಾಭಿಮಾನಿದೇವತೆಯಿದೆ, ಮಳೆಗಿಂತ ವ್ಯತಿರಿಕ್ತವಾದ ಪರ್ಜನ್ಯನೆಂಬ ಅಭಿಮಾನಿದೇವತೆಯಿದೆ ಎಂದು ಹೇಳುತ್ತಿದ್ದರು. ಈ ವಿಚಾರವು ಯಾಸ್ಕರ ನಿರುಕ್ತದಲ್ಲಿ ಬಂದಿರುತ್ತದೆ. ಸೂರ್ಯನ ರಶ್ಮಿಗಳ ಅನುಗ್ರಹವಿಲ್ಲದೆ ಕಣ್ಣು ಕಾಣಿಸಲಾರದು ಎಂಬುದು ಸ್ಫುಟವಾಗಿರುತ್ತಿದ್ದರೂ ಆದಿತ್ಯಮಂಡಲಕ್ಕೆ ಅಭಿಮಾನಿಯಾದ ದೇವತೆ ಬೇರೆಯಿದೆ ಎಂದು ನಂಬುವವರು ಮಾತ್ರ ಸೂರ್ಯನಮ

ಸ್ಮಾರವೇ ಮುಂತಾದ ಕರ್ಮಗಳನ್ನು ಮಾಡುತ್ತಾರೆ. ಯಾವನಿಗೆ ಏತರಲ್ಲಿ ಶ್ರದ್ಧೆಯಿರುವದೋ ಅವನು ಅದರಿಂದ ತನ್ಮಯನಾಗಿಬಿಡುತ್ತಾನೆ. ಹೀಗಿರುವದ ರಿಂದ ದೇವತೆಗಳು, ಪಿತೃಗಳು, ಋಷಿಗಳು—ಮುಂತಾದ ಅತೀಂದ್ರಿಯಚೇತನರು ಇದ್ದಾರೆ ಎಂಬ ವಿಷಯದಲ್ಲಿ ಶ್ರದ್ಧೆಯಿರುವವರೇ ವೈದಿಕಕರ್ಮಕ್ಕೆ ಅಧಿಕಾರಿಗಳಾ ಗಿರುತ್ತಾರೆ : ಅಂಥವರಿಗೇ ಆ ಕರ್ಮಗಳ ಅನುಷ್ಠಾನದಿಂದ ಅತೀಂದ್ರಿಯವಾದ ಪ್ರಕಾರಗಳಿಂದ ದೃಷ್ಟಾದೃಷ್ಟಫಲಗಳು ಲಭಿಸುತ್ತವೆ.

'ಋಷಿ' ಎಂದರೆ ಅತೀಂದ್ರಿಯವಾಗಿರುವ ಸೂಕ್ಷ್ಮಾರ್ಥವನ್ನು ಕಂಡು ಕೊಂಡಿರುವನಾತನು. ವೇದದಲ್ಲಿ ಪ್ರತಿಯೊಂದು ಮಂತ್ರಕ್ಕೂ ಋಷಿ, ಛಂದಸ್ಸು, ದೇವತೆ—ಎಂಬೀ ಮೂರು ಇರುತ್ತವೆ. ಮಂತ್ರಗಳನ್ನು ವಿನಿಯೋಗಿಸಿ ಕರ್ಮ ಗಳನ್ನು ಮಾಡುವಾಗ ಆಯಾ ಮಂತ್ರದ ದೇವತೆ, ಛಂದಸ್ಸು, ಋಷಿ— ಇವುಗಳ ಹೆಸರನ್ನು ಕೃತಜ್ಞತೆಯಿಂದ ಉಚ್ಚರಿಸಿ, ಅಥವಾ ಸ್ಮರಿಸಿಯೇ ಕರ್ಮವನ್ನು ಮಾಡಬೇಕೆಂಬ ನಿಯಮವಿದೆ. ಭೌತಿಕವಾದ ಸೂಕ್ಷ್ಮತತ್ತ್ವಗಳನ್ನು ಕಂಡು ಹಿಡಿದಿರುವವರೂ ಒಂದರ್ಥದಲ್ಲಿ ಆಯಾ ವಿಷಯಕ್ಕೆ ಋಷಿಗಳು ಎನ್ನಬಹುದಾ ಗಿದೆ. ಶಾಸ್ತ್ರೀಯವಾದ ತತ್ತ್ವಗಳು ಸೂಕ್ಷ್ಮ ಎನ್ನುವಾಗ ಬಹಳ ಸಣ್ಣವು ಎಂದೇನೂ ಅರ್ಥವಲ್ಲ, ಗೋಧಿಯನ್ನು ಒಂದು ಯಂತ್ರದ ಮೂಲಕ ಎಷ್ಟೇ ಸಣ್ಣದಾಗಿ ಒಡೆದರೂ ಆ ರವೆ ಸೂಕ್ಷ್ಮವಲ್ಲ, ಅದನ್ನು ಶಾಸ್ತ್ರಜ್ಞರು ಸ್ಥೂಲ ಪ್ರಪಂಚದಲ್ಲಿಯೇ ಸೇರಿಸಿರುತ್ತಾರೆ. ಏಕೆಂದರೆ ಅದು ಸಾಮಾನ್ಯರ ಕಣ್ಣಿಗೆ ಕಾಣಿಸದಷ್ಟು ಸಣ್ಣದಾಗಿದ್ದರೂ ಯಂತ್ರಾದಿಗಳ ಸಹಾಯದಿಂದ ಕಾಣುವದಕ್ಕೆ ತಕ್ಕದ್ದಾಗಿರುತ್ತದೆ.

ದೇವತೆಗಳೆಂದರೆ ಬರಿಯ ಕಲ್ಪನಾಮಾತ್ರವೆಂದು ಬಗೆಯಬಾರದು. ಕೆಲ ವರು ಯಜ್ಞಾದಿಕರ್ಮಗಳಿಂದ ಫಲವಾಗುವದೆಂಬ ಶಾಸ್ತ್ರವನ್ನು ನಂಬಿ ಕರ್ಮ ವನ್ನು ಮಾಡುತ್ತಾರೆ ; ಆದರೆ ಅವರಿಗೆ ಫಲದಾತೃಗಳಾದ ದೇವತೆಗಳು ಇದ್ದಾರೆ ಎಂಬ ನಂಬಿಕೆಯೇನೂ ಇರುವದಿಲ್ಲ. ಅಳಿಯನಿಲ್ಲದೆ ಮದುವೆ ಎಂದರೆ ಹೇಗೋ ಹಾಗೆ ದೇವತೆಗಳಿಲ್ಲದ ಯಜ್ಞಕರ್ಮವೆಂದರೂ ಹಾಗೆಯೇ. ಕೆಲವು ವರ್ಷಗಳ ಹಿಂದೆ ವಿದ್ಯಾಭ್ಯಾಸಇಲಾಖೆಯಲ್ಲಿ ದೊಡ್ಡ ಹೆಚ್ಚಿನ ಅಧಿಕಾರಪದವಿಯನ್ನು ಪಡೆದುಕೊಂಡಿದ್ದ ಮಹಾಶಯರೊಬ್ಬರು ಬೆಂಗಳೂರಿನಲ್ಲಿದ್ದರು. ಯಜ್ಞಾದಿ ಗಳನ್ನು ಮಾಡುವದರಿಂದ ಮಳೆಯಾಗುತ್ತದೆ, ಮಳೆಯಿಂದ ಅನ್ನವೂ ಅದರಿಂದ ಪ್ರಜೆಗಳೂ ಲಭಿಸುತ್ತವೆ—ಎಂಬ ಸ್ಮೃತಿವಾಕ್ಯವನ್ನು ಕೇಳಿದಾಗ ಅವರು ಆ ವಚನದಲ್ಲಿ ಅಶ್ರದ್ಧೆಯಿಂದ 'ಸಹರಾ ಮುಂತಾದ ಮರುಭೂಮಿಗಳಲ್ಲಿಯೂ ಮಳೆಯು ಬರಬಹುದಷ್ಟೆ ? ಅಲ್ಲಿ ಯಜ್ಞಮಾಡಿದವರು ಯಾರು ? ಈ ಲೋಕ ದಲ್ಲಿಯೂ ಯಜ್ಞವನ್ನು ಮಾಡಿದಾಗ ಮಳೆಯು ಬೀಳದೆ ಇರುತ್ತದೆ : ಮಾಡದೆ

ಇರುವ ಸ್ಥಳಗಳಲ್ಲಿಯೂ ಮಳೆಯು ಬೀಳುತ್ತದೆಯಲ್ಲವೆ' ? ಎಂದು ಆಕ್ಷೇಪಿಸಿದರು. ಆಗ ನಾನು 'ಮಳೆ ಎಂದರೆ ಮೋಡದಿಂದ ಸುರಿಯುವ ನೀರಿನ ಧಾರೆ ಮಾತ್ರವಲ್ಲ : ಪ್ರಜೆಗಳೆಂದರೆ ವರ್ಷಕ್ಕೊಂದರಂತೆ ಬರುವ ಮಕ್ಕಳೂ ಅಲ್ಲ. ಪರ್ಜನ್ಯನು ಅನುಗ್ರಹಿಸುವ ಮಳೆಯು ಶ್ರದ್ಧೆಯಿಂದ ಕರ್ಮವನ್ನು ಮಾಡುವವರಿಗೆ ಕಾಲಕ್ಕೆ ಸರಿಯಾಗಿ ಸುಕ್ಷೇತ್ರದಮೇಲೆ ಸುರಿಯುವ ವೃಷ್ಟಿ ವಿಶೇಷವು. ಪುನ್ನಾಮನರಕದಿಂದ ತಂದೆಯನ್ನು ಕಾಪಾಡುವ ಮಗನೇ ಪುತ್ರನು. ಹೀಗೆಯೇ ಯಜ್ಞಾದಿಧರ್ಮಕಾರ್ಯಗಳಲ್ಲಿ ಸಹಾಯಕಳಾಗಿರುವ ಹೆಂಡತಿಯೇ ಪತ್ನಿ ; ಇಲ್ಲದಿದ್ದರೆ ಅವಳು ಬರಿಯ ಭಾರ್ಯೆ. ಈಗ್ಗೆ ಪ್ರೇಮದಿಂದ ಕೆಲವುಕಾಲ ಒಬ್ಬರೊಡನೊಬ್ಬರು ಭೋಗಲಾಲಸರಾಗಿದ್ದು ಆ ಬಳಿಕ ಸೋಡಚೀಟಿಯನ್ನು ಬರೆದು ಅಗಲುವ ಸ್ತ್ರೀಪುರುಷರನ್ನು ಈ ಅರ್ಥದಲ್ಲಿ ದಂಪತಿಗಳೆಂದು ಕರೆಯುವದಕ್ಕೆ ಆಗುವದಿಲ್ಲ. ಶ್ರದ್ಧೆಯಿಂದ ಮಾಡಿದ ಕರ್ಮಕ್ಕೆ ಆಗುವ ಸತ್ಸಂತಾನವನ್ನು ಅತ್ತಿಯ ಹಣ್ಣಿನಲ್ಲಿ ಹುಟ್ಟುವ ಹುಳುಗಳಿಗೆ ಹೋಲಿಸುವದು ಸರಿಯಲ್ಲ !'– ಎಂದು ಅವರಿಗೆ ಸಮಾಧಾನವನ್ನು ಹೇಳಿದೆನು.

ದೇವತೆಗಳು ಅಧರ್ಮಬಾಹುಲ್ಯದಿಂದ ಕೇವಲ ಚರ್ಮಚಕ್ಷುಗಳಾಗಿರುವ ಈಗಿನವರಿಗೆ ಕಾಣಿಸದೆ ಇರಬಹುದು. ಆದಮಾತ್ರದಿಂದ ಅವರ ದರ್ಶನವೇ ನಮಗೆ ಆಗಲಾರದು ಎಂದು ಹೇಳುವದು ದಿಟ್ಟತನ. ಬಾದರಾಯಣಸೂತ್ರದ (ವೇ. ಸೂ. ೧–೩–೩೩)ರ ಭಾಷ್ಯವನ್ನು ಬರೆದಿರುವ **ಶಂಕರಾಚಾರ್ಯರು "ಭವತಿ ಹಿ, ಅಸ್ಮಾಕಮ್ ಅಪ್ರತ್ಯಕ್ಷಮಪಿ ಚಿರನ್ತನಾನಾಂ ಪ್ರತ್ಯಕ್ಷಮ್ ತಥಾ ಚ ವ್ಯಾಸಾದಯೋ ದೇವಾದಿಭಿಃ ಪ್ರತ್ಯಕ್ಷಮ್ ವ್ಯವಹರನ್ತೀತಿ ಸ್ಮರ್ಯತೇ । ಯಸ್ತು ಬ್ರೂಯಾತ್ ಇದಾನೀಂತನಾನಾಮಿವ ಪೂರ್ವೇಷಾಮಪಿ ನಾಸ್ತಿ ದೇವಾದಿಭಿರ್ವ್ಯವಹರ್ತುಂ ಸಾಮರ್ಥ್ಯಮ್–ಇತಿ, ಸ ಜಗದ್ವೈಚಿತ್ರ್ಯಂ ಪ್ರತಿಷೇಧೇತ್ |....ತಸ್ಮಾತ್, ಧರ್ಮೋತ್ಕರ್ಷವಶಾತ್ ಚಿರನ್ತನಾಃ ದೇವಾದಿಭಿಃ ಪ್ರತ್ಯಕ್ಷಂ ವ್ಯವಜಹ್ರುರಿತಿ ಶ್ಲಿಷ್ಯತೇ ||"** (ದೇವತೆಗಳು) ನಮ್ಮಗಳಿಗೆ ಅಪ್ರತ್ಯಕ್ಷವಾಗಿದ್ದರೂ ಹಿಂದಿನವರಿಗೆ ಪ್ರತ್ಯಕ್ಷವಾಗಿದ್ದಿರಬಹುದಾಗಿದೆ. 'ಈಗಿನಂತೆ ಹಿಂದಿನವರಿಗೂ ದೇವಾದಿಗಳೊಡನೆ ವ್ಯವಹರಿಸುವದಕ್ಕೆ ಸಾಮರ್ಥ್ಯವಿರಲಿಲ್ಲವೆನ್ನಬೇಕು' ಎಂದು ಯಾವನಾದರೂ ಆಕ್ಷೇಪಿಸಿದರೆ ಅವನು ಜಗದ್ವೈಚಿತ್ರ್ಯವನ್ನೇ ಇಲ್ಲವೆಂದಾನು. ಆದ್ದರಿಂದ ಹಿಂದಿನವರು ಧರ್ಮಾತಿಶಯವಶದಿಂದ ದೇವಾದಿಗಳೊಡನೆ ವ್ಯವಹರಿಸುತ್ತಿದ್ದರು ಎಂಬುದೇ ಯುಕ್ತ' ಎಂದಿರುತ್ತಾರೆ. ದಶರಥನು ದೇವತೆಗಳಿಗೆ ಸಹಾಯಮಾಡುವದಕ್ಕಾಗಿ ದ್ಯುಲೋಕಕ್ಕೆ ಹೋಗಿದ್ದನೆಂದು ರಾಮಾಯಣದಲ್ಲಿಯೂ ಅರ್ಜುನನು ನಿವಾತಕವಚರನ್ನು ಯುದ್ಧದಲ್ಲಿ ಸೋಲಿಸಿ ಸಹಾಯಮಾಡುವದಕ್ಕೆ ಇಂದ್ರಲೋಕಕ್ಕೆ ಹೋಗಿದ್ದ

ಸಿದ್ದ ಮಹಾಭಾರತದಲ್ಲಿಯೂ ಬರೆದಿರುವ ಉಪಾಖ್ಯಾನಗಳೂ ಉಲ್ಲೇಖಿಸಲ್ಪಟ್ಟಿರುತ್ತವೆ. 'ಸ್ವಾಧ್ಯಾಯಾದಿಷ್ಟದೇವತಾಸಂಪ್ರಯೋಗಃ' (ಯೋ. ಸೂ.) ಎಂಬ ಪಾತಂಜಲಸೂತ್ರದಲ್ಲಿ ಮಂತ್ರಪುರಶ್ಚರಣಾದಿಗಳಿಂದ ಈಗಲೂ ಇಷ್ಟದೇವತೆಯು ಸಾಕ್ಷಾತ್ಕಾರವಾಗುವದೆಂದಿದೆ. ಆದ್ದರಿಂದ ಈಗಲೂ ಶ್ರದ್ಧಾತಿಶಯದಿಂದ ತಕ್ಕ ಸಾಧನವನ್ನು ಅನುಷ್ಠಾನಮಾಡಿದರೆ ದೇವತೆಗಳನ್ನು ಕಾಣಬಹುದು ಎಂದಾಗುತ್ತದೆ. ಗುರುಗಳ ವಚನವನ್ನು ಶ್ರದ್ಧೆಯಿಂದ ಪಾಲಿಸಿ ಜೋಳದಗಿಡದ ಕುಡಿಗಳನ್ನು ಕತ್ತರಿಸಿಹಾಕಿದ ಶಿಷ್ಯನಿಗೆ– ಪೈರುಹೋಗುವ ಅಂಜಿಕೆಯೂ ಇಲ್ಲದೆ, ಕಣಜದಲ್ಲಿದ್ದ ಧಾನ್ಯವನ್ನು ಸರಕಾರದವರ ಕಂದಾಯಕ್ಕಾಗಿ ಕೊಟ್ಟಿದ್ದರಿಂದಾದ ನಷ್ಟವನ್ನೂ ಸಹಿಸಿಕೊಂಡದ್ದು ಪ್ರತ್ಯಕ್ಷಪ್ರಧಾನರಾದವರ ದೃಷ್ಟಿಯಿಂದ ಉಪಹಾಸ್ಯವಾಗಿ ಕಂಡಿದ್ದರೂ– ಅಕಾಲದಲ್ಲಿ ಮಳೆಬಂದು ಇತರರ ಪೈರು ನಷ್ಟವಾಗಿ ಅವನ ಜೋಳದ ಗಿಡಗಳು ಮಾತ್ರ ಕವಲುಕವಲಾಗಿ ಒಡೆದುಕೊಂಡು ಅಧಿಕವಾದ ಪೈರು ಕೈಗೆ ಸಿಕ್ಕಿತೆಂಬ ಗುರುಚರಿತ್ರೆಯ ಆಖ್ಯಾನವು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ.

ದೇವತೆಗಳಲ್ಲಿ ಹೇಗೋ ಹಾಗೆ ಋಷಿಗಳಲ್ಲಿಯೂ ಪಿತೃಗಳಲ್ಲಿಯೂ ಶ್ರದ್ಧೆಯಿರುವವರಿಗೆ ಅತೀಂದ್ರಿಯವಾದ ಪ್ರಕಾರದಿಂದ ಇಷ್ಟಾರ್ಥವು ಲಭಿಸುತ್ತದೆ–ಎಂದು ನಂಬಬೇಕು. ಈಗಲೂ ಉಪಾಕರ್ಮಾದಿಗಳನ್ನು ಆಚರಿಸುವವರು ಶಾಸ್ತ್ರದಲ್ಲಿ ಹೇಳಿರುವಂತೆ ವೇದಾಧ್ಯಯನವನ್ನು ಪ್ರಾರಂಭಿಸಿ ಸಕಾಲದಲ್ಲಿ ಉತ್ಸರ್ಜನಮಾಡಿದರೆ ಅವರು ಅಭ್ಯಾಸಮಾಡಿದ ವೇದವು ಅವರಿಗೆ ಬ್ರಹ್ಮವರ್ಚಸಾದಿಗಳನ್ನು ಕೊಟ್ಟು ಕಾಪಾಡೀತು. ಹೀಗೆಯೇ ಶ್ರಾದ್ಧಕಾಲದಲ್ಲ ಶ್ರದ್ಧೆಯಿಂದ ಆಮಂತ್ರಣಮಾಡಿದ್ದ ಬ್ರಾಹ್ಮಣರಲ್ಲಿ ಪಿತೃಗಳನ್ನು ಆವಾಹನೆಮಾಡಿದಾಗ ಆ ಶ್ರಾದ್ಧವು ತಮ್ಮ ತಂದೆ, ಅಜ್ಜ, ಮುತ್ತಜ್ಜ– ಇವರಿಗೆ ಅದೃಷ್ಟರೂಪದಿಂದ ತಲುಪುವದೆಂದೂ ಅವರ ಹೆಸರಿನಲ್ಲಿ ಮಾಡಿದ ಪಿಂಡಗಳನ್ನು ಆರಾಧಿಸುವ ಮೂಲಕ ಪಿತ್ರಾದಿಗಳನ್ನು ತೃಪ್ತಿಗೊಳಿಸಬಹುದೆಂಬುದನ್ನು ನಂಬಿ ಕರ್ಮಾಚರಣೆಯನ್ನು ಮಾಡುವವರಿಗೆ ಉತ್ಕೃಷ್ಟಫಲಗಳು ಬರುವವೆಂದೂ ನಾವು ನಂಬಬೇಕು. ಭಗವದ್ಗೀತೆಯಲ್ಲಿ ದೇವತೆಗಳು, ಋಷಿಗಳು, ಪಿತೃಗಳು– ಇವರ ವಿಚಾರವು ಬಂದಿದೆ. ಆದರೂ ನಾವು ಗೀತೆಯನ್ನು ಬಿಡಲೂ ಆರೆವು : ಅದರಲ್ಲಿ ಹೇಳಿರುವಂತೆ ಆಚರಿಸುವದಕ್ಕೆ ತಕ್ಕ ಶ್ರದ್ಧೆಯೂ ನಮಗೆ ಬಂದಿರುವದಿಲ್ಲ. 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ' ಎಲ್ಲಾ ಶರೀರಗಳಲ್ಲಿಯೂ ಇರುವ ಕ್ಷೇತ್ರಜ್ಞನು ಪರಮಾತ್ಮನು ನಾನೇ ಎಂದು ತಿಳಿ–ಎಂಬುದಾಗಿ ಭಗವಂತನು ಹೇಳಿರುವ ಅತ್ಯುಚ್ಚ ವೇದಾಂತೋಪದೇಶಗಳನ್ನು ಹಿಡಿಕೊಂಡು ಅವುಗಳ ಅರ್ಥವನ್ನು ಮನಗಾಣುವ ಸಾಮರ್ಥ್ಯವೂ ಇಲ್ಲದೆ ಬರಿಯ ಪಠನಮಾತ್ರದಿಂದ ನಾವು ಗೀತೆಯ ಪರಮಫಲವನ್ನು ಪಡೆಯುವೆ

ವೆಂದು ನಂಬಿಕೊಂಡಿರುತ್ತೇನೆ! 'ಅಮಾನಿತ್ವಮದಂಭಿತ್ವಮ್ ...ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋऽನ್ಯಥಾ' ಅಮಾನಿತ್ವವೇ ಮುಂತಾಗಿ (ಗೀ. ೧೩–೭ರಿಂದ ೧೧ವರೆಗಿನ) ವಾಕ್ಯಗಳಲ್ಲಿ ಹೇಳಿರುವ ಜ್ಞಾನಸಾಧನಗಳು ನಮಗೆ ಅಳವಟ್ಟಿರುವವೆ ?- ಎಂಬುದನ್ನು ಸ್ವಲ್ಪವೂ ಆಲೋಚಿಸುತ್ತಿಲ್ಲ.

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥

ಗೀ. ೩–೧೬

ಯಜ್ಞದಿಂದ ಮಳೆ, ಮಳೆಯಿಂದ ಅನ್ನ, ಅನ್ನದಿಂದ ಪ್ರಜೆಗಳು– ಹೀಗೆ ಒಂದರಿಂದೊಂದು ಆಗುತ್ತಿರುವವು– ಎಂಬ ಜಗಚ್ಚಕ್ರವನ್ನು ಯಾವನು ಅನುಸರಿಸದೆ ಇರುವನೋ ಅವನು ಅಘಾಯು. ಅವನ ಜೀವನವು ವ್ಯರ್ಥ– ಎಂದು ಭಗವಂತನು ಹೇಳುತ್ತಾನೆ. ಯಾವನು ಶಾಸ್ತ್ರೋಕ್ತವಾದ ರೀತಿಯಿಂದ ದೇವತೆಗಳ ತೃಪ್ತ್ಯರ್ಥವಾಗಿ ಯಜ್ಞಗಳನ್ನು, ಸ್ಮಾರ್ತವಾದ ಪಂಚಮಹಾಯಜ್ಞಗಳನ್ನೂ ಶ್ರಾದ್ಧಕರ್ಮರೂಪವಾದ ಪಿತೃಯಜ್ಞವನ್ನೂ ಮಾಡುತ್ತಿರುವನೋ ಅವನು ಪೂರ್ಣಜೀವನವನ್ನು ಜೀವಿಸಿದಂತೆ ಆಗುವದು. ವಿದ್ಯೆ, ಧನ, ಭೋಗ, ಕೀರ್ತಿ– ಮುಂತಾದವುಗಳಿಗಾಗಿ ಜೀವಿಸುವದು ಪೂರ್ಣಜೀವನವಲ್ಲ. ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳಿಗಾಗಿ ಜೀವಿಸುವದೇ ಪೂರ್ಣಜೀವನವು.

ಚಿರಂಜೀವಿಗಳಾದ ಋಷಿಗಳು ಈಗಲೂ ಕೆಲವರು ಇರುತ್ತಾರೆ. ಲೋಕದ ಕ್ಷೇಮಾರ್ಥವಾಗಿ ಅಲ್ಲಲ್ಲಿ ಅದೃಶ್ಯರಾಗಿ ಸಂಚರಿಸುತ್ತಿರುತ್ತಾರೆ. ದೇವತೆಗಳಿಗಾಗಿ ಸ್ವತ್ವವನ್ನು ತ್ಯಾಗಮಾಡಿದವರು ಈಗಲೂ ಇರುತ್ತಾರೆ. ಇಷ್ಟದೇವತೆಯನು ಪೂಜಿಸಿ ಸ್ವಪ್ನವೇ ಮುಂತಾದವುಗಳಲ್ಲಿ ಆ ದೇವತೆಯೊಡನೆ ಮಾತನಾಡುವವರೂ ಇರುತ್ತಾರೆ. ಬೀಜವನ್ನು ಭೂಮಿಯಲ್ಲಿ ಬಿತ್ತಿ ಕಾಲಾನುಕಾಲಕ್ಕೆ ಫಲ ಪಡೆಯುವಂತೆ ದೇವತಾರಾಧನೆಯಿಂದ ಫಲವನ್ನು ಪಡೆಯುವವರೂ ಇರುತ್ತಾರೆ. ಅವರದು ಶ್ರದ್ಧಾಮಯಜೀವನ.

# ೭. ಈಶ್ವರ

(5—8—69)

ಋಷಿಗಳು ಸೂಕ್ಷ್ಮತತ್ತ್ವಗಳನ್ನು ಕಂಡುಹಿಡಿದು ಎಲ್ಲರಿಗೂ ಬೋಧಿಸಿರು ತ್ತಿದ್ದರೂ ಶ್ರುತಿಸ್ಮೃತಿಗಳು ಡಂಗುರವನ್ನು ಹೊಡೆಯುತ್ತಿದ್ದರೂ ಜನರ ಮನಸ್ಸು ಅವುಗಳನ್ನು ಕಾಣದೆ ತಡವರಿಸುತ್ತಿದೆ. ಮೂಕರಾದವರು ಸಕ್ಕರೆಯನ್ನು ತಿಂದೂ ಅದರ ಸವಿಯನ್ನು ಇತರರಿಗೆ ತಿಳಿಯಪಡಿಸುವದಕ್ಕೆ ಸಾಧನವಾದ ವ್ಯವಹಾರದ ಭಾಷೆಗೆ ಯೋಗ್ಯತೆಯಿಲ್ಲದಿರುವಂತೆ ಅನುಭವೈಕಗಮ್ಯವಾದ ತತ್ತ್ವಗಳನ್ನು ಸಾಮಾನ್ಯಜನರಿಗೆ ಭಾಷೆಯ ಮೂಲಕ ತಿಳಿಯಿಸುವದಕ್ಕೆ ಆಗದೆ ವಿಧವಿಧವಾದ ದೃಷ್ಟಾಂತಗಳಿಂದ ಅದನ್ನು ಬಣ್ಣಿಸುತ್ತಾರೆ. ನಾಲಗೆಯಲ್ಲಿ ಆಲೋಚಕವೆಂಬ ನಿಮಿತ್ತದಿಂದ ರುಚಿಯೇ ಗೊತ್ತಾಗದೆ ಇರುವಂತೆ ಪ್ರಾಕೃತಜನರು ಅತೀಂದ್ರಿಯ ತತ್ತ್ವಗಳನ್ನು ಗ್ರಹಿಸುವ ಯೋಗ್ಯತೆಯಿಲ್ಲದೆ ನರಳುತ್ತಿರುತ್ತಾರೆ. ತಮಗೆ ತತ್ತ್ವ ವನ್ನು ಗ್ರಹಿಸುವ ಯೋಗ್ಯತೆಯಿಲ್ಲವೆಂಬುದನ್ನರಿಯದೆ, ಮೇಲಿನ ವರ್ಣಾಶ್ರಮ ದವರು ನಮಗೆ ತತ್ತ್ವವನ್ನು ತಿಳಿಯಿಸಿಕೊಡದೆ ಗುಟ್ಟಾಗಿಟ್ಟುಕೊಂಡಿರುತ್ತಾರೆ ಎಂಬ ತಪ್ಪುಗ್ರಹಿಕೆಯುಳ್ಳವರಾಗಿಯೂ ಇರುತ್ತಾರೆ. ಇದರಿಂದ ವೇದಾರ್ಥ ಪ್ರವ ಚನವೆಂಬುದು ಕೋಣನಮುಂದೆ ಕಿನ್ನರಿಯನ್ನು ಬಾರಿಸಿದಂತೆ ಆಗಿಬಿಟ್ಟಿರುತ್ತದೆ. ಕೆಳಗಿನ ಅಂತಸ್ತಿನ ಮನಸ್ಸುಳ್ಳವರೇ ಬಹಳ ಜನರು ಇರುತ್ತಾರೆ ಎಂಬುದನ್ನು ಬಲ್ಲ ವ್ಯಾಸವಾಲ್ಮೀಕಿಗಳೇ ಮುಂತಾದವರು ಇತಿಹಾಸಪುರಾಣಗಳ ದ್ವಾರದಿಂದ ಹಲವು ಉಪಾಖ್ಯಾನಗಳನ್ನೂ ದೃಷ್ಟಾಂತವನ್ನೂ ಬಳಸಿಕೊಂಡು ತತ್ತ್ವ ಬೋಧೆಯನ್ನು ಮಾಡಿರುತ್ತಾರೆ. ಈಗಿನ ಜನರು ಇವನ್ನು ಮಕ್ಕಳಿಗೆ ತಕ್ಕ ಕಥೆಗಳು ಎಂದು ಅಸಡ್ಡೆಯಿಂದ ತಿರಸ್ಕರಿಸುತ್ತಿದ್ದಾರೆ.

ಈಗಿನ ಕಾಲದ ಬ್ರಾಹ್ಮಣರ ಮಕ್ಕಳು ಬಿ.ಎಸ್‌ಸಿ., ಎಮ್.ಎಸ್‌ಸಿ., ಬಿ.ಇ, ಎಮ್.ಕಾಮ್., ಎಮ್.ಬಿ.ಬಿ.ಎಸ್— ಮುಂತಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ತಮ್ಮ ವಿದೆ ಯ ಅಂತಸ್ತಿಗೆ ತಕ್ಕ ಉದ್ಯೋಗಗಳು ದೊರೆಯು ತ್ತಿಲ್ಲವೆಂದು ಅಲೆದಾಡುತ್ತಿದ್ದಾರೆ. ಅವರನ್ನು 'ನೀವು ವೇದಾಧ್ಯಯನವನ್ನು ಮಾಡಿದ್ದೀರೊ ?'— ಎಂದು ಕೇಳಿದರೆ ಹುಸಿನಗೆಯಿಂದ 'ಅಯ್ಯೋ, ಅಧ್ಯಯನ ವನ್ನು ಕೇಳುವವರು ಯಾರು ? ಅಧ್ಯಯನಮಾಡಿದವನಿಗೆ ಮಧ್ಯಾಹ್ನಕ್ಕೂ ಹಿಟ್ಟಿಲ್ಲ' ಎಂಬ ಗಾದೆಯನ್ನು ನೀವು ಕೇಳಿಲ್ಲವೆ ?' ಎನ್ನುತ್ತಾರೆ. ಆದರೆ ಈಗಿನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಶ್ವೇತಕೇತುವಿನಂತೆ ಉಬ್ಬಿಬಂದಿರುವವರಿಗೆ ಮಧ್ಯಾಹ್ನಕ್ಕೆ ಹಿಟ್ಟೂ ಇಲ್ಲ, ಬೂದಿಯೂ ಇಲ್ಲ— ಎಂಬಂತೆ ಆಗಿದೆ !

ಈಗಿನ ಈ ದುರವಸ್ಥೆಗೆ ಕಾರಣವೇನು ?– ಎಂದರೆ ಪ್ರಾಥಮಿಕಶಾಲೆಗಳಲ್ಲಿ ಓದುವುದಕ್ಕೆ ಬಂದಿರುವ ಹುಡುಗರು ಹೊರಗೆ ಓಲಗ, ತಮಟೆ– ಇವುಗಳ ಧ್ವನಿಯನ್ನು ಕೇಳಿದೊಡನೆ ಉಪಾಧ್ಯಾಯರ ಎಚ್ಚರಿಕೆಯ ಕೂಗನ್ನೂ ಲಕ್ಷಿಸದೆ ತಟ್ಟನೆ ಹೊರಕ್ಕೆ ಹೋಗಿಬಿಡುವಂತೆ ದೇವತೆಗಳೇ ಮೊದಲಾದವರ ತಿರಸ್ಕಾರದಿಂದ ಜನರಿಗೆ ಉಂಟಾಗಿರುವ ಅನರ್ಥಗಳು ನಮ್ಮ ಕಣ್ಣಮುಂದೆಯೇ ತೋರುತ್ತಿದ್ದರೂ ಈಗಿನ ಕಾಲದವರು ಹೊರಗಡೆಗೇ ಮುಖವನ್ನು ತಿರುಗಿಸಿಕೊಂಡು 'ಭೌತಿಕಶಾಸ್ತ್ರದ ಜ್ಞಾನವು ಇಂದಲ್ಲದಿದ್ದರೆ ನಾಳೆ ನಮಗೆ ಸರಿಯಾದ ದಾರಿಯನ್ನು ತೋರಿಸೀತು– ಎಂದೇ ಗಟ್ಟಿಯಾಗಿ ನಂಬಿರುತ್ತಾರೆ !

ಹಿಂದೆ ಹಿಟ್ಲರನೆಂಬ ಜರ್ಮನ್ ನಾಯಕನು ಸೇನಾಬಲವನ್ನು ನಂಬಿ ಇತರ ರಾಷ್ಟ್ರಗಳನ್ನೆಲ್ಲ ತನ್ನ ಆಜ್ಞೆಗೆ ಒಳಪಡಿಸಿಕೊಳ್ಳಬೇಕೆಂಬ ಹಿರಿಯದಾಸೆಯನ್ನು ಮಾಡಿಕೊಂಡಿದ್ದನು. ರಷ್ಯದೇಶದಲ್ಲಿ ಆಗಾಗ್ಗೆ ತಡೆಯಲಾರದಷ್ಟು ಶೀತದ ಹಿಮಪಾತವಾಗುತ್ತಿದ್ದುದು ವಾಡಿಕೆಯಾಗಿತ್ತಾದ್ದರಿಂದ ವಾಯುಗುಣವನ್ನು ಪರೀಕ್ಷಿಸಬಲ್ಲ ಭೌತಿಕಶಾಸ್ತ್ರಜ್ಞರನ್ನು 'ಈ ವರ್ಷ ರಷ್ಯದಲ್ಲಿ ಮಂಜುಬೀಳುವುದೋ ಇಲ್ಲವೋ, ಗೊತ್ತುಮಾಡಿರಿ !' ಎಂದು ಕಟ್ಟುಮಾಡಿದನು. ಆ ಶಾಸ್ತ್ರಜ್ಞರು ಹಿಂದಿನ ಎಷ್ಟೋ ವರ್ಷಗಳ ವಾಯುಗುಣದ ಲೆಕ್ಕಾಚಾರದ ಆಧಾರದಿಂದ 'ಈ ವರ್ಷ ರಷ್ಯದಲ್ಲಿ ಹಿಮಪಾತವಾಗುವುದಿಲ್ಲ' ಎಂದು ನಿರ್ಣಯಿಸಿದರು. ಅವರ ಮಾತನ್ನು ನಂಬಿ ಆ ಅಧಿಕಾರಮದಾಂಧನು ಸೇನೆಯನ್ನು ರಷ್ಯದತ್ತ ಸಾಗುವಂತೆ ಕಟ್ಟುಮಾಡಿದನು. ಆದರೆ ದುರ್ದೈವದಿಂದ ಆ ವರ್ಷವೇ ಬಲವಾದ ಹಿಮವರ್ಷವು ಬಂದಿತು. ರಷ್ಯದೇಶದ ಜನರು ಈಶ್ವರನ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದ ಕಮ್ಯುನಿಸ್ಟರಾಗಿದ್ದರೂ ಶತ್ರುಭೀತರಾಗಿ 'ನಮಗೆ ಯಾರೂ ಈಗ್ಗೆ ಸಹಾಯವನ್ನು ಮಾಡುವವರಿಲ್ಲ' ಎಂಬ ನಂಬಿಕೆಯಿಂದ ಕ್ರೈಸ್ತರ ಇಗರ್ಜಿಗಳಿಗೆ ಹೋಗಿ ಘಂಟೆಗಳನ್ನು ಬಾರಿಸಿ 'ದೇವ, ಇಂದಿಗೆ ನೀನೇ ನಮ್ಮನ್ನು ಕಾಪಾಡಬೇಕು' ಎಂದು ಆರ್ತನಾದದಿಂದ ಬೇಡಿಕೊಂಡರು. ಈಶ್ವರನು ಅವರ ಪ್ರಾರ್ಥನೆಯ ಧ್ವನಿಗೆ ಓಗೊಟ್ಟನೊ ಎಂಬಂತೆ ಹಿಮಪಾತವು ಎಂದಿಗಿಂತಲೂ ಬಲವಾಗಿಯೇ ಆ ವರ್ಷ ಬಂದಿತಂತೆ ! ಭೌತಿಕಜ್ಞಾನವನ್ನು ನಂಬಿದ್ದವರಿಗೂ ಈಶ್ವರನನ್ನು ನಂಬಿದ್ದ ಏಕದೇಶಜ್ಞಾನದ ಶ್ರದ್ಧಾಳುಗಳಿಗೂ ಈಶ್ವರನ ಅಸ್ತಿತ್ವವನ್ನೇ ನಂಬಲಾರದಿದ್ದ ಹಿರಣ್ಯಕಶಿಪುವಿನಂತಿದ್ದ ನಾಸ್ತಿಕರಿಗೂ ಒಂದೇ ಘಟನೆಯಿಂದ ಅಂತಃಕರಣದಲ್ಲಿ ಮಾರ್ಪಾಡಾಗತೊಡಗಿತು ! ಇಂಥ ಕಥೆಗಳನ್ನು ನಾವು ಇತಿಹಾಸದಲ್ಲಿ ಓದುತ್ತಿದ್ದರೂ ನಮ್ಮ ಮನಸ್ಸು ಇನ್ನೂ ಋಜುಮಾರ್ಗವನ್ನನುಸರಿಸದೆ ನಾಯಿಯ ಬಾಲದಂತೆ ಡೊಂಕಾಗಿರುತ್ತದೆ. ನಮ್ಮಲ್ಲಿ ಕೆಲವರು ಸಂಪ್ರದಾಯಕ್ಕೆ ಸಿದ್ಧಿವಿನಾಯಕನ ವ್ರತವನ್ನು

ಮಾಡುತ್ತಿದ್ದಾರೆ ; ಆದರೂ ಅವರಿಗೆ ಜೀವನದಲ್ಲಿ ಬಂದೊದಗುವ ವಿಘ್ನಗಳು ತಪ್ಪಿಸುವದಿಲ್ಲ. ಇದಕ್ಕೆಲ್ಲ ಈಶ್ವರಾಸ್ತಿತ್ವದಲ್ಲಿ ಶ್ರದ್ಧೆಯಿಲ್ಲದಿರುವದೇ ಕಾರಣ. ನಮ್ಮವರ ಮಿದುಳಿನ ಶಕ್ತಿಯು ಬೆಳೆಯುತ್ತಿದೆ ; ಆದರೆ ಹೃದಯವು ದಿನದಿನಕ್ಕೂ ಸಂಕುಚಿತವಾಗುತ್ತಿದೆ. ಈಶ್ವರನೊಬ್ಬನಿದ್ದಾನೆ ಎಂಬ ವಿಷಯಕ್ಕೆ ಈಗ ಅನೇಕರಿಗೆ ಶ್ರದ್ಧೆಯು ಹಾರಿಹೋಗುತ್ತಿದೆ:

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥**

ಗೀ ೧೮-೬೧

(ಎಲೈ ಅರ್ಜುನನೆ, ಈಶ್ವರನು ಸರ್ವಪ್ರಾಣಿಗಳ ಹೃದಯದಲ್ಲಿಯೂ ಇರುತ್ತಾನೆ ; ಎಲ್ಲಾ ಪ್ರಾಣಿಗಳನ್ನೂ-ಯಂತ್ರವನ್ನೇರಿದ ಪ್ರತಿಮೆಗಳನ್ನು ಹೇಗೋ ಹಾಗೆ- ಮಾಯೆಯಿಂದ ತಿರುಗಿಸುತ್ತಿರುತ್ತಾನೆ).

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ॥** ಗೀ. ೧೮-೬೨

(ಆತನನ್ನೇ ಈ ಸಂಸಾರದ ದುಃಖದ ಪರಿಹಾರಕ್ಕಾಗಿ ಶರಣುಹೊಂದು) -ಎಂದು ಭಗವಂತನು ಸುಸ್ಪಷ್ಟವಾಗಿ ಬೋಧಿಸಿರುತ್ತಾನಾದರೂ ನಮಗೆ ಶ್ರದ್ಧೆಯುಂಟಾಗಲೊಲ್ಲದು. ನಮಗೆ ಮಿದುಳಿನ ರೋಗವು ಹೆಚ್ಚಿಬಿಟ್ಟಿದೆ ; ಎಲ್ಲಾ ಪ್ರಾಣಿಗಳ ಒಳಗೂ ಇರುವ ಈಶ್ವರನು ನಮ್ಮ ಹೃದಯದಲ್ಲಿಯೂ ಇರಬೇಕಲ್ಲವೆ?- -ಎಂಬ ಸಂಶಯವುಕೂಡ ನಮ್ಮಲ್ಲಿ ಉಂಟಾಗಿಲ್ಲ.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥**

ಗೀ. ೭-೧೪

ನಮಗೆ ಹೊರಗಿನ ಮಾಯಾವಿಲಾಸವನ್ನು ನೋಡುತ್ತಲೇ ಬೆರಗಾಗುವ ಅಭ್ಯಾಸವು ಆಗಿಬಿಟ್ಟಿರುತ್ತದೆ. ತ್ರಿಗುಣಾತ್ಮಕವಾದ ಮಾಯೆಯೇ ಎಲ್ಲೆಲ್ಲಿಯೂ ಹಬ್ಬಿಕೊಂಡು ಮೋಹಕವಾಗಿದ್ದುಕೊಂಡು ಸರಿಯಾದ ಕಡೆಗೆ ನಾವು ತಿರುಗದಂತೆ ಮಾಡಿರುತ್ತದೆ, ಆದರೆ ಭಗವಂತನನ್ನೇ ಅನನ್ಯಭಕ್ತಿಯಿಂದ ಯಾರು ಶರಣು ಹೊಂದುವರೋ ಅವರಿಗೆ ಈ ಮಾಯೆಯು ಮಾಯವಾಗಿಬಿಡುವದು. ನಾವು ಇಷ್ಟು ದೀರ್ಘಕಾಲ ಆತನ ಕಡೆಗೆ ತಿರುಗಿಲ್ಲವೆಂಬ ನಿಮಿತ್ತದಿಂದಲೇನೂ ಆತನು ಎಂದಿಗೂ ವಿಮುಖನಾಗುವದಿಲ್ಲ. ವಿಭೀಷಣನು 'ನಾನು ನಿನ್ನನ್ನು ಶರಣುಹೊಕ್ಕಿದ್ದೇನೆ ! ನಿನ್ನವನನ್ನಾಗಿ ಮಾಡಿಕೊ' ಎಂದು ಬೇಡಿಕೊಂಡಮಾತ್ರದಿಂದಲೇ ಆವನನ್ನು ಲಂಕಾಪಟ್ಟಣಕ್ಕೆ ಅಧಿಪತಿಯನ್ನಾಗಿ ಮಾಡಿ ಅಭಿಷೇಕವನ್ನು ಮಾಡಿಸಿದ

**ಪ್ರಭುವು ಅಜ್ಞಾನದಿಂದ ಪೀಡಿತರಾಗಿರುವ ನಮ್ಮನ್ನು ಕಾಪಾಡಲಾರನೆ ?**

ನಾವು ದೇವತೆಗಳನ್ನು ಉಪಾಸನೆಮಾಡುವಾಗಲೂ ಆತನೇ ಫಲವನ್ನು ಕೊಡುವಾತನು. ದೇವತೆಗಳು ನಮಗಿಂತ ಎಷ್ಟೋ ಹೆಚ್ಚಿನ ಅಪ್ರತಿಹತಜ್ಞಾನಾದಿ ಶಕ್ತಿಗಳುಳ್ಳವರಾದರೂ, ಅವರಿಗೂ ನಮ್ಮಂತೆಯೇ ಈಶ್ವರನ ವಿಷಯಕ್ಕೆ ಮೋಹ ವುಂಟಾಗುವದುಂಟು: ಕೇನೋಪನಿಷತ್ತಿನಲ್ಲಿ ಒಂದು ಕಥೆಯಿದೆ. ಅಲ್ಲಿ ದೇವತೆ ಗಳಿಗೂ ಅಸುರರಿಗೂ ಆದ ಒಂದು ಮಹಾಯುದ್ಧದಲ್ಲಿ ದೇವತೆಗಳಿಗೇ ಜಯ ವಾಯಿತು. ಅಗ್ನಿ, ವಾಯು, ಇಂದ್ರ— ಮುಂತಾದವರು 'ನಾವುನಾವೇ ಈ ಯುದ್ಧ ದಲ್ಲಿ ಜಯವನ್ನು ಸಂಪಾದಿಸಿದೆವು'—ಎಂದು ಹೆಮ್ಮೆಯನ್ನು ತಾಳಿದರು. ಆಗ ಅವರ ಮುಂದೆ ಒಂದು ವಿಸ್ಮಯಕರವಾದ ಯಕ್ಷರೂಪದಿಂದ ಪರಮಾತ್ಮನು ಕಾಣಿಸಿ ಕೊಂಡನು. ಆಗ ದೇವತೆಗಳು 'ಈ ಅದ್ಭುತರೂಪದ ವ್ಯಕ್ತಿ ಯಾವದು? ತಿಳಿದು ಕೊಂಡುಬಾ' ಎಂದು ವಾಯ್ವಾದಿಗಳನ್ನು ಒಬ್ಬೊಬ್ಬರನ್ನೇ ಆ ಯಕ್ಷನ ಬಳಿಗೆ ಕಳುಹಿಸಿಕೊಟ್ಟರು. ಪರಮೇಶ್ವರನು 'ನೀನು ಯಾರು?' ಎನ್ನಲು 'ನಾನು ವಾಯು ಪೃಥ್ವಿಯಲ್ಲಿರುವ ಯಾವ ಪದಾರ್ಥವನ್ನಾದರೂ ಎತ್ತಿಹಾಕಬಲ್ಲೆನು' ಎಂದು ವಾಯು ಉತ್ತರವಿತ್ತನು. ಅವನ ಮುಂದೆ ಒಂದು ಸಣ್ಣಕಡ್ಡಿಯನ್ನಿಟ್ಟು 'ಹಾಗಾ ದರೆ ಇದನ್ನು ತೆಗೆದುಕೊ' ಎಂದು ಈಶ್ವರನು ಹೇಳಲಾಗಿ ವಾಯುವು ತನ್ನ ಸರ್ವ ಶಕ್ತಿಯನ್ನೂ ವಿನಿಯೋಗಿಸಿದರೂ ಕಡ್ಡಿಯನ್ನು ಮೇಲಕ್ಕೆ ಎತ್ತುವದಕ್ಕೇ ಆಗಲಿಲ್ಲ. ಹೀಗೆಯೇ 'ಎಲ್ಲವನ್ನೂ ದಹಿಸುವ ಶಕ್ತಿಯುಳ್ಳವನು ನಾನು' ಎಂದು ಕೊಚ್ಚಿ ಕೊಂಡ ಅಗ್ನಿಯಿಂದಲೂ ಆ ಕಡ್ಡಿಯನ್ನು ಸುಡುವದು ಆಗಲಿಲ್ಲ. ಮುಂದೆ ಇಂದ್ರನೇ ಆ ಯಕ್ಷಸ್ವರೂಪವನ್ನು ನಿಶ್ಚಯಿಸಿಕೊಂಡುಬರುವೆನೆಂದು ಹೆಮ್ಮೆಯಿಂದ ಹೋಗು ವಲ್ಲಿ ಆ ಯಕ್ಷರೂಪವು ಅವನಿಗೆ ದರ್ಶನವನ್ನು ಕೂಡ ಕೊಡದೆ ಮಾಯವಾಯಿತು. ಆಕಾಶದಲ್ಲಿ ದರ್ಶನವನ್ನು ಕೊಟ್ಟ ಉಮಾದೇವಿಯ ಅನುಗ್ರಹದಿಂದ 'ಈತನು ಎಲ್ಲರಿಗೂ ಆತ್ಮನಾದ ಪರಬ್ರಹ್ಮವೇ' ಎಂಬ ಜ್ಞಾನವು ಉದಿಸಿದಂತೆ ! ಹೀಗೆ ಸರ್ವಜ್ಞಕಲ್ಪರಾದ ಇಂದ್ರಾದಿಗಳಿಗೂ ಪರಮೇಶ್ವರಜ್ಞಾನವು ದೊರಕುವದು ಕಷ್ಟ ವಾಗಿರುವಾಗ ಬಾಹ್ಯವಿಷಯಗಳಲ್ಲಿಯೇ ಆಸಕ್ತರಾಗಿರುವ ನಮ್ಮಂಥವರ ಪಾಡೇನು ?

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥** ಗೀ. ೧೦-೨

ಎಂದು ಭಗವಂತನೇ ಹೇಳಿರುವಂತೆ ದೇವತೆಗಳಾಗಲಿ ಗೋತ್ರಪ್ರವರ್ತಕರಾದ ಮಹರ್ಷಿಗಳಾಗಲಿ ಭಗವಂತನ ಮೂಲವನ್ನು ಕಂಡರಿಯರು. ಏಕೆಂದರೆ ಆತನೇ ದೇವತೆಗಳಿಗೂ ಮಹರ್ಷಿಗಳಿಗೂ ಆದಿಯು.

ನಮ್ಮಲ್ಲಿರುವ ಸರ್ವಶಕ್ತಿಗಳೂ ಆತನ ಅನುಗ್ರಹದಿಂದಲೇ ಉಂಟಾಗಿರುತ್ತವೆ ಎಂಬುದನ್ನು ನಂಬಬೇಕು,

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥** ಗೀ. ೧೦–೪,೫

ಈ ಶ್ಲೋಕಗಳಲ್ಲಿ ಹೇಳಿರುವ ಗುಣಗಳು ನಮಗೆ ದೊರಕಿರುವವೆಂದು ನಾವು ಹೆಮ್ಮೆಪಡಬಹುದಾದ ಬುದ್ಧಿ ಜ್ಞಾನ, ವಸ್ತುಗಳನ್ನು ಯಥಾವತ್ತಾಗಿ ವಿವೇಚಿಸುವ ಶಕ್ತಿ, ಕ್ಷಮೆ, ಸತ್ಯ—ಮುಂತಾದವುಗಳೆಲ್ಲವೂ ಆ ಮಹೇಶ್ವರನಿಂದಲೇ ನಮಗೆ ಉಂಟಾಗಿರುವವು. ಇನ್ನು ಶರೀರದ ಬಲದ ವಿಷಯಕ್ಕೆ ಹೇಳುವ ದೇನಿದೆ ? ಲೋಕದಲ್ಲಿ ಯಾವ ಶಕ್ತಿವಿಶೇಷವು ಯಾವ ವ್ಯಕ್ತಿಯಲ್ಲಿ ಎಷ್ಟೇ ಹೆಚ್ಚಾಗಿರಲಿ, ಅದೇ ಶಕ್ತಿಯು ಎಲ್ಲರಿಗಿಂತಲೂ ಹೆಚ್ಚಾಗಿ ಭಗವಂತನಲ್ಲಿ ಇದ್ದು ಕೊಂಡಿರುವದು. ಒಂದಲ್ಲ ಒಂದು ಕಾಲದಲ್ಲಿ, ಒಂದಲ್ಲ ಒಂದು ದೇಹದಲ್ಲಿ ಆಗಾಗ್ಗೆ ಪ್ರಕಟವಾಗುತ್ತಿರುವ ಶಕ್ತಿಗಳೆಲ್ಲವೂ ಪರಮಾತ್ಮನ ಮಹಿಮೆಯೇ ಆಗಿರುತ್ತವೆ.

# ೬. ಯಜ್ಞಭೇದಗಳು

( 6–8–79 )

ದೇವತೆಗಳ, ಋಷಿಗಳ, ಮತ್ತು ಪಿತೃಗಳ ಅಸ್ತಿತ್ವದ ವಿಷಯವಾಗಿಯೂ ದೇವತೆಗಳ ತೃಪ್ತಿಗಾಗಿ ಮಾಡುವ ಯಜ್ಞದ ವಿಷಯವಾಗಿಯೂ ಸ್ವಲ್ಪ ವಿಚಾರ ವನ್ನು ಮಾಡಿದ್ದಾಗಿದೆ. ಯಜ್ಞದ ಉದ್ದೇಶವನ್ನಾಗಲಿ ಯಜ್ಞಶಬ್ದದ ಅರ್ಥ ವನ್ನಾಗಲಿ ಸರಿಯಾಗಿ ತಿಳಿದುಕೊಳ್ಳಲಾರದ ಕೆಲವರು 'ಇಂಥ ಊರಲ್ಲಿ ಕೆಲವರು ಬ್ರಾಹ್ಮಣರು ಸೇರಿ ಇಂತಿಷ್ಟು ಆಡುಗಳನ್ನು ಗಲ್ಲಿಗೇರಿಸಿದರು' ಎಂದು ಒಮ್ಮೆ ಪತ್ರಿಕೆಯಲ್ಲಿ ಪರಿಹಾಸ್ಯವಾಗಿ ಒಂದು ವೃತ್ತಾಂತಪತ್ರಕ್ಕೆ ಲೇಖನವನ್ನು ಕೊಟ್ಟಿ ದ್ದರು ! ಯಜ್ಞವೆಂದರೆ ಪಶುಹಿಂಸೆಯೇ ಆದರೆ ಕಟುಕರು ನಿತ್ಯವೂ ಯಜ್ಞವನ್ನು ಮಾಡುತ್ತಲೇ ಇರುತ್ತಾರೆ! ಪ್ರಾಣಿಹಿಂಸೆಯ ನಿರೋಧಕರೆಂದು ಕೊಚ್ಚಿಕೊಳ್ಳುವ

ಅನೇಕರು, ನಮ್ಮ ದೇಶದಲ್ಲಿ ನಿರುಪಯೋಗವಾದ ದನಗಳು ಅಲೆದಾಡುತ್ತಿರುವದು ಸರಿಯಾದ ಗೋಗಳ ತಳಿಯ ರಕ್ಷಣೆಗೆ ಅಡ್ಡಿಯಾಗುತ್ತದೆಯೆಂದೂ ಅವುಗಳನ್ನು ಕೊಲ್ಲಿಸುವದು ಆರ್ಥಿಕದೃಷ್ಟಿಯಿಂದ ಒಳ್ಳೆಯದೆಂದೂ ಹೇಳುತ್ತಿರುತ್ತಾರೆ! 'ಸರ್ವದಲೀಯಗೋರಕ್ಷಮಹಾಭಿಯಾನಸಮಿತಿ' ಯವರು ನಮ್ಮಲ್ಲಿಗೆ ಒಂದು ಪುಸ್ತಿಕೆಯನ್ನು ಕಳುಹಿಸಿರುತ್ತಾರೆ. ಅದರಲ್ಲಿ ಮ್ಯುನಿಸಿಪಲ್ ಕಸಾಯಿಖಾನೆಗಳಲ್ಲಿ ಗೋಗಳನ್ನು ಕೊಲ್ಲುವಾಗ ಬಳಸುತ್ತಿರುವ ವಿಧಾನಗಳಿಂದ ಆ ಮೂಕಪ್ರಾಣಿಗಳಿಗೆ ಆಗುವ ಚಿತ್ರಹಿಂಸೆಯನ್ನು ತಿಳಿಸುವದಕ್ಕೆ ಕೆಲವು ಭಾವಚಿತ್ರಗಳನ್ನು ತೆಗೆದುಕೊಂಡು ಪ್ರಕಟಿಸಿರುತ್ತಾರೆ. ಬೆಲೆಯುಳ್ಳ ಉತ್ತಮವಾದ ಚರ್ಮಗಳನ್ನು ಪರದೇಶಕ್ಕೆ ರವಾನಿಸುವದರ ಮೂಲಕ ವಿನಿಮಯಧನವನ್ನು ಸಂಪಾದಿಸಬಹುದೆಂದು ಸರಕಾರದವರು ಭಾವಿಸಿರುತ್ತಾರೆಂದೂ 1961 ರಿಂದ 1981ರ ಒಳಗಾಗಿ ಇಂತಿಷ್ಟು ಮಣ ಗೋಮಾಂಸವನ್ನು ತಯಾರಿಸಬೇಕೆಂಬ ಯೋಜನೆಯು ಇದೆಯೆಂದೂ ಅದರಲ್ಲಿದೆ. 1961-66ರ ಒಳಗೆ ೧,೧೮,೭೫೦೦೦ ಮಣ; 67ರಿಂದ 71ರ ನಡುವಿನ ಕಾಲದಲ್ಲಿ ೩,೯೩,೭೫೦೦೦ ಮಣ 72ರಿಂದ 76ರ ಕಾಲದಲ್ಲಿ ೬,೫೫,೬೨,೫೦೦ ಮಣ; 77ರಿಂದ 81ರ ಕಾಲದಲ್ಲಿ ೭,೧೨,೫೦,೦೦೦ ಮಣ; ಗೋಮಾಂಸವನ್ನು ಸಿದ್ಧಪಡಿಸುವ ಯೋಜನೆ ಮಾಡಿದಾರಂತೆ; ಉಳಿದ ಪ್ರಾಣಿಗಳ ಮಾಂಸವನ್ನು ಸೇರಿಸಿದರೆ ಕೊನೆಯ ಅವಧಿಯಲ್ಲಿ ಒಟ್ಟು ೧೧,೫೫,೬೫೦೦೦ ಮಣ ಮಾಂಸವು ಸಿದ್ಧವಾಗಬೇಕಂತೆ! ಇದು ಅಹಿಂಸಾವಾದಿಗಳ ಯೋಜನೆ!

ಒಳಹೊಕ್ಕು ನೋಡಿದರೆ, ಯಜ್ಞದಲ್ಲಿ ದೇವತೆಗಳ ಪೂಜೆಯು ಪ್ರಧಾನವೋ, ಕೆಲವು ಪ್ರಾಣಿಗಳನ್ನು ಕೊಲ್ಲುವದೇ ಪ್ರಧಾನವೋ ?-ಎಂಬುದು ಗೊತ್ತಾದೀತು. ಯಜ್ಞದಲ್ಲಿ ಆಗುತ್ತಿರುವ ದೇವತೆಗಳ ಆವಾಹನೆ, ಸ್ತೋತ್ರ, ಹೋಮದ್ರವ್ಯದಾನ -ಮುಂತಾದವುಗಳ ಜೊತೆಗೆ ಯಜ್ಞವಾಟಿಯಲ್ಲಿ 'ಸದಸ್ಸು' ಎಂಬ ವಿದ್ವತ್ಸಭೆಯೂ ನಡೆದು ಎಷ್ಟೋ ವಿಷಯಗಳ ಚರ್ಚೆಯಾಗುತ್ತಿರುವದು. ಜನಕನು ಮಾಡಿದ ಇಂಥ ಒಂದು ಯಜ್ಞದಲ್ಲಿ ಯಾಜ್ಞವಲ್ಕ್ಯನಿಗೂ ಕುರುಪಾಂಚಾಲ ದೇಶಗಳ ಬ್ರಾಹ್ಮಣರಿಗೂ ಆದ ಸಂಭಾಷಣೆಯು ಬೃಹದಾರಣ್ಯಕೋಪನಿಷತ್ತಿನಲ್ಲಿದೆ. ಅದು ಒಂದು ದೊಡ್ಡ ತತ್ತ್ವವಿಚಾರದ ಉಪನಿಷತ್ತೆನಿಸಿಕೊಂಡಿರುತ್ತದೆ. ಈಗಲೂ ವೇದಾಂತಿಗಳು ಅದರಲ್ಲಡಗಿರುವ ತತ್ತ್ವಗಳನ್ನು ಕುರಿತು ವಿಚಾರಮಾಡುತ್ತಿರುತ್ತಾರೆ. ಅದಕ್ಕೆ ಶ್ರೀಶಂಕರಾಚಾರ್ಯರ ಸುಪ್ರಸಿದ್ಧಭಾಷ್ಯವೂ ಅದರ ಮೇಲಿನ ಸುರೇಶ್ವರಾಚಾರ್ಯರ ವಾರ್ತಿಕವೂ ಇಂದಿಗೂ ಅಜರಾಮರವಾಗಿದ್ದುಕೊಂಡು ತತ್ತ್ವಜಿಜ್ಞಾಸುಗಳಿಗೆ ಮನನೀಯಗ್ರಂಥಗಳಾಗಿರುತ್ತವೆ.

ಯಜ್ಞದ ಪ್ರಭೇದಗಳನ್ನು ಕುರಿತು ಭಗವದ್ಗೀತೆಯಲ್ಲಿ ಹೀಗೆ ಹೇಳಿದೆ :

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥

ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ವಿಷಯಾನನ್ಯೇ ಇನ್ದ್ರಿಯಾಗ್ನಿಷು ಜುಹ್ವತಿ ॥

ಸರ್ವಾಣೀನ್ದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥

ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥
ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।

(೧) ದೈವಯಜ್ಞವೆಂದರೆ ದೇವತೆಗಳ ತುಷ್ಟಿಗಾಗಿ ಕರ್ಮಗಳು ಮಾಡುವ ಯಜ್ಞ. (೨) ಬ್ರಹ್ಮವೆಂಬ ಅಗ್ನಿಯಲ್ಲಿ ಆತ್ಮನೆಂಬ ಯಜ್ಞವನ್ನು ಹೋಮ ಮಾಡುವದು ; ಎಂದರೆ ಸೋಪಾಧಿಕನಾದ ಆತ್ಮನನ್ನು ನಿರುಪಾಧಿಕವಾದ ಪರ ಬ್ರಹ್ಮಸ್ವರೂಪದಿಂದ ಕಾಣುವ ಜ್ಞಾನಯಜ್ಞ. (ಇದರ ವಿಷಯವನ್ನು ಮುಂದೆ ವಿಚಾರಮಾಡಲಾಗುವದು). (೩) ಶ್ರೋತ್ರಾದೀಂದ್ರಿಯಗಳನ್ನು ಸಂಯಮಾಗ್ನಿ ಯಲ್ಲಿ ಹೋಮಮಾಡುವ ಯಜ್ಞವು ಇನ್ನೊಂದು. ಇಂದ್ರಿಯಗಳನ್ನು ಬಿಗಿ ಹಿಡಿಯುವದು ಸಂಯಮಾಗ್ನಿ; ಅದರಲ್ಲಿ ಇಂದ್ರಿಯಗಳನ್ನು ಹೋಮಮಾಡುವ ಯಜ್ಞವಿದು. (ಈಗ ಜನರು ವಿಷಯಗಳೆಂಬ ಅಗ್ನಿಯಲ್ಲಿ ಇಂದ್ರಿಯಗಳನ್ನು ಹೋಮಮಾಡುತ್ತಿದಾರೆ!) (೪) ಅನಿಷಿದ್ಧವಾದ ವಿಷಯಗಳನ್ನು ಇಂದ್ರಿಯ ಗಳೆಂಬ ಅಗ್ನಿಯಲ್ಲಿ ಹೋಮಮಾಡುವ ವಿಷಯಯಜ್ಞವು ನಾಲ್ಕನೆಯದು. (೫) ಸರ್ವವಿಧವಾದ ಇಂದ್ರಿಯಕರ್ಮಗಳನ್ನೂ ಪ್ರಾಣಾಪಾನಾದಿಕರ್ಮಗಳನ್ನೂ ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಹೋಮಮಾಡುವದು— ಎಂದರೆ ಇಂದ್ರಿ ಯಾದಿಗಳ ವ್ಯಾಪಾರವನ್ನು ಅಂತಃಕರಣಸಂಯಮದಿಂದ ಪ್ರವಿಲಯಮಾಡಿ ಕೊಳ್ಳುವದು, ಮತ್ತು ಪ್ರಾಣವ್ಯಾಪಾರಗಳನ್ನೂ ಹೀಗೆಯೇ ಪ್ರವಿಲಯಮಾಡಿ ಕೊಳ್ಳುವದು ಒಂದು ಬಗೆಯ ಐದನೆಯ ಯಜ್ಞ. (೬–೯) ಇದರಂತೆ ತೀರ್ಥಗಳಲ್ಲಿ ಪಾತ್ರರಾದವರಲ್ಲಿ ವಿನಿಯೋಗಿಸುವ ದ್ರವ್ಯಯಜ್ಞ, ಶರೀರವನ್ನು ತಪಸ್ಸಿನಿಂದ ಸೊರಗಿಸುವ ತಪೋಯಜ್ಞ— ಅಥವಾ ಇಂದ್ರಿಯಗಳ ಮತ್ತು

ಮನಸ್ಸಿನ ಏಕಾಗ್ರತೆಯು ರೂಪವಾದ ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾದಿರೂಪವಾಗಿರುವ ಯೋಗಯಜ್ಞ ! ಸ್ವಾಧ್ಯಾಯಯಜ್ಞ ಎಂದರೆ ವಿಧಿವತ್ತಾಗಿ ಸ್ವಶಾಖೆಯ ವೇದವನ್ನು ಅಧ್ಯಯನಮಾಡುವದು, ಮತ್ತು ಜ್ಞಾನಯಜ್ಞ ಎಂದರೆ ಶಾಸ್ತ್ರಾರ್ಥವನ್ನು ಅರಿತುಕೊಳ್ಳುವದೆಂಬ ಯಜ್ಞ — ಈ ನಾಲ್ಕೂ ಸೇರಿದರೆ ಒಂಬತ್ತು ಬಗೆಯಾಯಿತು. (೧೦) ಇನ್ನು ನಿಯಮದಿಂದ ಆಹಾರವನ್ನು ಸ್ವೀಕರಿಸುತ್ತಿದ್ದು ಒಂದೊಂದು ಪ್ರಾಣದಲ್ಲಿ ಮಿಕ್ಕ ಪ್ರಾಣಗಳನ್ನು ಹೋಮಮಾಡುವ ಪ್ರಾಣಯಜ್ಞವೆಂಬುದು ಹತ್ತನೆಯದು.

ಇವೆಲ್ಲವೂ ಯಜ್ಞಗಳೇ.

ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥
ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥

ಗೀ. ೪–೩೦, ೩೧

ಇವರೆಲ್ಲರೂ ಯಜ್ಞವಿದರು ; ಯಜ್ಞದಿಂದ ಪಾಪವನ್ನು ಕಳೆದುಕೊಂಡು ಉಳಿದ ಅಮೃತಸ್ವರೂಪವಾದ ಆಹಾರವನ್ನು ಭುಂಜಿಸಿ ಕೃತಕೃತ್ಯರಾಗುತ್ತಾರೆ. ಆದ್ದರಿಂದ ವೇದವಿಹಿತವಾದ ಯಜ್ಞಗಳನ್ನು ಬಿಟ್ಟು ಭ್ರಷ್ಟರಾಗಬಾರದು. ಹಿಂದಿನ ಬ್ರಾಹ್ಮಣರು ಅಗ್ನಿಹೋತ್ರಗಳ ಸಮೇತವಾಗಿ ತಮ್ಮ ದೇಶಗಳಿಂದ ತಮಗೆ ಸುಭಿಕ್ಷವೆಂದು ತೋರಿದ ದೇಶಾಂತರಗಳಿಗೂ ವಲಸೆಹೋದದ್ದೂ, ಅವರಿಗೆ ಅಲ್ಲಿಯ ರಾಜರುಗಳು ಅಗ್ರಹಾರಗಳನ್ನು ಹಾಕಿಕೊಟ್ಟು ಬಹುಮಾನಿಸಿದ್ದೂ ನಮ್ಮ ದೇಶದ ಸಂಕೇತಿಗಳ ಪೂರ್ವಜರ ಕಥೆಯಿಂದ ಗೊತ್ತಾಗುತ್ತದೆ. ಯಾವದಾದರೊಂದು ಬಗೆಯ ಯಜ್ಞವನ್ನು ಮಾಡದವನಿಗೆ ಈ ಲೋಕದ ಸುಖವೇ ಇಲ್ಲ ; ಇನ್ನು ಪರಸುಖವೆಲ್ಲಿಂದ ಬಂತು ?

ಈಗ ನಾವು ಶಾಸ್ತ್ರಗಳನ್ನು ಹೇಳುತ್ತಾ, ಶಾಸ್ತ್ರಾಚಾರಗಳನ್ನು ತ್ಯಜಿಸುತ್ತಾ ಪಾಶ್ಚಾತ್ಯರ ಅನುಕರಣೆಯಿಂದ ನರತ್ವವನ್ನು ಕಳೆದುಕೊಂಡು ವಾನರರಾಗುತ್ತಿದೇವೆ !

ಪ್ರಕೃತವೇನೆಂದರೆ : ಮನುಷ್ಯತ್ವಕ್ಕೆ ಸಾರ್ಥಕ್ಯವನ್ನುಂಟುಮಾಡಿಕೊಳ್ಳಬೇಕೆಂಬವನು ಯಜ್ಞಾದಿಕರ್ಮಗಳನ್ನು ಮಾಡಿ ದೇವತಾದಿಗಳನ್ನು ತುಷ್ಟಿಗೊಳಿಸಿ ಇಹಪರಸುಖವನ್ನನುಭವಿಸಬೇಕು. ಈ ಲೋಕದ ಸುಖವೆಂದರೆ ಬರಿಯ ಇಂದ್ರಿಯಗಳ ಭೋಗದ ಸುಖವಲ್ಲ; ಅತೀಂದ್ರಿಯವಾದ ತತ್ತ್ವಗಳನ್ನು ಅರಿಯುವದಕ್ಕೆಂದು ತನ್ನ ದೇಹೇಂದ್ರಿಯಗಳನ್ನು ಬಿಗಿಹಿಡಿದು ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಬೇಕು. ನಾವು ಮುಮುಕ್ಷುಗಳು ಎಂದು

ನಡೆಸುತ್ತಾ ಕರ್ಮಗಳನ್ನೂ ಬಿಟ್ಟು ಕರ್ಮ, ಬ್ರಹ್ಮ- ಈ ಎರಡರಿಂದಲೂ ಭ್ರಷ್ಟರಾಗಬಾರದು. ನಮ್ಮ ಹೃದಯಕ್ಕೆ ಮೆಚ್ಚಾದ ನಮ್ಮ ಯೋಗ್ಯತೆಗೆ ತಕ್ಕ ಯಾವದಾದರೊಂದು ಯಜ್ಞಭೇದವನ್ನು ಆಚರಿಸಿ ಪುರುಷಾರ್ಥಕ್ಕೆ ಪಾತ್ರರಾಗಬೇಕು.

---

## ೯. ಸ್ವಾಧ್ಯಾಯಜ್ಞಾನಯಜ್ಞಗಳು

(7—8—69)

ಯಜ್ಞಪ್ರಭೇದಗಳನ್ನು ಕುರಿತು ಮಾತನಾಡುವಾಗ ಗೀತೆಯಲ್ಲಿ 'ಸ್ವಾಧ್ಯಾಯಜ್ಞಾನಯಜ್ಞಾಶ್ಚ' (ಗೀ. ೪-೨೮) ಸ್ವಾಧ್ಯಾಯಯಜ್ಞದವರು, ಜ್ಞಾನಯಜ್ಞದವರು- ಎಂಬ ವಿಶೇಷಣಗಳಿಂದ ಒಂದು ಬಗೆಯ ಯಜ್ಞವಿಶೇಷವನ್ನು ಹೇಳಿತ್ತು. ಈಗ ಅದನ್ನು ಕುರಿತು ಸ್ವಲ್ಪ ಮಾತನಾಡಬಹುದಾಗಿದೆ.

ಸ್ವಾಧ್ಯಾಯವೆಂದರೆ ಅಧ್ಯಯನ. ತಮ್ಮತಮ್ಮ ಶಾಖೆಯ ವೇದಭಾಗವನ್ನು ಅಧ್ಯಯನಮಾಡಿದವರೂ ಎಲ್ಲಾ ವೇದಗಳನ್ನೂ ಅಧ್ಯಯನಮಾಡಿದವರೂ ಬಲು ಹಿಂದಿನ ಕಾಲದಲ್ಲಿ ಇದ್ದರು. ಯಾಜ್ಞವಲ್ಕ್ಯರು ನಾಲ್ಕು ವೇದಗಳನ್ನೂ ಸಾಂಗವಾಗಿ ಅಧ್ಯಯನಮಾಡಿದವರೆಂಬುದು ತಮ್ಮ ಶಿಷ್ಯನನ್ನು 'ಸಾಮಶ್ರವ' ಎಂದು ಕರೆದ ಅನ್ವರ್ಥವಿಶೇಷಣಬಲದಿಂದ ಗೊತ್ತಾಗುತ್ತದೆ- ಎಂದು ಭಾಷ್ಯಕಾರರು ಹೇಳಿರುತ್ತಾರೆ. ಈಗ ಸ್ವಸ್ವಶಾಖೆಯನ್ನು ಅಧ್ಯಯನಮಾಡಿದವರುಕೂಡ ಸಿಕ್ಕುವದು ಬಹುಕಷ್ಟವಾಗಿದೆ. ಅಲ್ಪಸ್ವಲ್ಪ ಅಧ್ಯಯನಮಾಡಿದ ಬ್ರಾಹ್ಮಣರೂ ಸಂಖ್ಯೆಯಲ್ಲಿ ಕಡಿಮೆಯಾಗುತ್ತಿದ್ದಾರೆ. ಎಲ್ಲಿಯೋ ಕೆಲವರು ಪೀಠಾಧಿಗಪತಿಗಳು ವೇದರಕ್ಷಣೆಯ ಪ್ರಯತ್ನವನ್ನು ಮಾಡುತ್ತಿದ್ದಾರೆ. ಧರ್ಮರಾಯನು ಅಕ್ಷದ್ಯೂತದಲ್ಲಿ ರಾಜ್ಯವನ್ನು ಸೋತು ವನವಾಸಕ್ಕೆ ಹೊರಟಾಗ ಹಲವು ಸಾವಿರ ಅಗ್ನಿಹೋತ್ರಿಗಳು ಅವನ ಹಿಂದೆಯೇ ಹೊರಡುವದಕ್ಕೆ ಸಿದ್ಧರಾದರಂತೆ. ಕ್ಷತ್ರಿಯಶ್ರೇಷ್ಠನಾದ ಯುಧಿಷ್ಠಿರನು 'ಇಷ್ಟುಜನ ಬ್ರಾಹ್ಮಣರನ್ನು ಹೇಗೆ ಕಾಪಾಡಲಿ !'- ಎಂಬ ಯೋಚನೆಯಿಂದ ವ್ಯಾಕುಲಿತನಾಗಿರುವಲ್ಲಿ ಧೌಮ್ಯರ ಸೂಚನೆಯಂತೆ ಸೂರ್ಯನನ್ನು ಕುರಿತು ತಪಸ್ಸುಮಾಡಿದಾಗ ಆ ದೇವತೆಯ ಅನುಗ್ರಹದಿಂದ ಅಕ್ಷಯಪಾತ್ರೆಯನ್ನು ಪಡೆದುಕೊಂಡನೆಂದು ಮಹಾಭಾರತದ ಕಥೆ. ಬ್ರಾಹ್ಮಣರನ್ನು ಕಾಪಾಡುವದೆಂದರೆ ವೇದರಕ್ಷಣೆ. ಆದಿಕರ್ತೃವಾದ ನಾರಾಯಣನೆಂಬ ವಿಷ್ಣುವು ಭೂಮಿಯ ಬ್ರಹ್ಮವಾದ ಬ್ರಾಹ್ಮಣತ್ವದ ರಕ್ಷಣೆಗಾಗಿ ದೇವಕಿಯಲ್ಲಿ ವಸುದೇವನಿಂದ ಕೃಷ್ಣನಾಗಿ ಅಂಶಾವ-

ಕಾರವನ್ನು ಮಾಡಿದನು. 'ಸ ಆದಿಕರ್ತಾ ನಾರಾಯಣಾಖ್ಯೋ ವಿಷ್ಣು ರ್ಭೌಮಸ್ಯ ಬ್ರಹ್ಮಣೋ ಬ್ರಾಹ್ಮಣತ್ವಸ್ಯ ರಕ್ಷಣಾರ್ಥಂ ದೇವಕ್ಯಾಂ ವಸುದೇವಾತ್ ಅಂಶೇನ ಕೃಷ್ಣಃ ಕಿಲ ಸಂಬಭೂವ' ಎಂದು ಶಂಕರಾಚಾರ್ಯರು ಬರೆದಿರುತ್ತಾರೆ. ಬ್ರಾಹ್ಮಣ್ಯವೇ ಪರೆ ಭೂಮಿಯ ಮೇಲಿರುವ ಬ್ರಹ್ಮವೇ ಎಂದು ಮಹಾಭಾರತಕಾರರ ಹೇಳಿಕೆ. ಬ್ರಾಹ್ಮಣ್ಯವನ್ನು ಕಾಪಾಡುವದು ರಾಜರ ಕರ್ತವ್ಯವೆಂಬುದು ಹಾಗಿರಲಿ. ಭಗವಂತನು ಅದಕ್ಕಾಗಿಯೇ ಅವತಾರಮಾಡಿರುತ್ತಾನೆ. 'ಬ್ರಾಹ್ಮಣತ್ವಸ್ಯ ಹಿ ರಕ್ಷಣೇನ ರಕ್ಷಿತಃ ಸ್ಯಾದ್ ವೈದಿಕೋ ಧರ್ಮಃ' ಬ್ರಾಹ್ಮಣ್ಯವನ್ನು ಕಾಪಾಡಿದರೆ ವೈದಿಕಧರ್ಮವನ್ನೇ ಕಾಪಾಡಿದಂತೆ; 'ತದಧೀನತ್ವಾತ್ ವರ್ಣಾಶ್ರಮಭೇದಾನಾಮ್' ವರ್ಣಾಶ್ರಮಭೇದಗಳು ಬ್ರಾಹ್ಮಣ್ಯಕ್ಕೆ ಅಧೀನವಾಗಿರುತ್ತವೆ– ಎಂಬುದು ಶಂಕರಭಗವತ್ಪಾದರ ಹೇಳಿಕೆ. ಬ್ರಾಹ್ಮಣ್ಯಕ್ಕೆ ವೇದವು ಮುಖ್ಯ, ಸಂಸ್ಕೃತಭಾಷೆಯೂ ಮುಖ್ಯ. ನಾವು ಭಾರತದೇಶದ ಪ್ರಾಚೀನಸಂಸ್ಕೃತಿಯನ್ನು ಕಾಪಾಡಿಕೊಳ್ಳಬೇಕಾದರೆ, ಮತ್ತು ನಮ್ಮ ದೇಶದ ಒಗ್ಗಟ್ಟು ಉಳಿಯಬೇಕಾದರೆ ಸಂಸ್ಕೃತಭಾಷೆಯನ್ನು ಕಲಿಯಬೇಕು. ಹಿಂದೂಗಳಂತೂ ತಪ್ಪದೆ ಸಂಸ್ಕೃತ ಭಾಷೆಯನ್ನು ಅಭ್ಯಾಸಮಾಡಲೇಬೇಕು. ದೇಶಭಾಷೆಗಳಲ್ಲಿಲ್ಲಿ ಸಂಸ್ಕೃತದ ಶಬ್ದಗಳು ತುಂಬಿರುತ್ತವೆ. ದೇಶಭಾಷೆಗಳ ಪೋಷಕವೂ ದೇಶದ ಒಗ್ಗಟ್ಟಿನ ದ್ಯೋತಕವೂ ವೈದಿಕಸಂಸ್ಕೃತಿಯ ವಾಙ್ಮಯದ ಭಾಂಡಾಗಾರವೂ ಆಗಿರುವ ಸಂಸ್ಕೃತವನ್ನು ಅನಾದರಮಾಡಿದರೆ ನಮಗೆ ದೇಶದ್ರೋಹವೇ ಗಂಟುಬಿದ್ದೀತು ! ಸಂಸ್ಕೃತಭಾಷೆಯು 'ಮೃತಭಾಷೆ', 'ಕಲಿಯುವದಕ್ಕೆ ಕಷ್ಟ'–ಎಂಬ ಕುಂಟನೆಪವನ್ನು ಹೇಳುತ್ತಿರುವ ಸೋಮಾರಿಗಳು ಪಾಶ್ಚಾತ್ಯರನ್ನು ನೋಡಬೇಕು. ಅವರಲ್ಲಿ ಮೂರೇ ತಿಂಗಳಲ್ಲಿ ಸಂಸ್ಕೃತಸಂಭಾಷಣೆಯನ್ನು ಕಲಿಯಿಸುವ ಏರ್ಪಾಡುಮಾಡಿಕೊಂಡಿರುವ ಸಕಲವಿದ್ಯಾನಿಲಯಗಳುಂಟು. ಅವರು ಈಗಲೂ ಶ್ರದ್ಧಾವಂತರಾಗಿ ಸಂಸ್ಕೃತವನ್ನು ಓದುತ್ತಿದಾರೆ.

ಪ್ರಾಸಂಗಿಕವಾದ ಈ ವಿಷಯವಂತಿರಲಿ, ಪ್ರಕೃತವಾದ ಸ್ವಾಧ್ಯಾಯಜ್ಞಾನಯಜ್ಞಗಳ ವಿಚಾರವನ್ನು ತೆಗೆದುಕೊಳ್ಳೋಣ. ಭಗವಂತನು ತನ್ನ ವಿಭೂತಿಗಳನ್ನು ಅನುಕ್ರಮಿಸಿರುವಲ್ಲಿ,

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥**

ಗೀ. ೧೦–೨೫

ಎಂದಿರುತ್ತಾನೆ. ಭೃಗುಮಹರ್ಷಿಗಳು ಶ್ರೀವಿಷ್ಣುವಿನ ಉತ್ಕರ್ಷವನ್ನು ತೋರಿಸುವದಕ್ಕಾಗಿ ಶೇಷಶಾಯಿಯಾದ ಮಹಾವಿಷ್ಣುವನ್ನು ಕಾಲಿನಿಂದ ಒದೆದು ರೇಗಿಸಿದರೂ ಭಗವಂತನು ಕೂಡಲೆ ಎದ್ದು 'ತಮ್ಮ ಪಾದಕ್ಕೆ ಬಹಳ ನೋವಾಗಿರಬೇಕು'

ಎಂದು ಕಾಲನ್ನು ಒತ್ತುವದಕ್ಕೆ ಹೊರಟನಂತೆ ! ಭೃಗುಗಳು ಒದೆದ ಗುರುತನ್ನು ಭಕ್ತರ ಹೆಗ್ಗುರುತೆಂದು ತನ್ನ ಎದೆಯಮೇಲೆ ಅಂದಿನಿಂದ ಭಗವಂತನು ಧರಿಸಿದನು ಎಂದು ಪುರಾಣ. ಭಗವದ್ಭಕ್ತರಾದ ಭೃಗುಗಳಂಥವರಿಗೇ ಗೊತ್ತು, ಆ ಭಗವಂತನ ಸರ್ವೋತ್ಕೃಷ್ಟತೆ. ಅಂಥವರು ಭಗವಂತನ ಕೀರ್ತಿಯು ಪ್ರಾಕೃತರಿಗೆ ಗೊತ್ತಾಗಲೆಂದು ತಮ್ಮ ಅಶ್ರೇಯಸ್ಸಿಗೆ ಕಾರಣವಾಗಬಹುದಾದಂಥ ಸಾಹಸಗಳಿಗೆ ಕೂಡ ಕೈಹಾಕುವರು. ಮಹರ್ಷಿಗಳಲ್ಲಿ ಭೃಗುವೆಂದರೆ ನಾನೇ ಎಂದು ಭಗವಂತನು ಹೇಳಬೇಕೆಂದರೆ ಅವರ ಮನೋನಿಷ್ಠೆಯು ಶರೀರಾಭಿಮಾನವನ್ನು ಮೀರಿದ ಭೂಮಿಕೆಯಲ್ಲಿದ್ದಿರಬೇಕೆಂಬುದು ಸ್ಪಷ್ಟ. ಜ್ಞಾನನಿಷ್ಠೆಯು ಪ್ರಕೃತವಲ್ಲವಾದ್ದರಿಂದ ಅವರ ಮಾತಂತಿರಲಿ.

**ಗಿರಾಮಸ್ಮ್ಯೇಕಮಕ್ಷರಮ್.** ವೇದವು ಸಕಲಶಾಸ್ತ್ರಾರ್ಥದ್ಯೋತಕವಾಗಿರುವದಷ್ಟೆ ? ಅವರಲ್ಲಿ ಪರಮಾರ್ಥತತ್ತ್ವವನ್ನು ಹೇಳುವ – ಮೂರೂ ವೇದಗಳ ಸಾರವಾದ ವ್ಯಾಹೃತಿಗಳಿಗೂ ಸಾರವಾದ – ಓಂಕಾರವೆಂಬುದು ಸಾಮಾನ್ಯರ ಬುದ್ಧಿಗೆ ಎಟಕುವ ತತ್ತ್ವವಲ್ಲ. ಪ್ರಜಾಪತಿಯು ಲೋಕಗಳ ಸಾರವನ್ನೆಲ್ಲ ಗ್ರಹಿಸಬೇಕೆಂದು ತಪಸ್ಸುಮಾಡಿದಾಗ ಮೂರು ವ್ಯಾಹೃತಿಗಳೂ ಅವುಗಳಿಗೆ ಸಾರವಾಗಿ ಓಂಕಾರವೂ ಅಭಿವ್ಯಕ್ತವಾದವು ಎಂದು ಉಪನಿಷತ್ತಿನಲ್ಲಿದೆ. ಎಲೆಯಲ್ಲಿ ನಾಳಗಳು ಹೇಗೆ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವವೋ ಹಾಗೆಯೇ ವಾಕ್ಕಿನಲ್ಲೆಲ್ಲ ಓಂಕಾರವು ವ್ಯಾಪಿಸಿಕೊಂಡಿರುವದು. ಸಕಲವೇದಗಳನ್ನೂ ಸಕಲವೇದೋಕ್ತ ಕರ್ಮಗಳನ್ನೂ ಮೀರಿ ಬ್ರಹ್ಮನಿಷ್ಠರಾಗುವದಕ್ಕೆ ಅರ್ಹರಾದ ಪರಮಹಂಸರು ಓಂಕಾರನಿಷ್ಠರಾಗಿರುತ್ತಾರೆ. ಮಿಕ್ಕ ಆಶ್ರಮದವರೆಲ್ಲರಿಗೂ ಪುಣ್ಯಲೋಕವು ದೊರೆತರೆ ಬ್ರಹ್ಮಸಂಸ್ಥರಾದವರಿಗೆ ಅಮೃತತ್ವವೇ ದೊರಕುವದು. ಓಂಕಾರದ ಉಪಾಸನೆಯು ಬ್ರಹ್ಮಲೋಕದಲ್ಲಿ ಬ್ರಾಹ್ಮವಾದ ಐಶ್ವರ್ಯವನ್ನು ಕೊಟ್ಟು ಕ್ರಮಮುಕ್ತಿಯನ್ನು ಕೊಡುತ್ತದೆ ಎಂದು ಉಪನಿಷತ್ತು ಸಾರುತ್ತಿರುವದು. ಈ ಓಂಕಾರದ ತತ್ತ್ವವು ಇನ್ನೂ ಗಹನವಾದ ಪರಬ್ರಹ್ಮವೇ ಆಗಿರುತ್ತದೆ, ಇದು ಹೇಗೆಂಬುದನ್ನು ಅತ್ಯುತ್ತಮಾಧಿಕಾರಿಗಳಾದ ಮುಮುಕ್ಷುಗಳು ಅನುಭವಕ್ಕೆ ತಂದುಕೊಳ್ಳುವ ವಿಧಾನವನ್ನು ಮಾಂಡೂಕ್ಯೋಪನಿಷತ್ತಿನಲ್ಲಿ ಹೇಳಿರುತ್ತದೆ.

**'ಯಜ್ಞಾನಾಂ ಜಪಯಜ್ಞೋಽಸ್ಮಿ'** ಎಂದು ಭಗವಂತನು ಹೇಳಿರುವಲ್ಲಿ ಜಪಕ್ಕೆ ಎಂಥ ಹೆಚ್ಚಿನ ಸ್ಥಾನವಿದೆ ಎಬುದು ಸ್ವಲ್ಪಮಟ್ಟಿಗೆ ಮನಸ್ಸಿಗೆ ತಾಕಬಹುದು. ಬಾಹ್ಯಯಜ್ಞದಲ್ಲಿ ಸ್ವಲ್ಪಮಟ್ಟಿನ ಹಿಂಸೆಯ ಶಂಕೆಯಾದರೂ ಇರಬಹುದು ; ಆದರೆ ಜಪಯಜ್ಞದಲ್ಲಿರುವ ಸಾಧಕರು ಪಡೆಯುವ ಸ್ಥಿತಿಯನ್ನು ಅನುಭವಿಸಿರುವವರು ಮಾತ್ರ ಹೇಳಬೇಕಾಗಿದೆ. ಭಗವದ್ಗೀತೆಯ ಉಪಸಂಹಾರ

ದಲ್ಲಿ ಭಗವಂತನು ಹೇಳಿರುವ ವಾಕ್ಯವು ಮನಸ್ಸಿನಲ್ಲಿ ಹೊರಳಾಡಿಸುವದಕ್ಕೆ [illegible]

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥** ಗೀ. ೧೮–೭೦

ಯಾವನು ಧರ್ಮಾವಹವಾದ ಈ ಕೃಷ್ಣಾರ್ಜುನಸಂವಾದರೂಪವಾದ ಗ್ರಂಥವನ್ನು ಪಠನಮಾಡುವನೋ ಅವನಿಗೆ ಜ್ಞಾನಯಜ್ಞದಿಂದ ಭಗವಂತನನ್ನು ಪೂಜಿಸಿದ ಫಲವು ದೊರಕುವದು– ಎಂದು ಶ್ರೀಕೃಷ್ಣನು ನುಡಿದಿರುತ್ತಾನೆ. ಶ್ರೀ ಶಂಕರಭಗವತ್ಪಾದರು ಇಲ್ಲಿ ಅದರ ಭಾಷ್ಯದಲ್ಲಿ.

"ವಿಧಿಜಪೋಪಾಂಶುಮಾನಸಾನಾಂ ಯಜ್ಞಾನಾಂ ಜ್ಞಾನಯಜ್ಞೋ ಮಾನಸತ್ವಾತ್ ವಿಶಿಷ್ಟತಮಃ, ಇತ್ಯತಸ್ತೇನ ಜ್ಞಾನಯಜ್ಞೇನ ಗೀತಾಶಾಸ್ತ್ರಸ್ಯ ಅಧ್ಯಯನಂ ಸ್ತೂಯತೇ । ಫಲವಿಧಿರೇವ ವಾ ದೇವತಾದಿವಿಷಯಜ್ಞಾನಯಜ್ಞಫಲತುಲ್ಯಂ ಅಸ್ಯ ಫಲಂ ಭವತೀತಿ॥"

ಎಂದು ಬರೆದಿರುತ್ತಾರೆ. ವಿಧಿಜಪ (ಶಾಸ್ತ್ರವಿಹಿತವಾದ ರೀತಿಯಲ್ಲಿ ಜಪಿಸುವದು), ಉಪಾಂಶುಜಪ (ತನಗೆ ಮಾತ್ರ ಕೇಳಿಸುವಷ್ಟು ಪಿಸುಮಾತಿನಲ್ಲಿ ಜಪಿಸಿಕೊಳ್ಳುವದು), ಮಾನಸಜಪ (ಮನಸ್ಸಿನಲ್ಲಿಯೇ ಜಪಿಸಿಕೊಳ್ಳುವದು)– ಈ ಮೂರರೊಳಗೆ ಜ್ಞಾನಯಜ್ಞವೆಂಬ ಜಪವು ಮಾನಸವಾದ್ದರಿಂದ ಅತ್ಯಂತವಿಶಿಷ್ಟವಾಗಿರುತ್ತದೆ. ಗೀತೆಯನ್ನು ಪಠನಮಾಡಿದರೆ ಅಂಥ ಕಷ್ಟಸಾಧ್ಯವಾದ ಜಪವನ್ನು ಮಾಡಿದಂತೆಯೇ ಆಗುವದೆಂದು ಇಲ್ಲಿ ಗೀತಾಪಠನವನ್ನು ಹೊಗಳಿದೆ– ಎಂದು ಒಂದು ವ್ಯಾಖ್ಯಾನ. ಅಥವಾ ದೇವತಾದಿಗಳ ವಿಷಯದ ಉಪಾಸನೆಯ ರೂಪವಾದ ಜ್ಞಾನಯಜ್ಞವನ್ನು ಮಾಡಿದರೆ ಯಾವ ಫಲವು ಬರುವದೋ, ಗೀತಾಪಠನದಿಂದಲೂ ಅದೇ ಫಲವು ದೊರಕುವದು– ಎಂದು ಗೀತಾಪಠನಕ್ಕೆ ಫಲವನ್ನು ಇಲ್ಲಿ ಹೇಳಿದೆ. ಶ್ರದ್ಧಾಭಕ್ತಿಗಳಿಂದ ಪಠಿಸಿದರೆ ಇಂಥ ಉತ್ಕೃಷ್ಟವಾದ ಫಲವು ದೊರಕುವದು ಎಂದು ಅಭಿಪ್ರಾಯ– ಎಂದು ಈ ವಾಕ್ಯಕ್ಕೆ ಮತ್ತೊಂದು ವ್ಯಾಖ್ಯಾನ.

ಅಂತೂ ಜ್ಞಾನಯಜ್ಞ ಎಂಬುದು ಬಹಳ ಹೆಚ್ಚಿನ ಯಜ್ಞವು. ಪ್ರಕೃತದಲ್ಲಿ ಸ್ವಾಧ್ಯಾಯದ ಸಾಧನದಲ್ಲಿ ಗೀತಾದಿಗಳ ಪಠನವನ್ನು ಜ್ಞಾನಯಜ್ಞವೆಂಬ ಹೆಸರಿನಿಂದ ಸ್ತುತಿಸಿದೆ –ಎಂದು ತಿಳಿದುಕೊಂಡರೆ ಸಾಕಾಗಿರುತ್ತದೆ.

ವಿಷ್ಣುಸಹಸ್ರನಾಮವನ್ನು ಮಹಾಭಾರತದಲ್ಲಿ ಅನುಶಾಸನಪರ್ವದಲ್ಲಿ ಹೇಳಿರುವದೇಕೆಂದರೆ : ಇದು ಸರ್ವವರ್ಣದವರಿಗೂ ಸಮಾನವಾದ ಸಾಧನಕ್ಕೆ ಅನುಕೂಲವಾಗಿರಲೆಂಬ ಕಾರಣದಿಂದ-ಎಂದು ವ್ಯಾಖ್ಯಾನಕಾರರು ಬರೆದಿರುತ್ತಾರೆ.

ಧರ್ಮದ ಅರಿವು ಎಲ್ಲರಿಗೂ ಲಭಿಸಲಿ ಎಂಬ ಕಾರಣದಿಂದ 'ಸ್ತ್ರೀಶೂದ್ರ ದ್ವಿಜಬನ್ಧೂನಾಂ ತ್ರಯೀ ನ ಶ್ರುತಿಗೋಚರಾ । ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥' (ಭಾಗ. ೧-೪-೨೫) ಸ್ತ್ರೀಯರಿಗೂ ಶೂದ್ರರಿಗೂ ದ್ವಿಜಬಂಧುಗಳಿಗೂ–ಎಂದರೆ ದ್ವಿಜರಾಗಿ ಹುಟ್ಟಿದ್ದರೂ ವೇದಾಧ್ಯಯನಭ್ರಷ್ಟರಾದವರಿಗೂ ವೇದವು ಕಿವಿಗೆ ಬೀಳುವುದಿಲ್ಲವಲ್ಲ ! ಅವರಿಗೆ ಹೇಗಾದರೂ ಧರ್ಮದ ಮಾರ್ಗವು ಲಭಿಸಲಿ !- ಎಂಬ ಮರುಕದಿಂದ ವ್ಯಾಸರು ಮಹಾಭಾರತವನ್ನು ರಚಿಸಿರುತ್ತಾರೆ. ಅದರಲ್ಲಿಯೂ ವಿಷ್ಣುಸಹಸ್ರನಾಮವು ವಿಶೇಷವಾಗಿ ಪಠನಮಾತ್ರದಿಂದ ಸಾಮಾನ್ಯರನ್ನುಕೂಡ ಕೃತಾರ್ಥರನ್ನಾಗಿ ಮಾಡುತ್ತದೆ. ಅದರಲ್ಲಿ ಪ್ರಾರಂಭದಲ್ಲಿಯೇ ಯುಧಿಷ್ಠಿರನು ಭೀಷ್ಮರನ್ನು ಕುರಿತು ಈ ಪ್ರಶ್ನೆಯನ್ನು ಕೇಳಿರುತ್ತಾನೆ ;

'ಕಿಂ ಜಪನ್ ಮುಚ್ಯತೇ ಜನ್ತುಃ ಜನ್ಮಸಂಸಾರಬನ್ಧನಾತ್' (ಏನನ್ನು ಜಪಿಸುವುದರಿಂದ ಜೀವನು ಮುಕ್ತನಾಗುತ್ತಾನೆ) ?

ಇದಕ್ಕೆ ಭೀಷ್ಮರು ಕೊಟ್ಟಿರುವ ಉತ್ತರವೇನೆಂದರೆ :

**ಜಗತ್ಪ್ರಭುಂ ದೇವದೇವಮನನ್ತಂ ಪುರುಷೋತ್ತಮಮ್ ।**
**ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ ॥**
**ತಮೇವ ಚಾರ್ಚಯನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ ।**
**ಧ್ಯಾಯನ್ ಸ್ತುವನ್ನಮಸ್ಯಂಶ್ಚ ಯಜಮಾನಸ್ತಮೇವ ಚ ॥**
**ಅನಾದಿನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ ।**
**ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋ ಭವೇತ್ ॥**

ಜಗತ್ತಿಗೆಲ್ಲ ಪ್ರಭುವೂ ದೇವತೆಗಳಿಗೆಲ್ಲ ದೇವನೂ ಆಗಿರುವ ಪುರುಷೋತ್ತಮನಾದ ವಿಷ್ಣುವನ್ನು ಸಹಸ್ರನಾಮದಿಂದ ನಿತ್ಯವೂ ಬೆಳಗ್ಗೆ ಎದ್ದು ಸ್ತುತಿಸಿದರೆ ಸರ್ವದುಃಖಗಳಿಂದಲೂ ಮನುಷ್ಯನು ಬಿಡುಗಡೆಯನ್ನು ಹೊಂದುವನು. ಈ ಸ್ತೋತ್ರದ ಪಠನೆಯಿಂದ ಮನಸ್ಸು ಪಕ್ವವಾಗಿ ಕೊನೆಗೆ ಅದರಿಂದ ಮುಕ್ತನೂ ಆಗುವನು. ಜೀವನು ಭಗವಂತನಿಂದ ಪರಾಙ್ಮುಖನಾಗಿದ್ದವನು ಅವನ ಕಡೆಗೆ ತಿರುಗಿದರೆ ಸಾಕು, "ಕಡೆಗೂ ನನ್ನ ಬಳಿಗೆ ಬಂದನಲ್ಲ"–ಎಂದು ಭಗವಂತನು ಇವನನ್ನು ಸಂತೋಷದಿಂದ ಬಾಚಿತಬ್ಬಿಕೊಳ್ಳುತ್ತಾನೆ: ಈ ಜಪಯಜ್ಞದ ವಿಷಯದಲ್ಲಿ ಮತ್ತೊಮ್ಮೆ ವಿಸ್ತಾರವಾಗಿ ಹೇಳುವವನಿದ್ದೇನೆ. ಆದ್ದರಿಂದ ಇದನ್ನು ಇಷ್ಟಕ್ಕೆ ನಿಲ್ಲಿಸೋಣ. ಮಿಕ್ಕ ಯಜ್ಞಗಳು ನಮಗೆ ಸಾಧ್ಯವಾಗದೆ ಇದ್ದರೂ ಈ ಜಪಯಜ್ಞವನ್ನಾದರೂ ಕೈಗೊಳ್ಳಬೇಕು.

ಸಾಮಾನ್ಯವಾದ ಒಂದು ಸ್ತೋತ್ರವನ್ನು ಹೇಳಿಕೊಂಡಮಾತ್ರದಿಂದ ಇಂಥ ಮಹಾಫಲವುಂಟಾದೀತೆ ? –ಎಂದು ಶಂಕಿಸಬಾರದು. ಸಾಧನದ ಮಹತ್ತ್ವವು

ಅದನ್ನು ಶ್ರದ್ಧಾಭಕ್ತಿಗಳಿಂದ ಅನುಷ್ಠಾನಮಾಡುವುದರಲ್ಲಿಯೇ ಹೊರತು ಅದು ಸುಲಭಸಾಧ್ಯವೋ, ಕಷ್ಟಸಾಧ್ಯವೋ ?- ಎಂಬುದನ್ನು ಅವಲಂಬಿಸಿರುವುದಿಲ್ಲ. ದಂಭಾದಿಗಳನ್ನು ತ್ಯಜಿಸಿ ಜ್ಞಾನಯಜ್ಞವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡಿದರೆ ಅವಶ್ಯವಾಗಿ ಫಲವಾಗುವುದು.

## ೧೦. ದೇವತೆಗಳೂ ಈಶ್ವರನೂ

(8—8—69)

ಯಜ್ಞಾದಿಕರ್ಮಗಳು ತಮ್ಮನ್ನು ಮಾಡಿದ ಸ್ವಲ್ಪಹೊತ್ತಿನಲ್ಲಿಯೇ ಇಲ್ಲಿಯೇ ನಷ್ಟವಾಗಿಬಿಡುವುದರಿಂದ ಅವುಗಳಿಗೆ ಕಾಲಾಂತರದಲ್ಲಿ ಲೋಕಾಂತರದಲ್ಲಿ ಹೇಗೆ ಫಲವುಂಟಾದೀತು ?- ಎಂಬ ಶಂಕೆಯನ್ನು ತೆಗೆದು "ಶಾಸ್ತ್ರಪ್ರಾಮಾಣ್ಯದಿಂದ ಆ ಫಲವು ಅವಶ್ಯವಾಗಿ ಉಂಟಾಗುತ್ತದೆ ಎಂದು ನಂಬಬೇಕು. ಕರ್ಮಾನುಷ್ಠಾನದಿಂದ '**ಅಪೂರ್ವ**'ವೆಂಬ ಒಂದಾನೊಂದು ಅದೃಷ್ಟಶಕ್ತಿವಿಶೇಷವು ಹುಟ್ಟಿಕೊಂಡಿದ್ದು ಆಯಾ ಕಾಲದಲ್ಲಿ ಫಲವನ್ನು ಕೊಡುತ್ತದೆ" ಎಂದು **ಪೂರ್ವಮೀಮಾಂಸಕರು** ಕಲ್ಪಿಸಿದ್ದಾರೆ. ಈ ಕಲ್ಪನೆಯೇನೂ ಅವಶ್ಯವಿಲ್ಲ : ಅಥವಾ ಅರ್ಥಾಪತ್ತಿಪ್ರಮಾಣದಿಂದ ಅದನ್ನು ಕಲ್ಪಿಸಿದರೂ ಅಚೇತನವಾದ ಅಪೂರ್ವವು ತಾನೇ ಎಂದಿಗೂ ಫಲವನ್ನು ಕೊಡಲಾರದು. ಆದ್ದರಿಂದ ನಾವು ಮಾಡುವ ಕರ್ಮಕ್ಕೆ ಮೀಮಾಂಸಕರು ಹೇಳುವಂತೆ ಅಪೂರ್ವವು ದ್ವಾರವಾಗಿರಲಿ, ಬಿಡಲಿ, ಈಶ್ವರನಿಂದಲೇ ಆ ಫಲವು ಅವಶ್ಯವಾಗಿ ಸಿಕ್ಕುವದು- ಎಂದು **ಬಾದರಾಯಣರು ಶಾರೀರಕಮೀಮಾಂಸೆಯಲ್ಲಿ** ಸಿದ್ಧಾಂತವನ್ನು ಮಾಡಿರುತ್ತಾರೆ.

ನಮ್ಮ ದುರ್ದೈವದಿಂದ ಈಗ ಕೆಲವರು ವೇದಾಂತಿಗಳೆನ್ನಿಸಿಕೊಂಡವರು ಕೂಡ ಕರ್ಮಗಳಿಗೆ ಫಲವಿಲ್ಲ-ಎಂದು ಉಪದೇಶಿಸುವಷ್ಟು ಕೆಳಕ್ಕೆ ಇಳಿಯುತ್ತಿರುತ್ತಾರೆ. ಭೌತಿಕವಿಜ್ಞಾನಿಗಳು ನಿಜವಾಗಿ ಇದರ ತತ್ತ್ವವನ್ನು ಕಾಣರಾದರೂ ಈಗಒಂದಿಷ್ಟು ಆ ವಿಜ್ಞಾನಶಾಸ್ತ್ರದ ಭಾಗವನ್ನು ತಿಳಿದುಕೊಂಡವರುಕೂಡ 'ಇದೆಲ್ಲ ವಿಜ್ಞಾನಶಾಸ್ತ್ರಕ್ಕೆ ವಿರುದ್ಧ !' ಎನ್ನುವದಕ್ಕೆ ಮೊದಲುಮಾಡಿರುತ್ತಾರೆ. ರಹಸ್ಯವಾದ ಪ್ರಪಂಚ "The Mysterious Universe" ಎಂಬ ಗ್ರಂಥವನ್ನು ಬರೆದಿರುವ 'ಜೇಮ್ಸ್ ಜೀನ್ಸ್' ಎಂಬಾತನು ಆ ಪುಸ್ತಕದ ಕೊನೆಯಲ್ಲಿ

ಬರೆದಿರುವವರೇನೆಂದರೆ, "ವಿಜ್ಞಾನಶಾಸ್ತ್ರದ ಕಟ್ಟಕಡೆಯ ಮಾತೇನಾದರೂ ಇದ್ದರೆ, 'ಇನ್ನು ನಾವು ಕಡೆಯ ಮಾತೆಂಬುದನ್ನು ಬಿಟ್ಟುಬಿಡಬೇಕು; ನಾಳೆ ಯಾವ ಹೊಸ ತೀರ್ಮಾನವು ಹೊರಕ್ಕೆ ಬರುವದೋ ಹೇಳುವಂತಿಲ್ಲ' ಎಂಬುದು ಕಡೆಯ ತೀರ್ಪು" – ಎಂದಿರುತ್ತಾನೆ ! ವಿಜ್ಞಾನಶಾಸ್ತ್ರವು ಪ್ರಮೇಯಗಳನ್ನು ಕುರಿತು ವಿಚಾರಮಾಡುತ್ತಿರುವದೇ ಹೊರತು, ಪ್ರಮಾಣಗಳ ಅಥವಾ ಪ್ರಮಾತೃವಿನ ತತ್ತ್ವವನ್ನು ಕುರಿತು ವಿಚಾರಮಾಡುವದಕ್ಕೆ ಹೋಗಿಲ್ಲ; ಅದು ತನ್ನ ಕ್ಷೇತ್ರಕ್ಕೆ ಸಂಬಂಧಪಟ್ಟಿಲ್ಲವೆಂಬುದು ಆ ಶಾಸ್ತ್ರಕ್ಕೂ ಗೊತ್ತಾಗಿಬಿಟ್ಟಿರುವಂತಿದೆ.

ಪರಮೇಶ್ವರನೊಬ್ಬನು ಇದ್ದಾನೆ, ದೇವತೆಗಳು ಇದ್ದಾರೆ; ಕಲ್ಲು, ಮಣ್ಣು, ನೀರು,ಮರಗಿಡಗಳು–ಇವುಗಳೊಳಗೆಲ್ಲ ಅಧಿಷ್ಠಾತೃಗಳಾದ ಚೇತನರಾದ ದೇವತೆಗಳು ಇರುವದರಿಂದಲೇ ಅವು ಕೆಲಕೆಲವುನಿಯಮಗಳಿಗೆ ಕಟ್ಟುಬಿದ್ದ ಸ್ವಭಾವವುಳ್ಳವುಗಳಾಗಿರುತ್ತವೆ ! ಬೆಂಕಿಯೆಂಬುದು ಬರಿಯ ಶಕ್ತಿವಿಶೇಷಮಾತ್ರವಲ್ಲ, ಅದಕ್ಕೆ ಅಧಿಷ್ಠಾತೃವಾದ ಅಗ್ನಿದೇವತೆಯೊಂದು ಇದೆ. ನೀರೆಂದರೆ ಸುಮ್ಮನೆ ಹರಿದುಹೋಗುತ್ತಿರುವ ಬರಿಯ ದ್ರವದ್ರವ್ಯವಲ್ಲ; ನೀರಿನ ಅಧಿಷ್ಠಾತೃವಾದ ವರುಣದೇವತೆ ಬೇರೆ ಇದೆ. ಗಿಡಗಳೆಂದರೆ ಭೂಮಿಯಿಂದ ಆಕಸ್ಮಿಕವಾಗಿ ಮೊಳೆತು ಚಿಗುರಿಬೆಳೆದು ಒಣಗುವ ಅಚೇತನವಸ್ತುಗಳಲ್ಲ: ಅವುಗಳಲ್ಲಿಯೂ ಹೆಮ್ಮರಗಳಲ್ಲಿಯೂ ಅವುಗಳ ಅಧಿಷ್ಠಾತೃವಾದ ದೇವತೆಗಳೂ ಇರುತ್ತಾರೆ. ನಮ್ಮೆದುರಿಗೆ ಮನುಷ್ಯರೆಂಬ ಪ್ರಾಣಿಗಳು ಕಂಡರೂ ಅವು ಬರಿಯ ಆಕಾರಮಾತ್ರವಲ್ಲ, ನಾವು ಹೇಗೆ ನಮ್ಮ ಕಾರ್ಯಕರಣಸಂಘಾತಕ್ಕಿಂತ ಬೇರೆಯಾಗಿರುವ ಜೀವಾತ್ಮರೋ, ಹಾಗೆಯೇ ಅವರಲ್ಲಿಯೂ ಬೇರೆಬೇರೆಯ ಆತ್ಮರುಗಳಿರುತ್ತಾರೆ. ಇವೆಲ್ಲ ಅತೀಂದ್ರಿಯವಸ್ತುಗಳಾದರೂ ಈ ದೇವತಾದಿಗಳ ಅಸ್ತಿತ್ವವನ್ನು ನಂಬಬೇಕು. ಇಷ್ಟೇ ಅಲ್ಲ,

ತಮೀಶ್ವರಾಣಾಂ ಪರಮಂ ಮಹೇಶ್ವರಂ
ತಂ ದೇವತಾನಾಂ ಪರಮಂ ಚ ದೈವತಮ್ ।
ಪತಿಂ ಪತೀನಾಂ ಪರಮಂ ಪರಸ್ತಾ-
ದ್ವಿದಾಮ ದೇವಂ ಭುವನೇಶಮೀಡ್ಯಮ್ ॥ ಶ್ವೇ. ೬–೭

ಎಂದು ಶ್ರುತಿಯು ಸಾರುತ್ತಿರುವಂತೆ ದೇವತೆಗಳಿಗೂ ಪರಮದೇವತೆಯಾಗಿರುವ ಈಶ್ವರನೊಬ್ಬನು ಇರುತ್ತಾನೆ.

ಶ್ರೀಕೃಷ್ಣಭಗವಂತನು ಹೇಳಿರುವಂತೆ 'ಯಾವಯಾವನು ಯಾವಯಾವ ದೇವತೆಯನ್ನು ಶ್ರದ್ಧೆಯಿಂದ ಪೂಜಿಸುವದಕ್ಕೆ ಹೊರಡುತ್ತಾನೋ ಆಯಾ ದೇವತೆಯಲ್ಲಿ ಆ ಭಗವಂತನೇ ಭಕ್ತನಿಗೆ ಶ್ರದ್ಧೆಯನ್ನುಂಟುಮಾಡಿಕೊಡುತ್ತಾನೆ. ಆ

ಶ್ರದ್ಧೆಯಿಂದ ಮಾಡಿದ ಪೂಜೆಗೆ ಆಯಾ ದೇವತೆಯೊಳಗೂ ಅಂತರ್ಯಾಮಿಯಾಗಿರುವ ಪರಮೇಶ್ವರನೇ ಫಲವನ್ನು ಕೊಡುತ್ತಾನೆ. ಆದರೆ ದೇವತೆಗಳ ಭಕ್ತರಿಗೆ ಆಗುವ ಪೂಜಾಫಲವು ಅಲ್ಪ, ಅಸ್ಥಿರ; ದೇವತೆಗಳನ್ನು ಪೂಜಿಸುವವರು ದೇವತೆಗಳ ಸಾಯುಜ್ಯವನ್ನು ಪಡೆಯುವಂತೆ ದೇವದೇವನಾದ ಈಶ್ವರನನ್ನು ಪೂಜಿಸುವವರು ಈಶ್ವರನನ್ನೇ ಸೇರುತ್ತಾರೆ.

ಆದ್ದರಿಂದ ದೇವತಾದಿಗಳಿಗೂ ಭಗವಂತನಿಗೂ– ಸೂರ್ಯನಿಗೂ ಅವನ ಕಿರಣಗಳಿಗೂ ಅನನ್ಯವಾದ ಸಂಬಂಧವಿರುವಂತೆ ಸಂಬಂಧವಿರುತ್ತದೆ.

ಯೇಽಪ್ಯನ್ಯದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।
ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥
ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥ ಗೀ. ೯-೨೩,೨೪

ದೇವತೆಗಳನ್ನು ಆರಾಧನೆಮಾಡುವವರೂ ಅವರಲ್ಲಿ ಅಂತರ್ಯಾಮಿಯಾಗಿರುವ ಭಗವಂತನನ್ನೇ ಆರಾಧಿಸುತ್ತಿರುತ್ತಾರೆ; ಆದರೆ ಈ ತತ್ತ್ವವು ಅವರಿಗೆ ತಿಳಿಯದು. ಸರ್ವಾಧಿದೈವತವಾದ ಈಶ್ವರನನ್ನು ಪೂಜಿಸುತ್ತಿದ್ದೇವೆಂಬ ಅರಿವಿಲ್ಲದ್ದರಿಂದಲೇ ಅವರಿಗೆ ಆ ಮಹಾಫಲವು ದೊರಕದೆ ಇರುತ್ತದೆ. ವಿದ್ಯುಚ್ಛಕ್ತಿಯು ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಸಾಮಾನ್ಯರಿಗೆ ಅದು ತಂತಿಯ ಮೂಲಕವಾಗಿಯೇ ಬೆಳಕಾಗಿ ತೋರಿಕೊಳ್ಳುವಂತೆ ಸಾಮಾನ್ಯಶ್ರದ್ಧೆಯ ಜನರಿಗೆ ಆಯಾ ದೇವತೆಯಾಗಿ ಈಶ್ವರನು ತೋರುತ್ತಾನೆ; ಅತ್ಯಂತಪ್ರಾಕೃತರಿಗಂತೂ ಅವು ಪ್ರಾಕೃತಶಕ್ತಿವಿಶೇಷಗಳಾಗಿ ತೋರುವವು!

ಪರಮೇಶ್ವರನೇ ನಿಜವಾಗಿ ಮನುಷ್ಯರಿಗೂ ದೇವತೆಗಳಿಗೂ ಎಲ್ಲಾ ವಸ್ತುಗಳಿಗೂ ನಿಜವಾದ ಆತ್ಮನು; ಆದ್ದರಿಂದ ಅವನು 'ಪರಮಾತ್ಮ' ಎನ್ನಿಸಿಕೊಂಡಿರುತ್ತಾನೆ. ಅತನೇ ದೇವತೆಗಳಿಗೆಲ್ಲ ಅವರವರ ನಿಗ್ರಹಾನುಗ್ರಹಶಕ್ತಿಗಳನ್ನು ಕೊಟ್ಟಿರುತ್ತಾನೆ. ಆದ್ದರಿಂದಲೇ ಅವರು ನಿಯಮದಿಂದ ತಮ್ಮತಮ್ಮ ಅಧಿಕಾರಕ್ಕೆ ಒಳಪಟ್ಟ ಕಾರ್ಯಗಳನ್ನು ತಪ್ಪದೆ ಮಾಡುತ್ತಿರುತ್ತಾರೆ. ಶ್ರುತಿಯಲ್ಲಿ:

ಭೀಷಾಽಸ್ಮಾದ್ವಾತಃ ಪವತೇ। ಭೀಷೋದೇತಿ ಸೂರ್ಯಃ ।
ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ। ಮೃತ್ಯುರ್ಧಾವತಿ ಪಂಚಮ ಇತಿ ॥
ತೈ. ೨–೮

ಎಂದಿದೆ. ಗಾಳಿಯು ನಿಯಮದಿಂದ ಅಡ್ಡಾದಿಡ್ಡಿಯಾಗಿ ಬೀಸುತ್ತಲೇ ಇರುವದು; ಏಕೆಂದರೆ ಗಾಳಿಯ ಅಧಿಷ್ಠಾತೃದೇವತೆಯಾದ ವಾಯುವು ಆ ಅಧಿಕಾರದಲ್ಲಿ ಈಶ್ವರ

ನಿಂದ ನಿಯಮವಾಗಿರುತ್ತದೆ. ಇದರಂತೆ ಸೂರ್ಯನು ತಪ್ಪದೆ ಉದಯಾಸ್ತಮಯ ಗಳನ್ನು ಹೊಂದುತ್ತಿರುವುದು ಈಶ್ವರನ ಕಟ್ಟಳೆಯಿಂದ. ಬೆಂಕಿಯು ಮೇಲಕ್ಕೇ ಉರಿಯುತ್ತಿರುವುದೂ ಮೇಘವು ಅಲ್ಲಲ್ಲಿ ಮಳೆಗರೆಯುತ್ತಿರುವುದೂ ಮರಣವು ನಿಯತವಾಗಿ ಪ್ರಾಣಿಗಳಿಗೆ ಬಂದೊದಗುತ್ತಿರುವುದೂ ಆಯಾ ದೇವತೆಗಳು ಪರಮೇ ಶ್ವರನಿಗೆ ಅಂಜಿಕೊಂಡಿರುವರೋ ಎಂಬಂತೆ ತಮ್ಮತಮ್ಮ ನಿಯತಾಧಿಕಾರದ ಕೆಲಸ ಗಳನ್ನು ತಪ್ಪದೆ ಮಾಡುತ್ತಿರುವುದರಿಂದಲೇ– ಎಂದರಿಯಬೇಕು.

ಆದ್ದರಿಂದ ಈಶ್ವರನು ಎಲ್ಲೆಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದು ಕೊಂಡಿರುತ್ತಾನೆ.

**ಯೋ ದೇವೋಽಗ್ನೌ ಯೋಽಪ್ಸು ವಿಶ್ವಂ ಭುವನಮಾವಿವೇಶ ।**
**ಯ ಓಷಧೀಷು ವನಸ್ಪತಿಷು ತಸ್ಮೈ ದೇವಾಯ ನಮೋ ನಮಃ ॥**

ಶ್ವೇ. ೨–೧೭

ಯಾವ ದೇವನು ಅಗ್ನಿಯಲ್ಲಿರುತ್ತಾನೋ, ಯಾವಾತನು ನೀರಿನಲ್ಲಿರುವನೋ, ಯಾವನು ಗಿಡಮರಗಳಲ್ಲಿರುವನೋ, ಯಾವನು ಜಗತ್ತೆಲ್ಲವನ್ನೂ ವ್ಯಾಪಿಸಿ ಕೊಂಡಿರುವನೋ ಆ ದೇವನಿಗೆ ನಮಸ್ಕಾರ, ನಮಸ್ಕಾರ ! ಸರ್ವವ್ಯಾಪಿಯಾದ ಈಶ್ವರನಲ್ಲಿಯೇ ನಾವೆಲ್ಲರೂ ಇರುತ್ತೇವೆ. ನೀರಿನಲ್ಲಿರುವ ಮೀನು–ಮುಂತಾದ ಪ್ರಾಣಿಗಳಿಗೆ 'ನಾವು ನೀರಿನಲ್ಲಿದೇವೆ' ಎಂಬ ಅರಿವೇ ಇಲ್ಲದೆ ವ್ಯವಹಾರವು ಸಾಗಿರು ವಂತೆ ಸಾಮಾನ್ಯರಿಗೆ ಈಶ್ವರನ ಅಸ್ತಿತ್ವದ ಅರಿವೇ ಇಲ್ಲದೆ ವ್ಯವಹಾರವು ಸಾಗಿರು ತ್ತದೆ. ಆದ್ದರಿಂದ 'ಈಶ್ವರನು ಎಲ್ಲಿದಾನೆ ?' ಎಂಬ ಪ್ರಶ್ನೆಯು ಹಾಸ್ಯಾಸ್ಪದವಾಗಿ ರುತ್ತದೆ. ಸರಕಾರಿಯ ಕೋಶಾಗಾರದಲ್ಲಿ (ಬ್ಯಾಂಕಿನಲ್ಲಿ) ಕೆಲಸಮಾಡುತ್ತಿರುವ ಸರಾಫನು ಸಾವಿರಾರುರೂಪಾಯಿಗಳನ್ನು ಬೆರಳುಗಳಿಂದಾಡಿಸುತ್ತಿದ್ದರೂ ಆವನ ಜೀವನಕ್ಕೆ ನಿಯತವಾಗಿ ಬರುವ ತಿಂಗಳ ಸಂಬಳದ ಹಣವು ಮಾತ್ರ ಬಳಕೆಗೆ ಬರುವಂತೆ ನಾವು ಈಶ್ವರನಲ್ಲಿಯೇ ವ್ಯವಹರಿಸುತ್ತಿದ್ದರೂ ನಮ್ಮನಮ್ಮ ಕರ್ಮಾ ನುಸಾರವಾಗಿ 'ನನ್ನದು' ಎಂದುಕೊಂಡಿರುವಷ್ಟು ಭೋಗೋಪಕರಣಗಳು ಮಾತ್ರ ನಮ್ಮ ಜೀವನದಲ್ಲ ಉಪಯೋಗಕ್ಕೆ ಬರುತ್ತಿರುವವು.

ಈಗ ನಾವು ನಮ್ಮದು ಎಂದುಕೊಂಡಿರುವಷ್ಟುಕೂಡ ನಿಜವಾಗಿ ಆ ಪರಮೇ ಶ್ವರನೇ ನಮಗೆ ಕೊಟ್ಟಿರುವದು. ಗೋಂದಾವಳಿಯ ಶ್ರೀಬ್ರಹ್ಮಚೈತನ್ಯಸದ್ಗುರು **ಮಹಾರಾಜರವರು** "ಈಶ್ವರನು ಇಂತಿಷ್ಟು ಮನೆ, ಹೊಲ, ದನಕರುಗಳು, ಮಕ್ಕಳು, ಹಣ–ಮುಂತಾಗಿ ಅನುಗ್ರಹಿಸಿರುತ್ತಾನೆ; ಕೊನೆಗೆ 'ನಿನಗೆ ಕೊಟ್ಟದ್ದನ್ನು ಹೇಗೆ ಉಪಯೋಗಿಸಿದೆ ?' ಎಂದು ಕೇಳಿದರೆ ಅದಕ್ಕೆ ಏನು ಉತ್ತರವನ್ನು ಕೊಡ ಬೇಕು ?– ಎಂಬುದನ್ನು ಯೋಚಿಸುತ್ತಿರಿ" –ಎಂದು ಉಪದೇಶಿಸುತ್ತಿದ್ದರು.

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಮ್ ॥ ಈ. ೧

ಎಂಬ ಉಪನಿಷದ್ವಚನವು ಹೇಳುತ್ತಿರುವಂತೆ ಈ ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವೂ ಪರಮೇಶ್ವರನಿಂದ ವ್ಯಾಪ್ತವಾಗಿರುತ್ತದೆ. ಇಲ್ಲಿ ಇಂಥದನ್ನು ನನ್ನದು ಎಂಬುದು ಸಲ್ಲದು. ಆದ್ದರಿಂದ ಇದೆಲ್ಲವೂ ಈಶ್ವರನದೇ ಎಂದುಕೊಂಡು ನಿರಭಿಮಾನರಾಗಿ ತ್ಯಾಗಜೀವನದಿಂದ ಸುಖಿಗಳಾಗಿ ಬಾಳಬೇಕು.

## ೧೧. ಚಾತುರ್ವರ್ಣ್ಯ

(9—8—69)

ಈಗ ಭಾರತದಲ್ಲಿರುವ ಸನಾತನಧರ್ಮದ ಅನುಯಾಯಿಗಳ ಸ್ಥಿತಿಯು ಬಹಳ ಶೋಚನೀಯವಾಗಿರುತ್ತದೆ. ಭೌತಿಕಶಾಸ್ತ್ರವು ತನ್ನ ಕ್ಷೇತ್ರದ ಪ್ರಪಂಚವು ಎಷ್ಟೆಷ್ಟು ವಿಶಾಲವಾಗಿರುವದೆಂಬುದನ್ನು ನಮಗೆ ತೋರಿಸುತ್ತಿರುವದೋ, ಆ ಪ್ರಪಂಚದಲ್ಲಿರುವ ಭೌತಿಕವಸ್ತುಗಳ ಸ್ವರೂಪಸ್ವಭಾವಾದಿಗಳನ್ನು ಕುರಿತ ತಿಳಿವಳಿಕೆಯನ್ನು ಎಷ್ಟೆಷ್ಟು ನಮಗೆ ಕೊಡುತ್ತಿರುವದೋ ಅಷ್ಟಷ್ಟುಮಟ್ಟಿಗೆ ನಮಗೆ ಆ ಅತಿಭೌತಿಕವಸ್ತುಗಳ ವಿಷಯದ ಶ್ರದ್ಧೆಯು ಕಡಿಮೆಯಾಗುತ್ತಿದೆ. ಅತೀಂದ್ರಿಯತತ್ತ್ವಗಳು ಇವೆಂದು ಯಾರಾದರೂ ಹೇಳಿಕೊಟ್ಟರೂ ನಮಗೆ ಅದರಲ್ಲಿ ನಂಬಿಕೆಯು ಹುಟ್ಟದಂತಾಗಿಬಿಟ್ಟಿವೆ. ರಾಮಾಯಣ, ಮಹಾಭಾರತ, ಪುರಾಣಗಳು-ಮುಂತಾದ ಗ್ರಂಥಗಳು ನಮ್ಮ ಎದುರಿಗೇ ಇರುತ್ತಿದ್ದರೂ ಅವುಗಳ ಉಪದೇಶದಲ್ಲಿ ನಮಗೆ ಶ್ರದ್ಧೆಯುಂಟಾಗದಂತಾಗಿಬಿಟ್ಟಿದೆ. ಆದರೂ ಧರ್ಮ, ಅಧರ್ಮ, ಶಾಸ್ತ್ರ, ಪಾಪ ಪುಣ್ಯ– ಮುಂತಾದ ಶಬ್ದಗಳನ್ನು ಬಿಡುವದಕ್ಕೆ ನಾವು ಸಿದ್ಧರಿಲ್ಲ. ಹಳೆಯ ಆಚಾರಗಳೆಂಬ ಕಾರಣಗಳಿಂದ ಕೆಲವು ಕರ್ಮಾಚರಣೆಗಳನ್ನು ಇಟ್ಟುಕೊಂಡಿರುತ್ತೇವೆ ; ಆದರೆ ಅವೆಲ್ಲ ನಮಗೆ ಎಂದೋ ಒಂದುದಿನ ಕನಸಿನಲ್ಲಿ ಕಂಡ ದೃಶ್ಯಗಳಂತೆ ಮಸುಳಿಸಿದ ನೆನಪಿನಲ್ಲಿ ಸ್ವಲ್ಪಮಟ್ಟಿಗೆ ಉಳಿದುಕೊಂಡಿರುತ್ತವೆ. ಒಬ್ಬ ಬ್ರಾಹ್ಮಣನು ತನ್ನ ಮಗನಿಗೆ ಎಂಟನೆಯ ವರ್ಷದಲ್ಲಿ ಉಪನಯನವನ್ನು ಮಾಡುವದಕ್ಕೆ ಹೊರಟು ಹುಡುಗನಿಗೆ ಗಾಯತ್ರೀಮಂತ್ರದ ಉಪದೇಶವನ್ನು ಮಾಡುವ ಸಂದರ್ಭವು ಬಂದಾಗ ಪುರೋಹಿತರು ತೊಡೆಯಮೇಲೆ ಮಗುವನ್ನು ಕುಳ್ಳಿರಿಸಿಕೊಂಡಿದ್ದ ತಂದೆಯ ಕಿವಿಯಲ್ಲಿ ಆ ಮಂತ್ರವನ್ನು ಹೇಳಿ ಮಗನಿಗೆ ಉಪದೇಶಿಸುವಂತೆ ಹೇಳಿದರು. ಆಗ ಆ ಬ್ರಾಹ್ಮಣನಿಗೆ ತಟ್ಟನೆ ಆ ಮಂತ್ರದ ನೆನಪು ಎದ್ದುಕೊಂಡಿತು. ಅವನು

'ಆಚಾರ್ಯರೆ, ಈ ಮಂತ್ರವನ್ನು ನಾನು ಎಲ್ಲಿಯೋ ಕೇಳಿದಂತೆ ಇದೆಯಲ್ಲ ?' ಎಂದನು. ಅದಕ್ಕೆ ಆ ಪುರೋಹಿತರು ವಾದ್ಯಾದಿಗಳ ಸದ್ದನ್ನು ನಿಲ್ಲಿಸಿ 'ಆಹಾ! ನಮ್ಮ ರಾಯರ ಮೇಧಾಶಕ್ತಿಯು ಎಷ್ಟು ಪ್ರಬಲವಾಗಿದೆ ! ತಮ್ಮ ಎಂಟನೆಯ ವರ್ಷದಲ್ಲಿ ತಮ್ಮ ತಂದೆ ಆಷ್ಟೊಂದು ಗದ್ದಲದ ನಡುವೆ ಉಪದೇಶಿಸಿದ್ದ ಮಂತ್ರ ವನ್ನು ಇನ್ನೂ ನೆನಪಿನಲ್ಲಿಟ್ಟುಕೊಂಡಿರುವರಲ್ಲ !' ಎಂದು ಅವನನ್ನು ಕೊಂಡಾಡಿದ ನಂತೆ ! ಹೀಗಾಗಿದೆ ನಮ್ಮವರ ಪಾಡು ! ನಮ್ಮ ಹಿರಿಯರು ಆಡುತ್ತಿದ್ದ ಧರ್ಮಾ ಧರ್ಮಾದಿತತ್ತ್ವಗಳ ಸಂಭಾಷಣೆಯ ಸಂಸ್ಕಾರವು ಹೇಗೋ ನಮ್ಮಲ್ಲಿ ಉಳಿದು ಕೊಂಡಿದೆ ; ಆದರೆ ಈಗಿನ ಭೌತಿಕವಿಜ್ಞಾನದ ಕೋಲಾಹಲವು ನಮ್ಮನ್ನು ಶ್ರದ್ಧಾ ಹೀನರನ್ನಾಗಿಯೂ ಮಾಡುತ್ತಿದೆ !

ಈ ದಿವಸ ನಾವು ಚಾತುರ್ವರ್ಣ್ಯವಿಚಾರವನ್ನು ಮಾಡುವದಕ್ಕೆ ಹೊರಟಿರು ತ್ತೇವೆ. ಈಗ 'ಚಾತುರ್ವರ್ಣ್ಯ' ವೆಂಬ ಶಬ್ದದ ಉಚ್ಚಾರಣೆಯೇ ಒಂದು ದೊಡ್ಡ ಅಪರಾಧವೆನ್ನುವಷ್ಟುಮಟ್ಟಿಗೆ ಜನರ ಮನಃಸ್ಥಿತಿಯು ಮಾರ್ಪಟ್ಟಿರುತ್ತದೆ. ನಾನು ಒಮ್ಮೆ ಕೆಲವು ಆಧ್ಯಾತ್ಮಿಕಪಾರಿಭಾಷಿಕಶಬ್ದಗಳ ವಿವರಣೆಯನ್ನು ಆಕಾರಾದಿ ಯಾಗಿ ಕೊಟ್ಟು ವಿಶದಪಡಿಸುವ ಲೇಖನವೊಂದನ್ನು ಬರೆಯುತ್ತಿದ್ದೆನು. **'ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ'** (ಗೀ. ೪–೧೧) ಎಂಬ ಶ್ಲೋಕದಲ್ಲಿ 'ಮನುಷ್ಯ' ಎಂಬ ಶಬ್ದಕ್ಕೆ ಭಾಷ್ಯದಲ್ಲಿ **'ಯತ್ಫಲಾರ್ಥಿತಯಾ ಯಸ್ಮಿನ್ ಕರ್ಮಣಿ ಅಧಿಕೃತಾ ಯೇ ಪ್ರಯತನ್ತೇ ತೇ ಮನುಷ್ಯಾ ಅತ್ರ ಉಚ್ಯನ್ತೇ'** ಎಂದು ಬರೆದಿತ್ತು. ಯಾವಯಾವ ಕರ್ಮಾಧಿಕಾರಿಗಳು ಯಾವಯಾವ ಫಲದ ಪ್ರಾಪ್ತಿಗಾಗಿ ಯಾವಯಾವ ಕರ್ಮದಲ್ಲಿ ತೊಡಗಿರುತ್ತಾರೋ ಅಂಥ ಅಧಿಕಾರಿಗಳನ್ನು ಇಲ್ಲಿ 'ಮನುಷ್ಯರು' ಎಂದಿದೆ—ಎಂದು ಆ ವಾಕ್ಯದ ಅರ್ಥ. ಈ ವಿವರಣೆಯನ್ನು ನೋಡಿದವರೊಬ್ಬರು 'ಈ ಲೇಖನವು ವರ್ಣಾಶ್ರಮಾಭಿಮಾನ ದಿಂದ ತುಂಬಿತುಳುಕುತ್ತಿದೆ !' ಎಂದು ಆ ಲೇಖನವನ್ನು ಬರೆದಿದ್ದ ಪತ್ರಿಕೆಯನ್ನು ಸಿಟ್ಟಿನಿಂದ ಆತ್ತ ಒಗೆದುಬಿಟ್ಟರಂತೆ ! ನನ್ನ ಪರಿಚಿತರು ಕೆಲವರು ಈ ವಿಷಯ ವನ್ನು ನನಗೆ ತಿಳಿಸಿದ್ದರು. ಅದು ಹಳೆಯಕಾಲದ ಮಾತಾಯಿತು. ಆದರೆ **ಪೂರಿಯ ಸ್ವಾಮಿಗಳು** ಶಾಸ್ತ್ರದಲ್ಲಿ ಹೇಳಿರುವ ಅಸ್ಪೃಶ್ಯತೆಯನ್ನು ಪರಾ ಮರ್ಶೆಮಾಡಿದ ತಪ್ಪಿಗಾಗಿ ನಮ್ಮ ದೇಶದ ಜನನಾಯಕರು ಕೋಲಾಹಲವನ್ನು ಎಬ್ಬಿಸಿ ಆ ಸ್ವಾಮಿಗಳನ್ನು ಮನಸ್ಸುಬಂದಂತೆ ದೂಷಿಸಿದ ಸುದ್ದಿ ನಿಮಗೆಲ್ಲ ಈಗ ಗೊತ್ತಾಗಿರುತ್ತದೆ. ಶಬ್ದಮಾತ್ರದಿಂದ ಚಿತ್ತದಲ್ಲಿ ಕ್ಷುಬ್ಧರಾಗುವದು ಈಗಿನವರಿಗೆ ಒಂದು ಹವ್ಯಾಸವಾಗಿಬಿಟ್ಟಿರುತ್ತದೆ !

ಇಲ್ಲಿ ಅಸ್ಪೃಶ್ಯತೆಯ ವಿಷಯವಾಗಿ ಸ್ವಲ್ಪ ಮಾತನಾಡುವದು ಪ್ರಸಕ್ತವಾಗಿರು ತ್ತದೆ. ಅಸ್ಪೃಶ್ಯವೆಂದರೇನು ? ಇಂಥಿಂಥ ವಸ್ತುಗಳನ್ನು ಇಂಥಿಂಥ ಸಂದರ್ಭದಲ್ಲಿ

ಮುಟ್ಟಬಾರದು ಎಂಬ ಭಾವನೆಯು ಸನಾತನಧರ್ಮದ ಸಂಪ್ರದಾಯದವರಲ್ಲಿತ್ತು; ಈಗಲೂ ಸ್ವಲ್ಪಮಟ್ಟಿಗೆ ಇದೆ. ಊಟಮಾಡಿದವನು ಎಂಜಲುಕೈಯಿಂದ ಬೇರೆಯ ವಸ್ತುಗಳನ್ನು ಮುಟ್ಟಬಾರದು; ಕೈಗಳನ್ನು ತೊಳೆದುಕೊಂಡಮೇಲೆ ಮುಟ್ಟಬಹುದು. ಈ ವ್ಯಕ್ತಿಯಿಂದ ಎಂಜಲುಕೈಯು ತತ್ಕಾಲಕ್ಕೆ ಅಸ್ಪೃಶ್ಯ. ಹೀಗೆಯೇ ಮುಸುರೆಯ ವಿಚಾರ: ಅದೂ ಕೈ ಸ್ವಚ್ಛವಾಗುವವರೆಗೆ ಕೈಯ ಅಸ್ಪೃಶ್ಯತೆಗೆ ಕಾರಣವಾಗುವದು. ಸ್ನಾನವನ್ನು ಮಾಡಿ ಆಹ್ನಿಕಕರ್ಮಗಳನ್ನು ಮಾಡುತ್ತಿರುವಾಗ ತನ್ನದೇ ಆಗಿರುವ ಒಗೆಯದ ಮೈಲಿಗೆಯ ಬಟ್ಟೆಗಳನ್ನು ಮುಟ್ಟಬಾರದು: ಆಗ್ಗೆ ಅವನಿಗೆ ಮೈಲಿಗೆಯ ಬಟ್ಟೆಗಳು ಅಸ್ಪೃಶ್ಯವೆನಿಸುತ್ತವೆ. ರಜಸ್ವಲೆಯರಾದ ಸ್ತ್ರೀಯರು ಯಾರೇ ಆಗಲಿ, ಮೈಲಿಗೆಯ ಅವಧಿ ಮುಗಿದು ಸ್ನಾನಮಾಡುವವರೆಗೂ ಅಸ್ಪೃಶ್ಯರು: ಅವರನ್ನು ಅವರ ಮಕ್ಕಳು, ಅಣ್ಣತಮ್ಮಂದಿರು, ಗಂಡನುಕೂಡ-ಯಾರೂ ಮುಟ್ಟಬಾರದು. ಇವರಲ್ಲಿ ಅಸ್ಪೃಶ್ಯರಾದ ವಸ್ತುಗಳು, ಪ್ರಾಣಿಗಳು, ಅಥವಾ ಮನುಷ್ಯರು ಯಾರೊಬ್ಬರಲ್ಲಿಯೂ 'ಅವರನ್ನು ಮುಟ್ಟಬಾರದು' ಎನ್ನುವವರಿಗೆ ದ್ವೇಷಭಾವನೆಯೇನೂ ಇರುವದಿಲ್ಲ. ಇವರಂತೆಯೇ ಚಾತುರ್ವರ್ಣ್ಯಕ್ಕೆ ಸೇರಿದವರು ಯಾರೊಬ್ಬರೂ ಬಹಳ ಕಾಲದಿಂದ ಅಂತ್ಯಜರೆಂದು ಕರೆದುಕೊಳ್ಳುವ ಜನರನ್ನು ಮುಟ್ಟುವದಿಲ್ಲ; ಅವರೂ ತಮ್ಮನ್ನು ಇವರು ಮುಟ್ಟಕೊಡುವದಿಲ್ಲ—ಎಂಬುವದೊಂದು ಹಳೆಯ ಸಂಪ್ರದಾಯವು ನಡೆದುಕೊಂಡೂಬಂದಿದೆ. ಪ್ರಾಣಗಳ ಸಂವಾದವನ್ನು ವರ್ಣಿಸುವ ಒಂದು ವೃತ್ತಾಂತಭಾಗವಲ್ಲಿ ಉಪನಿಷತ್ತುಗಳೊಳಗೆಲ್ಲ ಅತ್ಯಂತಪುರಾತನವೆಂದು ಐತಿಹಾಸಿಕರೂ ಒಪ್ಪುತ್ತಿರುವ ಬೃಹದಾರಣ್ಯಕದಲ್ಲಿ ಪ್ರಾಣನು ಇತರ ಪ್ರಾಣಗಳ ಪಾಪವನ್ನು ದಿಗಂತಗಳಲ್ಲಿಟ್ಟನೆಂದೂ ಆದ್ದರಿಂದ ಆ ಜನರ ಪಾಪವು ನಮಗೆ ಅಂಟಬಾರದೆಂಬ ಶಂಕೆಯಿರುವವರು ಅವರ ಹಟ್ಟಿಗೆ ಹೋಗಬಾರದೆಂದೂ "ತಸ್ಮಾನ್ನ ಜನಮಿಯಾನ್ನಾಂತಮಿಯಾನ್ನೇತ್ಪಾಪ್ಮಾನಂ ಮೃತ್ಯುಮನ್ವವಾಯಾನೀತಿ" ಎಂಬ ವಾಕ್ಯದಿಂದ ಹೇಳಿರುತ್ತದೆ. ಇದರಿಂದ ವರ್ಣವಿಭಾಗವೂ ಸ್ಪೃಶ್ಯಾಸ್ಪೃಶ್ಯ ವಿಭಾಗವೂ ನಮ್ಮ ಸಮಾಜದಲ್ಲಿ ಎಷ್ಟುಪುರಾತನ ಕಾಲದಿಂದ ನಡೆದುಕೊಂಡುಬಂದಿದೆ ಎಂಬುದು ಸ್ಪಷ್ಟವಾಗುತ್ತಿದೆ. ಈಗ ಈ ವಿಷಯವನ್ನು ಕುರಿತು ಮಾತನಾಡುವವರ ಬಗ್ಗೆ ಯಾವದಾವರೂ ದುರುದ್ದೇಶವನ್ನುಕಲ್ಪಿಸದೆ ಆಗುವಂತಿಲ್ಲವಾಗಿರುತ್ತದೆ. ಬ್ರಾಹ್ಮಣರು ವರ್ಣವಿಭಾಗವನ್ನು ಕುರಿತು ಮಾತಾಡಿದರೆ 'ಇತರ ಜನಗಳನ್ನು ತುಳಿದಿರುವದಕ್ಕೆ ಬ್ರಾಹ್ಮಣರು ಮಾಡಿರುವ ತಂತ್ರವಿದು'–ಎನ್ನುವಂತೆ ಆಗಿರುತ್ತದೆ; ಕ್ರಿಸ್ತಿಯನ್ನರು ಮಾತನಾಡಿದರೆ 'ಇವರಿಗೆ ಮತಾಂತರಗೊಳಿಸುವ ಹವ್ಯಾಸವು ಹೀಗೆ ಮಾಡಿಸುತ್ತದೆ' ಎನ್ನುತ್ತಾರೆ; ಯಾರಾದರೂ ಜನನಾಯಕರು ಏನಾದರೂ ಹೇಳಿದರೆ ರಾಜಕಾರಣಿಗಳು ತಮ್ಮ ಪಕ್ಷಕ್ಕೆ ಹೆಚ್ಚಿನ ಸ್ಥಾನವನ್ನು ಗಳಿಸುವ ಉಪಾಯವಿದು ಎನ್ನುತ್ತಾರೆ!

ವರ್ಣಗಳ ವಿಭಾಗವು ಬಹುಪುರಾತನಕಾಲದಿಂದ ನಮ್ಮ ಸಮಾಜದಲ್ಲಿದ್ದುಕೊಂಡಿದ್ದರೂ ಬೇರೆಬೇರೆಯ ಜಾತಿಯವರಿಗೆ ಪರಸ್ಪರದ್ವೇಷಮತ್ಸರಭಾವವೇನೂ ಇರಲಿಲ್ಲ. ನಮ್ಮ ಹಳ್ಳಿಯಲ್ಲಿ ಅಯ್ಯನವರ (ಜಂಗಮರ) ಕೂಲಿಮಠದಲ್ಲಿ ಓದುತ್ತಿದ್ದ ಬ್ರಾಹ್ಮಣರ ಹುಡುಗರು ಇತರರೊಡನೆ ಸೌಭ್ರಾತೃತ್ವದಿಂದ ಓದುತ್ತಿದ್ದರು; ಅವರು ಮನೆಯಲ್ಲಿ ಮಡಿಮೈಲಿಗೆ ಮುಂತಾದ ಕಟ್ಟಳೆಗಳನ್ನು ಪಾಲಿಸಿಕೊಂಡು ಬರುವುದನ್ನು ಕಂಡು ಬ್ರಾಹ್ಮಣೇತರರೇನೂ ದುರ್ಭಾವನೆಯನ್ನು ತಾಳಿಕೊಳ್ಳುತ್ತಿರಲಿಲ್ಲ. ಹಳೆಯ ಆಚಾರಗಳನ್ನು ನಡೆಯಿಸಿಕೊಂಡುಬರುತ್ತಿದ್ದ ಹೋಟಲುಗಳನ್ನು ನಾನು ಇದೇ ಬೆಂಗಳೂರಿನಲ್ಲಿ ನೋಡಿರುತ್ತೇನೆ. ಆಚಾರಗಳನ್ನು ಗೌರವಿಸುವುದಲ್ಲಿ ಇತರರ ವಿಷಯಕ್ಕೂ ಆಗ ಗೌರವವಿತ್ತೇ ದೊರತು ಯಾರೊಬ್ಬರೂ 'ಸಮಾಜದಲ್ಲಿ ಒಡಕನ್ನುಂಟುಮಾಡುವ ಭಾವನೆಯಿದು' ಎನ್ನುತ್ತಿರಲಿಲ್ಲ.

ವರ್ಣವಿಭಾಗವನ್ನು ಕುರಿತ ಶ್ರುತಿವಚನವು ಬೃಹದಾರಣ್ಯಕದಲ್ಲಿರುತ್ತದೆ. ಅಲ್ಲಿರುವ ಒಂದು ಮಂತ್ರವು ಹೀಗಿದೆ :—

**ಬ್ರಹ್ಮ ವಾ ಇದಮಗ್ರ ಆಸೀದೇಕಮೇವ ತದೇಕಂ ಸನ್ನ ವ್ಯಭವತ್ । ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀಂದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ । ತಸ್ಮಾತ್ ಕ್ಷತ್ರಾತ್ಪರಂ ನಾಸ್ತಿ ತಸ್ಮಾತ್ ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ ರಾಜಸೂಯೇ.... ॥**

**ಸ ನೈವ ವ್ಯಭವತ್ ಸ ವಿಶಮಸೃಜತ ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯಂತೇ ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ ॥ ಸ ನೈವ ವ್ಯಭವತ್ ಸ ಶೌದ್ರಂ ವರ್ಣಮಸೃಜತ ಪೂಷಣಮಿಯಂ ವೈ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ॥ ಸ ನೈವ ವ್ಯಭವತ್ ತಚ್ಛ್ರೇಯೋ ರೂಪಮತ್ಯಸೃಜತ ಧರ್ಮಂ ತದೇತತ್ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ ಪರಂನಾಸ್ತ್ಯಥೋ ಅಬಲೀಯಾನ್ ಬಲೀಯಾಂಸಮಾಶಂಸತೇ ಧರ್ಮೇಣ ಯಥಾ ರಾಜ್ಞೈವಂ ಯೋ ವೈ ಸ ಧರ್ಮಃ ಸತ್ಯಂ ವೈ ತತ್ತಸ್ಮಾತ್ ಸತ್ಯಂ ವದಂತಮಾಹುರ್ಧರ್ಮಂ ವದತೀತಿ ಧರ್ಮಂ ವಾ ವದಂತಂ ಸತ್ಯಂ ವದತೀತ್ಯೇತದ್ಧ್ಯೇವೈತದುಭಯಂ ಭವತಿ ॥**

ಬೃ. ೧–೪–೧೧ ರಿಂದ ೧೪

ಇವು ವರ್ಣಾಭಿಮಾನಿಗಳಾದ ದೇವತೆಗಳ ಸೃಷ್ಟಿಯನ್ನು ಹೇಳುವ ಕಂಡಿಕೆಗಳು. ಇವರರ್ಥದ ಸಾರವೇನೆಂದರೆ: ಬ್ರಾಹ್ಮಣ್ಯಾಭಿಮಾನಿಯಾದ ಅಗ್ನಿದೇವತೆಯೊಂದೇ ಮೊದಲು ಇದ್ದಿತು. ಅದೊಂದೇ ಕರ್ಮಕ್ಕೆ ಸಾಕಾಗಲಿಲ್ಲ. ಆದ್ದರಿಂದ ಅದು

ಕ್ಷತ್ರವೆಂಬ ಶ್ರೇಯೋರೂಪವನ್ನು ಸೃಷ್ಟಿಸಿತು. ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು, ಈಶಾನ— ಎಂಬವು ಕ್ಷತ್ರಾಭಿಮಾನಿದೇವತೆಗಳು. ಕ್ಷತ್ರಕ್ಕಿಂತ ಹೆಚ್ಚಿನದಿಲ್ಲ; ಆದ್ದರಿಂದ ರಾಜಸೂಯದಲ್ಲಿ ಬ್ರಾಹ್ಮಣನು ಕೂಡ ರಾಜನಿಗೆ ಗೌರವವನ್ನು ಕೊಡುತ್ತಾನೆ. ಆದರೆ ಇಷ್ಟರಿಂದಲೂ ಕರ್ಮವು ಪರಿಪೂರ್ಣವಾಗುವದಿಲ್ಲವಾದ್ದರಿಂದ ಬ್ರಹ್ಮವು ವೈಶ್ಯನನ್ನು ಸೃಷ್ಟಿಸಲಾಯಿತು. ವೈಶ್ಯದೇವತೆಗಳು ಗಣಗಳಾಗಿ ಗುಂಪುಗುಂಪಾಗಿರುತ್ತಾರೆ. ವಸುಗಳು, ರುದ್ರರು, ಆದಿತ್ಯರು, ವಿಶ್ವೇದೇವತೆಗಳು, ಮರುತ್ತರು— ಇವರು ವೈಶ್ಯವರ್ಣಾಭಿಮಾನಿಗಳು. ಇಷ್ಟರಿಂದಲೂ ಬ್ರಹ್ಮವು ಪರಿಪೂರ್ಣವಾಗಲಿಲ್ಲ. ಆದ್ದರಿಂದ ಅದು ಶೂದ್ರವರ್ಣವನ್ನು ಸೃಷ್ಟಿಸಿತು. ಭೂಮಿಯೇ ಶೂದ್ರಾಭಿಮಾನಿದೇವತೆಯಾದ ಪೂಷಾ. ಭೂಮಿಯು ಎಲ್ಲರನ್ನೂ ಪೋಷಿಸುತ್ತದೆಯಾದ್ದರಿಂದ ಅದಕ್ಕೆ ಪೂಷನೇ ಅಧಿದೇವತೆ. ಇಷ್ಟು ಬ್ರಹ್ಮವು ಪರಿಪೂರ್ಣವಾಗಲಿಲ್ಲ; ಆದ್ದರಿಂದ ಧರ್ಮವನ್ನು ಸೃಷ್ಟಿಸಿತು. ಧರ್ಮಕ್ಕಿಂತ ಬಲಿಷ್ಠನು ಯಾರೂ ಇಲ್ಲ; ಬಲವಂತನನ್ನು ಕೂಡ ಧರ್ಮದಿಂದ ಅಬಲಿಷ್ಠನಾದವನು ಗೆಲ್ಲುವದಕ್ಕೆ ಆಶಿಸುತ್ತಾನೆ. ಸತ್ಯವೂ ಧರ್ಮವೂ ಒಂದೇ ಆದ್ದರಿಂದ ಸತ್ಯಧರ್ಮಗಳಿಂದ ಬ್ರಹ್ಮವು ನಾಲ್ಕು ವರ್ಣಗಳನ್ನೂ ಹಿಡಿತದಲ್ಲಿಟ್ಟುಕೊಂಡು ವ್ಯವಹಾರಗಳನ್ನು ಸಾಗಿಸುತ್ತಿದೆ.

ಪುರಾಣಗಳಲ್ಲಿ ಚಾತುರ್ವರ್ಣ್ಯದ ವಿಷಯವಾಗಿ ಹೇಳಿಯೇ ಇರುತ್ತದೆ ಯಾದಾಗ್ಯೂ ಅತಿಪ್ರಾಚೀನವಾದ ವೇದಕಾಲದಲ್ಲಿಯೇ ವರ್ಣವಿಭಾಗವು ಏರ್ಪಟ್ಟಿತ್ತೆಂದೂ ಇದಕ್ಕೆ ಧರ್ಮವೇ ಅಡಿಗಟ್ಟೆಂದೂ ತಿಳಿಯಿಸುವದಕ್ಕಾಗಿ ಉಪನಿಷದ್ವಾಕ್ಯವನ್ನು ಇಲ್ಲಿ ಉದಾಹರಿಸಿದ್ದೇನೆ. ಈ ಸಮಾಜರಚನೆಯ ದೃಷ್ಟಿಯಲ್ಲಿ ಧರ್ಮಕ್ಕೇ ಹೆಚ್ಚಿನ ಗೌರವವು. ಧರ್ಮಕ್ಕೇ ಹೆಚ್ಚಿನ ಸ್ಥಾನವನ್ನು ಕೊಟ್ಟು ಅದಕ್ಕಾಗಿಯೇ ಜೀವನವನ್ನು ಮೀಸಲಾಗಿಡುವ ಬ್ರಾಹ್ಮಣನಿಗೆ ಎಲ್ಲರಿಗಿಂತಲೂ ಮೇಲಿನ ಸ್ಥಾನ. ಧನ, ವಿದ್ಯೆ, ಕೀರ್ತಿ' ಉದ್ಯೋಗ— ಮುಂತಾದವುಗಳಿಗೆ ಎರಡನೆಯ ಸ್ಥಾನ. ಬ್ರಾಹ್ಮಣ್ಯವನ್ನು ಕಾಪಾಡುವ ಕ್ಷತ್ರಿಯನೇ ಮಿಕ್ಕವರಿಗಿಂತ ಮೇಲಿನ ಸ್ಥಾನಕ್ಕೆ ಅರ್ಹನು. ಧರ್ಮಕ್ಕಾಗಿ ದುಡಿಯುವವರಿಗೆ ಆರ್ಥಿಕಸೌಕರ್ಯಗಳನ್ನು ಒದಗಿಸುವವನು ವೈಶ್ಯನು. ಧರ್ಮಕ್ಕಾಗಿಯೇ ತನ್ನ ಶರೀರದ ಕಷ್ಟವನ್ನು ಮಾಡುವವನು ಶೂದ್ರನು. ಹೀಗೆ ಶರೀರವನ್ನು ಧರ್ಮಕ್ಕಾಗಿ ದುಡಿಯಿಸುತ್ತಾ, ಶರೀರಕ್ಕಿಂತಲೂ ಬೇರೆಯಾಗಿರುವ ಆತ್ಮನೊಬ್ಬನು ಇದ್ದಾನೆ— ಎಂಬ ತಿಳಿವಳಿಕೆಗೆ ಜನರ ಅಂತಃಕರಣವನ್ನು ಹೊಂದಿಸುವ ಏರ್ಪಾಡೇ ಚಾತುರ್ವರ್ಣ್ಯ.

ಅಸ್ಪೃಶ್ಯರನ್ನು ಮೇಲಕ್ಕೆ ತರಬೇಕೆಂದು ನಮಗೆ ನಿಜವಾದ ಅಭಿಪ್ರಾಯವಿದ್ದಿದ್ದರೆ ಅವರನ್ನು ಹರಿಜನರೆಂದು ಕರೆದು ಅವರೊಡನೆ ಕಲೆತು ಊಟಉಪಚಾರಗಳನ್ನೂ ವಿಹಾರಾದಿಗಳನ್ನೂ ಮಾಡಿದಮಾತ್ರದಿಂದ ಅವರನ್ನು ಮೇಲಕ್ಕೆತ್ತುವದು

ಆಗಲಾರದೆಂದು ನಮಗೆ ತಿಳಿಯುತ್ತಿತ್ತು. ನಾವೂ ಅವರೂ ಸ್ಪೃಶ್ಯರಾದಮಾತ್ರದಿಂದ ಅವರು ಹೇಗೆ ಮೇಲಕ್ಕೆ ಬಂದಾರು? ಮೇಲಿನ ವರ್ಣದವರು ಧರ್ಮಾಚರಣೆಯನ್ನು ಮಾಡುತ್ತಾ, ತಮ್ಮ ಶುದ್ಧಾಚಾರವನ್ನು ಅವರಿಗೂ ಮೇಲುಪಙ್ಕ್ತಿಯನ್ನಾಗಿಟ್ಟಿದ್ದರೆ ಅವರೂ ಅವಶ್ಯವಾಗಿ ಹೆಚ್ಚುಹೆಚ್ಚು ಶೌಚಾಚಾರಗಳನ್ನು ಅವಲಂಬಿಸುವರು. ನಾವು ಶ್ರೀಮಂತರಾಗಿರುವವರಿಗೆ ಹೆಚ್ಚಿನ ಗೌರವವನ್ನು ಕೊಡುವದಕ್ಕೆ ಬದಲು ಬಡತನವನ್ನು ಇಚ್ಛಾಪೂರ್ವಕವಾಗಿ ಮೆಚ್ಚಿ ಧರ್ಮವನ್ನು ಅವಲಂಬಿಸುತ್ತಾ ಆಚಾರತತ್ಪರರಾಗಿದ್ದ ಹಿಂದಿನ ಋಷಿಗಳನ್ನು ನೆನಪಿನಲ್ಲಿಡುವದು ಸಪ್ರಯೋಜನವಾಗಿರುತ್ತದೆ. ಮಹಾಭಾರತಾದಿಗಳಲ್ಲಿ ಹೇಳಿರುವಂತೆ ಋಷಿಗಳು ಅರಣ್ಯದಲ್ಲಿ ಸಿಕ್ಕಿದ ಗೆಡ್ಡೆಗೆಣಸುಗಳಿಂದ ತಮ್ಮ ಹಸಿವನ್ನು ಅಡಗಿಸಿಕೊಂಡು ಮರದತೊಗಟೆ, ಕೃಷ್ಣಾಜಿನ—ಮುಂತಾದವುಗಳನ್ನು ಹೊದೆದುಕೊಂಡು ಶೀತವಾತನಿವಾರಣೆಯನ್ನು ಮಾಡಿಕೊಳ್ಳುತ್ತಾ ಇದ್ದರೂ ಅವರು ತಪಃಪ್ರಭಾವದಿಂದ ಎಲ್ಲರಿಗೂ ಪೂಜ್ಯರಾಗಿದ್ದರು. ಶಾಸ್ತ್ರವಿಚಾರ, ಲೌಕಿಕಜೀವನದ ಉಚ್ಚಧ್ಯೇಯಗಳನ್ನೂ ಇಟ್ಟುಕೊಂಡಿರುತ್ತಿದ್ದರು. ವ್ಯಾಸರಂಥ ಮಹರ್ಷಿಗಳು ಅರಮನೆಗೆ ಬಂದರೆ ಅವರಿಗೆ ಸುಸ್ವಾಗತವನ್ನು ಕೊಟ್ಟು ಯೋಗ್ಯಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಾದ್ಯುಪಚಾರಗಳಿಂದ ರಾಜರು ಸತ್ಕರಿಸುತ್ತಿದ್ದರು. ಋಷಿಗಳೂ ರಾಜನು ಲೌಕಿಕವ್ಯವಹಾರದಲ್ಲಿ ಹೇಗಿರಬೇಕೆಂಬುದನ್ನು ತಿಳಿಯಿಸುವ ಕುಶಲಪ್ರಶ್ನೆಯನ್ನು ಮಾಡುತ್ತಿದ್ದರು; ಮಹಾಭಾರತದಲ್ಲಿರುವ ವ್ಯಾಸಪ್ರಶ್ನೆಗಳ ಕಚ್ಚಿದಧ್ಯಾಯವನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ.

ಹೀಗೆ ಚಾತುರ್ವರ್ಣ್ಯವು ಧರ್ಮದ ಆಧಾರದಮೇಲೆ ಸೃಷ್ಟವಾಗಿರುವದರಿಂದಲೂ ಧರ್ಮವನ್ನು ಕಾಪಾಡಿದರೆ ಜಗತ್ತನ್ನು ಕಾಪಾಡಿದಂತಾಗುತ್ತದೆ ಎಂಬ ಕಾರಣದಿಂದಲೂ ಭಗವಂತನೇ ಚಾತುರ್ವರ್ಣ್ಯವನ್ನು ಸೃಷ್ಟಿಸಿರುತ್ತಾನೆಂದು ನಮ್ಮ ಇತಿಹಾಸಗಳು ಸಾರುತ್ತಿವೆ.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥** ಗೀ. ೪–೧೩

ಬ್ರಾಹ್ಮಣಾದಿವರ್ಣಚತುಷ್ಟಯವನ್ನು ಪರಮೇಶ್ವರನಾದ ನಾನೇ ಸೃಷ್ಟಿಮಾಡಿರುತ್ತೇನೆ. ಇವು ಗುಣಕರ್ಮವಿಭಾಗಕ್ಕೆ ತಕ್ಕಂತೆ ಸೃಷ್ಟವಾಗಿವೆ. ಸತ್ತ್ವಪ್ರಧಾನನಾದ ಬ್ರಾಹ್ಮಣನಿಗೆ ಇದು ಕರ್ಮ, ಸತ್ತ್ವೋಪಸರ್ಜನವಾದ ರಜಃಪ್ರಧಾನಕ್ಷತ್ರಿಯನಿಗೆ ಇದು ಕರ್ಮ, ತಮೋಪಸರ್ಜನರಜಃಪ್ರಧಾನನಾದ ವೈಶ್ಯನಿಗೆ ಇದು ಕರ್ಮ,ರಜಉಪಸರ್ಜನತಮಃಪ್ರಧಾನನಾದ ಶೂದ್ರನಿಗೆ ಇದು ಕರ್ಮ—ಎಂದು ವಿಂಗಡಿಸಿ ಈ ಸೃಷ್ಟಿಯನ್ನು ನಾನು ಮಾಡಿರುತ್ತೇನೆ. ಮಾಯಾಸಂವ್ಯವಹಾರದಿಂದ ಈ ಚಾತುರ್ವರ್ಣ್ಯವನ್ನು ನಾನೇ ರಚಿಸಿರುವೆನಾದರೂ ನಾನು

ಪರಮಾರ್ಥದೃಷ್ಟಿಯಿಂದ ಅಕರ್ತೃವಾಗಿಯೇ ಇರುತ್ತೇನೆಂದು ತಿಳಿ ಎಂದು ಶ್ರೀಕೃಷ್ಣಭಗವಂತನು ಅಪ್ಪಣೆಕೊಡಿಸುತ್ತಾನೆ. ಧರ್ಮದ ಆಧಾರದಮೇಲೆ ಅವರವರ ಗುಣಗಳಿಗೆ ತಕ್ಕಂತೆ ಜೀವರು ಬ್ರಾಹ್ಮಣಾದಿಜಾತಿಗಳಲ್ಲಿ ಜನಿಸುತ್ತಾರೆ. ಜಾತಿಗೆ ತಕ್ಕಂತೆ ಬ್ರಾಹ್ಮಣಾದಿವರ್ಣಗಳು ನಿಶ್ಚಿತವಾಗಿದ್ದರೂ ಬ್ರಾಹ್ಮಣರಲ್ಲಿಯೂ ಅವರವರ ಗುಣಕ್ಕೆ ಅನುಸಾರವಾಗಿ ಒಂದೊಂದು ಜಾತಿಯಲ್ಲಿಯೂ ಬ್ರಾಹ್ಮಣಾದಿಚಾತುರ್ವರ್ಣ್ಯವು ಈಗಲೂ ಕಂಡುಬರುತ್ತದೆ. ಬೇರೆ ದೇಶಗಳಲ್ಲಿ ವರ್ಗಗಳು (Classes) ಇರುತ್ತವೆ; ಆದರೆ ನಮ್ಮ ದೇಶದಲ್ಲಿ ಈಗಲೂ ಜಾತಿಗಳಿವೆ (Castes)–ಧರ್ಮಕ್ಕೆ ಬೆಲೆಯನ್ನು ಕೊಟ್ಟಿದ್ದರಿಂದ ಅವು ಮೇಲುಕೀಳಿನ ವರ್ಣದವರಾಗಿಯೇ ಉಳಿದುಕೊಂಡಿರುತ್ತವೆ.

ಈ ವರ್ಣವಿಭಾಗವು ಧರ್ಮವನ್ನು ಮುಖ್ಯವಾಗಿ ಮಾಡಿಕೊಂಡು ಎಲ್ಲರನ್ನೂ ಒಟ್ಟುಗೂಡಿಸುವದಕ್ಕೇ ಹೊರತು ಭೇದಬುದ್ಧಿಯನ್ನುಂಟುಮಾಡಿ ಸಮಾಜವನ್ನು ಒಡೆಯುವದಕ್ಕೆ ಬಂದಿರುವದಿಲ್ಲ. ಭಗವದ್ಗೀತೆಯಲ್ಲಿ ತೋರಿಸುವ ಹೃದಯಸ್ವಾತಂತ್ರ್ಯ ನಾಗರಿಕದೇಶದವರೆಲ್ಲರ ಮನಸ್ಸನ್ನು ಸೆಳೆದುಕೊಂಡುಬಿಟ್ಟಿದೆ. ಬೈಬಲನ್ನು ಬಿಟ್ಟರೆ ಭೂಲೋಕದ ಮುಖ್ಯಭಾಷೆಗಳಿಗೆಲ್ಲ ಅನುವಾದವಾಗಿರುವ ಧಾರ್ಮಿಕಗ್ರಂಥವು ಭಗವದ್ಗೀತೆಯೊಂದೇ. ಬೈಬಲನ್ನು ಭಾಷಾಂತರಿಸುವದಕ್ಕೆ ಲಕ್ಷಗಟ್ಟಲೆ ಹಣವನ್ನು ಪರದೇಶದವರು ಸುರಿದಿದ್ದಾರೆ; ಭಗವದ್ಗೀತೆಯು ಯಾರೊಬ್ಬರ ಧನಸಹಾಯವನ್ನೂ ಬೇಡದೆ ತನ್ನ ಯೋಗ್ಯತೆಯಮೇಲೆಯೇ ತಾನು ನಿಂತು ಎಲ್ಲೆಲ್ಲಿಯೂ ಪ್ರಚಾರವಾಗಿರುತ್ತದೆ.

ಬ್ರಾಹ್ಮಣನಾಗಿ ಜನಿಸಿದ್ದಕ್ಕೆ ಆಚಾರಪರಿಪಾಲನೆಯನ್ನೂ ಧರ್ಮಾನುಷ್ಠಾನವನ್ನೂ ಮಾಡುತ್ತಾ ಎಲ್ಲರಿಗೂ ಮೇಲುಪಙ್ಕ್ತಿಯಾಗಿ ಇರುವದು ಸಾರ್ಥಕ. ಈಗ ನವನಾಗರಿಕತೆಯ ಪ್ರಭಾವದಿಂದ ಬ್ರಾಹ್ಮಣ ಬ್ರಾಹ್ಮಣ, ಬ್ರಾಹ್ಮಣ ಕ್ಷತ್ರಿಯ, ಬ್ರಾಹ್ಮಣ ವೈಶ್ಯ, ಬ್ರಾಹ್ಮಣ ಶೂದ್ರನೆಂದು ನಾಲ್ಕು ಪ್ರಭೇದಗಳನ್ನು ಬ್ರಾಹ್ಮಣನು ಆಪ್ಪಿಕೊಂಡಿರುವದು ಕಾಣಬರುತ್ತದೆ. ಹೀಗೆಯೇ ಮಿಕ್ಕವರೂ ಬಗೆಬಗೆಯಾಗಿ ಆಚರಣೆಗಳನ್ನಿಟ್ಟುಕೊಂಡಿರುವದು ಕಾಣುತ್ತಿದೆ. ಈಗಲೂ ಚಾತುರ್ವರ್ಣ್ಯದ ಶ್ರೈಷ್ಠ್ಯವನ್ನೂ ಅದರಿಂದ ಸಮಾಜಕ್ಕೆ ಆಗಬಹುದಾದ ಶ್ರೇಯಸ್ಸನ್ನೂ ಅರಿತವರು ಧರ್ಮಕ್ಕಾಗಿ ಹೋರಾಡುವ ಪ್ರಯತ್ನವದ್ನು ಮಾಡಬೇಕು. ಊಟಮಾಡುವಾಗ ಕೈಯಲ್ಲಿ ಕಲೆಯಿಸಿಕೊಂಡು ತುತ್ತುಮಾಡಿ ನಾಲಗೆಯಿಂದ ಸವಿನೋಡಿ ಹಲ್ಲುಗಳಿಂದ ಅಗಿದು ನುಂಗಿ ಆಹಾರವನ್ನು ಜೀರ್ಣಿಸಿಕೊಳ್ಳುವ ವ್ಯಾಪಾರವಿಭಾಗವು ಶರೀರದ ಅವಯವಗಳಲ್ಲಿ ಕಂಡುಬರುತ್ತದೆ. ಈ ಅವಯವಗಳೆಲ್ಲ ಒಂದುಗೂಡಿದರೇ ಆಹಾರವು ಶರೀರಕ್ಕೆ ತುಷ್ಟಿಪುಷ್ಟ್ಯಾದಿಗಳನ್ನು ಹೇಗೆ ಕೊಡುವದೋ ಹಾಗೆಯೇ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರು ಒಗ್ಗಟ್ಟಾಗಿ ತಮ

ತಮ್ಮ ಧರ್ಮಗಳನ್ನು ಮಾಡುತ್ತಾ ಒಬ್ಬರಿಗೊಬ್ಬರು ಸಹಕರಿಸುತ್ತಾಬಂದರೆ ನಮಗೆ ಇಹಪರಸೌಖ್ಯಗಳು ಕರಗತವಾಗುವವು.

## ೧೨. ವರ್ಣಾಶ್ರಮಧರ್ಮಗಳು

(10—8—69)

ಚಾತುರ್ವರ್ಣ್ಯವನ್ನು ಕುರಿತು ಸ್ವಲ್ಪಮಟ್ಟಿಗೆ ವಿಚಾರಮಾಡಿದ್ದಾಯಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ– ಎಂಬುದು ಕಂಪನಿಗಳನ್ನು ಮಾಡಿಕೊಳ್ಳುವಂತೆ ಸಮಾಜದಲ್ಲಿ ಗುಂಪುಕಟ್ಟಿಕೊಳ್ಳುವ ಜೀವನವಲ್ಲ. ಇದು ಭಗವಂತನ ಸೃಷ್ಟಿ. ಆದರಲ್ಲಿಯೂ ನಮ್ಮ ದೇಶದಲ್ಲೊಂದರಲ್ಲಿಯೇ ಈ ಬಗೆಯ ಧರ್ಮಾನುಸಾರವಾದ ಸಮಾಜರಚನೆಯಾಗಿರುತ್ತದೆ.

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರನ್ತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥** ಗೀ. ೧೮–೪೧

ಈಶ್ವರನ ಶಕ್ತಿಯಾದ ತ್ರಿಗುಣಾತ್ಮಕವಾದ ಪ್ರಕೃತಿಯಿಂದೆದ್ದುಕೊಂಡಿರುವ ಸತ್ತ್ವರಜಸ್ತಮೋಗುಣಗಳ ಅಂಗಾಂಗಿಭಾವಕ್ಕೆ ಅನುಗುಣವಾಗಿ ಬ್ರಾಹ್ಮಣಾದಿಗಳ ಕರ್ಮಗಳು ಪ್ರವಿಭಕ್ತವಾಗಿರುತ್ತವೆ. ಈ ವರ್ಣಕರ್ಮಗಳು ಭಗವಂತನ ಸಂಕಲ್ಪದಂತೆ ಶಾಸ್ತ್ರದಿಂದಲೇ ಪ್ರವಿಭಕ್ತವಾಗಿವೆಯೆಂಬುದು ನಿಜವಾದರೂ ಶಾಸ್ತ್ರವೂ ಸತ್ತ್ವಾದಿಗುಣಗಳನ್ನವಲಂಬಿಸಿಯೇ ಈ ಕರ್ಮಗಳನ್ನು ವಿಂಗಡಿಸಿ ಹೇಳಿರುತ್ತದೆ.

ಇಲ್ಲಿ ಹೇಳಿರುವವು ಬರಿಯ ಸಂಧ್ಯಾದಿಕರ್ಮಗಳು ಮಾತ್ರವೇ ಅಲ್ಲವೆಂಬುದು ಈ ಮುಂದಿನ ಶ್ಲೋಕಗಳಿಂದ ವ್ಯಕ್ತವಾಗುತ್ತದೆ :

**ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥**
ಗೀ. ೧೮–೪೨.

ಇಲ್ಲಿ ಹೇಳಿರುವವೆಲ್ಲ ಮುಖ್ಯವಾಗಿ ಅಂತಃಕರಣಕ್ಕೆ ಸಂಬಂಧಪಟ್ಟವುಗಳಾಗಿವೆ ಎಂಬುದನ್ನು ಲಕ್ಷಿಸಬೇಕು. ಶಮದಮಾದಿಗಳು ಕರ್ಮವೆ ? ಎಂದರೆ ಹೌದು, ಅಲ್ಲ ಎಂದು ಎರಡೂ ಉತ್ತರ. ಮೂಡುಗೆರೆಯಲ್ಲಿ ನಾನು ಇನ್ನೂ ಹುಡುಗನಾಗಿದ್ದಾಗ ಒಬ್ಬ ಯೂರೋಪಿಯನ್ ಕಾಫಿಪ್ಲಾಂಟರ್ ಕುದುರೆಯನ್ನು ನಡೆ

ಯಿಸುತ್ತಿದ್ದ ಕ್ರಮವು ಇಲ್ಲಿ ನನಗೆ ನೆನಪಿಗೆ ಬರುತ್ತದೆ. ಅವನು ಕುದುರೆಯ ಲಗಾಮನ್ನು ಕೂಡ ಹಿಡಿಯದೆ ಹಾಗೆಯೇ ಬಿಟ್ಟಿದ್ದನು ; ಆದರೆ 'Not that Way John' (ಅತ್ತಲಲ್ಲವೋ ಜಾನ್ !) ಎಂದು ಅವನು ಹೇಳಿದರೆ ಶಬ್ದಮಾತ್ರಶ್ರವಣದಿಂದಲೇ ಆ ಕುದುರೆಯು ಅವನ ಆಶಯವನ್ನು ಅರಿತುಕೊಂಡು ಎಡಕ್ಕೆ ಬಲಕ್ಕೆ ಹೋಗುತ್ತಿತ್ತು ! ಶಮವೆಂದರೆ ಅಂತಃಕರಣವನ್ನು ನಿಗ್ರಹಿಸುವುದು: ದಮವೆಂದರೆ ಹೊರಗಿನ ಇಂದ್ರಿಯಗಳನ್ನು ನಿಗ್ರಹಿಸುವುದು. ತಪಸ್ಸೆಂಬುದು ಶಾರೀರಾದಿವಿಧವಾದದ್ದು. ಶೌಚವೆಂದರೆ ಮೃಜ್ಜಲಗಳಿಂದ ಶರೀರವನ್ನೂ ಶುದ್ಧವಾದ ವಿಚಾರಗಳಿಂದ ಅಂತಃಕರಣವನ್ನೂ ಶುಚಿಯಾಗಿಟ್ಟುಕೊಳ್ಳುವುದು ; ಸ್ಮೃತ್ಯುಕ್ತವಾದ ರೀತಿಯಿಂದ ಕರಣಗಳನ್ನು ಶುಚಿಯಾಗಿಟ್ಟುಕೊಳ್ಳುವುದು—ಇವುಗಳನ್ನು ಪ್ರಯತ್ನಪೂರ್ವಕವಾಗಿ ಸಾಧಿಸುತ್ತಿರುವುದು ಬ್ರಾಹ್ಮಣನ ಕರ್ಮವು.

ಕ್ಷಾಂತಿ ಎಂಬುದು ಪರರ ಅಪರಾಧವನ್ನು ಸ್ವಲ್ಪವೂ ಮನಸ್ಸಿಗೆ ತಂದುಕೊಳ್ಳದೆ ಇರುವುದು, ಅವರ ಸರ್ವಾಪರಾಧವನ್ನೂ ಸಹಿಸುವುದು. ಏಕನಾಥರು ತಮ್ಮ ಮೇಲೆ ಒಬ್ಬ ಮ್ಲೇಂಛನು ಎಷ್ಟು ಬಾರಿ ತಂಬಲವನ್ನು ಬೇಕೆಂತಲೇ ಉಗುಳುತ್ತಿದ್ದರೂ ಕಿಂಚಿದ್ ಎನ್ನದೆ ಗೋದಾವರಿಯಲ್ಲಿ ಮುಳುಗಿಮುಳುಗಿ ಮತ್ತೆ ತಾವು ಇದ್ದಲ್ಲಿಗೆ ಬರುತ್ತಿದ್ದದ್ದನ್ನು ಕಂಡು ಅವನೇ ಅವರ ಕಾಲಿಗೆಬಿದ್ದು ಕ್ಷಮೆಯನ್ನು ಬೇಡಿದ ಕಥೆಯನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಆರ್ಜವ ಎಂದರೆ ಮನಸ್ಸು, ವಾಕ್ಕು, ಕಾಯ— ಈ ಮೂರರಲ್ಲಿಯೂ ಹೊಂದುಗೆಯಿಂದ ವ್ಯವಹರಿಸುವ ಅಕಾಪಟ್ಯ. 'ಜ್ಞಾನಂ ವಿಜ್ಞಾನಮ್' ಎಂದರೆ ಶಾಸ್ತ್ರಾರ್ಥಜ್ಞಾನವನ್ನು ಸಂಪಾದಿಸುವುದಕ್ಕೂ ಅರಿತದ್ದನ್ನು ಅನುಭವಕ್ಕೆ ತಂದುಕೊಳ್ಳುವುದಕ್ಕೂ ಯತ್ನಿಸುತ್ತಿರುವುದು. ಆಸ್ತಿಕ್ಯ ಎಂದರೆ ಈಶ್ವರನ ಅಸ್ತಿತ್ವದಲ್ಲಿ ಅಚಲ ಶ್ರದ್ಧೆಯಿರುವುದು. ನನ್ನ ಮಿತ್ರರೊಬ್ಬರು ತಮಗೆ ಪರಿಚಿತನಾಗಿದ್ದ ಒಬ್ಬ ಬ್ರಾಹ್ಮಣನ ಆಸ್ತಿಕ್ಯದ ನಿದರ್ಶನವೊಂದನ್ನು ಹೇಳಿದ್ದು ಇಲ್ಲಿ ನೆನಪಿಗೆ ಬರುತ್ತಿದೆ. ಒಂದು ಕೋರ್ಟಿನಲ್ಲಿ ನಡೆದಿದ್ದ ಒಂದು ವಿವಾದದಲ್ಲಿ ಒಬ್ಬ ನಿರಪರಾಧಿಯಮೇಲೆ ಒಂದು ಆರೋಪಣೆ ಬಂದಿರುವಲ್ಲಿ ಆ ಬ್ರಾಹ್ಮಣನ ಸಾಕ್ಷ್ಯವನ್ನು ಒದಗಿಸಿದರೆ ವ್ಯವಹಾರವು ತಮ್ಮಂತೆ ಆಗುವುದು— ಎಂದು ದೃಢವಾದ ನಂಬಿಕೆಯಿಂದ ಆತನಿಗೆ ಕರೆಯ (Summons) ಹುಕುಮನ್ನು ಕೊಡಿಸಲಾಯಿತು. ಆ ಬ್ರಾಹ್ಮಣನು ಹುಟ್ಟಿದಂದಿನಿಂದ ಎಂದೂ ಕೋರ್ಟಿಗೆ ಹೋದವನಲ್ಲ. 'ದೇವರ ಮುಂದೆ ಸತ್ಯವನ್ನು ಹೇಳುತ್ತೇನೆ' ಎಂದು ಪ್ರತಿಜ್ಞೆಮಾಡು ಎಂದು ಲಾಯರು ಕೇಳಲು ಆ ಸಾತ್ತ್ವಿಕನು ಕಣ್ಣೀರುಸುರಿಸುತ್ತಾ 'ದೇವರಮುಂದೆ ಸತ್ಯವನ್ನು ನುಡಿಯುತ್ತಿದೇನೆ' ಎಂದು ಹೇಳಿದನು. ಆದರೆ ಅವನ ಮನಸ್ಸಿನಲ್ಲಿ 'ಎಲಾ, ಸತ್ಯವನ್ನು ಹೇಳುವುದಕ್ಕೆ ದೇವರ ಆಣೆಯನ್ನಿಟ್ಟುಕೊಳ್ಳಬೇಕಾಯಿತಲ್ಲ !' ಎಂಬ ಕೊರಗು ಹತ್ತಿ

ಕೊಂಡಿತು. ವ್ಯವಹಾರವೇನೋ, ನಿರಪರಾಧಿಯ ಪರವಾಗಿಯೇ ತೀರ್ಮಾನವಾಯಿತು : ಆದರೆ ಆ ಬ್ರಾಹ್ಮಣನು 'ದೇವರಮುಂದೆ ಸತ್ಯವನಾಡುತ್ತೇನೆ' ಎಂದು ಆಶೆಯಿಟ್ಟು ಘಾತಮಾಡಿದೆನಲ್ಲ!— ಎಂಬ ಕೊರಗಿನಿಂದಲೇ ಕೆಲವು ದಿವಸಗಳೊಳಗೇ ಕಾಲವಶನಾಗಿ ಬಿಟ್ಟನಂತೆ! ಎಂಥ ಆಸ್ತಿಕ್ಯವಿದು!

ಇದುವರೆಗೆ ಹೇಳಿರುವುದಷ್ಟು ಬ್ರಾಹ್ಮಣನು ಪ್ರಯತ್ನಪೂರ್ವಕವಾಗಿಟ್ಟುಕೊಳ್ಳಬೇಕಾದ ಕರ್ತವ್ಯಬುದ್ಧಿ. ಇಡಿಯ ಭಗವದ್ಗೀತೆಯನ್ನು ಪಾರಾಯಣ ಮಾಡುವವರೂ ಇದ್ದಾರೆ. ಆದರೆ ಈಗ ನಾವು ಹೇಳಿರುವ ಸಾಧನೆಗಳು ನಾವು ಮಾಡತಕ್ಕವು— ಎಂಬ ದೃಢಬುದ್ಧಿಯಿರುವ ಮಹನೀಯರು ಬಹುವಿರಳ.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್** ॥ ಗೀ. ೧೮—೪೩

ಮೂರು ವರ್ಣದ ದ್ವಿಜರಿಗೂ ಅಧ್ಯಯನವುಂಟಾದರೂ ಇಲ್ಲಿ ಆಯಾ ವರ್ಣದವರಿಗೆ ಅಸಾಧಾರಣವಾಗಿರಬೇಕಾದ ಸ್ವಾಭಾವಿಕಕರ್ಮಗಳನ್ನೇ ಹೇಳಿರುತ್ತದೆ. ಕ್ಷತ್ರಿಯರೆಂದು ಹೇಳಿಕೊಳ್ಳುವ ದ್ವಿಜರು ಸಿಕ್ಕಬಹುದು. ಆದರೆ ಧರ್ಮಕ್ಕಾಗಿ ಶೌರ್ಯಾದಿಗಳನ್ನು ವಿನಾಸಲಾಗಿಡುವ ಮತ್ತು ಧರ್ಮವನ್ನು ರಕ್ಷಿಸಿದರೇ ನಮ್ಮನ್ನು ಅದು ರಕ್ಷಿಸುವದು ಎಂಬ ಅಚಲಶ್ರದ್ಧೆಯುಳ್ಳವರು ಎಲ್ಲಿದಾರೊ!

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್** ॥ ಗೀ. ೧೮—೪೪

ಈಗ್ಗೆ ವೈಶ್ಯಕರ್ಮವು ಬಹಳಮುಖ್ಯವಾಗಿರುತ್ತದೆ, ಸರಕಾರದವರು ಎಷ್ಟೋ ಕಾರುಖಾನೆಗಳನ್ನು ಇಟ್ಟು ಉದ್ಯೋಗಗಳ ಬಗ್ಗೆ ಬಹಳ ಯೋಜನೆಗಳನ್ನು ಮಾಡುತ್ತಿದ್ದರೂ ಕೃಷಿಯ ವಿಷಯಕ್ಕೆ ಯಾವ ಯೋಜನೆಯೂ ಅವಶ್ಯವಿಲ್ಲವೆನ್ನುವಂತೆ 'ಖುಷಿ'ಯಾಗಿ ಕಾಲವನ್ನು ಕಳೆಯುತ್ತಿದ್ದಾರೆ. ಕೃಷಿಪ್ರಧಾನವಾದ ನಮ್ಮ ರಾಷ್ಟ್ರಕ್ಕೆ ಪರದೇಶದಿಂದಲೇ ಈಗಲೂ ಧಾನ್ಯಗಳು ಬರಬೇಕಾಗಿದೆ! ವೈಶ್ಯರಿಗೆ ಕೃಷಿಯು ಒಂದು ಕರ್ತವ್ಯಕರ್ಮವೆಂದು ಭಗವಂತನು ಹೇಳಿರುವದನ್ನು ನಾವೆಲ್ಲರೂ ನೆನಪಿನಲ್ಲಿಡಬೇಕು. ಬ್ರಾಹ್ಮಣರೂ ಆಪದ್ಧರ್ಮವಾಗಿ ಕೃಷಿಯನ್ನು ಅವಲಂಬಿಬಹುದೆಂದು ಸ್ಮೃತಿಗಳಲ್ಲಿ ಹೇಳಿರುತ್ತದೆ. ಆದ್ದರಿಂದ ಇತ್ತಕಡೆಗೆ ಪ್ರಜೆಗಳ ಅವಧಾನವುಂಟಾದರೆ ನಮ್ಮ ದೇಶದಲ್ಲಿ ಕಾಣಬರುತ್ತಿರುವ ಆಹಾರಾಭಾವದ ತೊಡಕು ಸ್ವಲ್ಪಮಟ್ಟಿಗಾದರೂ ಬಿಚ್ಚಿಕೊಂಡೀತು. ಇನ್ನು ಗೋರಕ್ಷಣೆಯು ವೈಶ್ಯಧರ್ಮವೆಂಬುದು ಅನೇಕ ವೈಶ್ಯರ ಮನಸ್ಸಿಗೆ ಬಂದಿಲ್ಲ. **'ಸರ್ವದಲೀಯ ಗೋರಕ್ಷ ಮಹಾಭಿಯಾನಸಮಿತಿ'** ಎಂಬ ಹೆಸರಿನ ಸಂಸ್ಥೆಯವರು **'ಗಾಂಧಿಜೀ ಔರ ಗೋರಕ್ಷಾ'** (Gandhiji on Cow Protection) ಎಂಬ

ಕೈಹೊತ್ತಿಗೆಯೊಂದನ್ನು ಹಿಂದಿಯಲ್ಲಿಯೂ ಇಂಗ್ಲಿಷಿನಲ್ಲಿಯೂ ಪ್ರಕಟಿಸಿರುತ್ತಾರೆ. ಸಾಮಾನ್ಯವಾಗಿ ಪ್ರಾಣಿರಕ್ಷಣೆಯ ವಿಷಯಕ್ಕೆ ಅನಾವಶ್ಯವಾದ ಹಿಂಸೆಯನ್ನು ನಿಲ್ಲಿಸಬೇಕೆಂದು ಸರಕಾರದವರು ಕಾನೂನುಮಾಡಿದ್ದರೂ ನಿಯಮಯುಕ್ತವಾದ ದನಕರುಗಳು ಹೆಚ್ಚಾಗಿದ್ದರೆ ಉತ್ತಮವಾದ ದನಗಳನ್ನು ರಕ್ಷಣೆಮಾಡುವದು ಕಷ್ಟವಾದೀತು ಎಂಬ ನೆಪದಿಂದ ಸರಕಾರದವರು ಕೂಡ ದನಗಳನ್ನು ಕೊಲ್ಲುವ ಕಸಾಯಿಖಾನೆಗಳಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆಂದು ಆ ಪ್ರಕಟನೆಯು ತಿಳಿಸುತ್ತದೆ. ಕಟುಕರು ಗೋವುಗಳಿಗೆ ಮಾಡುವ ಚಿತ್ರಹಿಂಸೆಯ ಕ್ರಮವನ್ನು ಚಿತ್ರಸಮೂಲಕ ಆ ಸಂಸ್ಥೆಯವರು ಪ್ರದರ್ಶನಮಾಡಿರುವದನ್ನು ನೋಡಿದರೆ ಯಾರೊಬ್ಬರಿಗೂ ಮನಸ್ಸಿನಲ್ಲಿ ರೋಮಾಂಚನವಾಗದೆ ಇರದು. ದನಗಳ ಚರ್ಮಗಳ ಮಾಂಸವನ್ನು ರಫ್ತುಮಾಡಿ ಹಣವನ್ನು ಸಂಪಾದಿಸುವಕಡೆಗೆ ಚಿತ್ತವನ್ನು ಹರಿಯಿಸುವವರ ಅರ್ಥಶಾಲಿ ಗೋರಕ್ಷಣೆಗೆ ಅವಧಾನವನ್ನು ಸರಕಾರದವರು ಕೊಟ್ಟಿದ್ದರೆ ಎಷ್ಟು, ದನಕರುಗಳ ಸಂಪತ್ತು ಹೆಚ್ಚುತ್ತಿತ್ತೆಂಬುದನ್ನು ಮನಗಾಣಬಹುದು. ಗೋವು ಎಷ್ಟು ಪವಿತ್ರವೂ ಪೂಜ್ಯವೂ ಆದ ಪ್ರಾಣಿ ಎಂಬುದನ್ನು ಪ್ರಜೆಗಳಾದ ಹಿಂದೂಗಳು ಮನಸ್ಸಿಗೆ ಹತ್ತಿಸಿಕೊಂಡಿಲ್ಲ. ಹಾಲು ಆರೋಗ್ಯಕ್ಕೆ ಎಷ್ಟು ಉತ್ತಮವಾದ ಆಹಾರವನ್ನು ಒದಗಿಸುತ್ತಿದೆ! ಪಂಚಗವ್ಯಪ್ರಾಶನದಿಂದ ಸರ್ವಪಾಪಗಳೂ ಪ್ರಶಮನವಾಗುತ್ತವೆಯೆಂದು ಶಾಸ್ತ್ರದಲ್ಲಿ ಹೇಗೆ ಉಪದೇಶಿಸಿದೆ ಎಂಬುದನ್ನು ನಾವುಗಳು ಮನಸ್ಸಿಗೆ ಹತ್ತಿಸಿಕೊಳ್ಳುತ್ತಿಲ್ಲ, ಗೋಮಾಂಸವು ಹಿಂದುಗಳಲ್ಲದ ಮುಸಲ್ಮಾನರು, ಕ್ರಿಸ್ತಿಯನರು ಮುಂತಾದವರಿಗೆ ಆವಶ್ಯವಾಗಿದೆಯಾದ್ದರಿಂದ ಗೋಹತ್ಯೆಯನ್ನು ಸಂಪೂರ್ಣವಾಗಿ ನಿಲ್ಲಿಸುವದಕ್ಕೆ ಆಗುವದಿಲ್ಲ—ಎಂದು ಕೆಲವು ಕುತರ್ಕವನ್ನು ತೆಗೆಯುತ್ತಾರೆ. ಹಿಂದೂದೇಶದಲ್ಲಿ ನೆಲಸಿರುವ ಕ್ರಿಸ್ತಿಯನ್ನರೂ ಮುಸಲ್ಮಾನರೂ ದೇಶದ ಹಿತಕ್ಕೂ ಹಿಂದುಗಳ ಧಾರ್ಮಿಕಭಾವನೆಗೂ ಗೌರವವನ್ನು ಕೊಡುವದು ಅವಶ್ಯಕರ್ತವ್ಯವೆಂದು ಯಾರಾದರೂ ಒಪ್ಪಬೇಕು. ಮುಸಲ್ಮಾನರು ದನವನ್ನು ಕೆಲವು ಹಬ್ಬಗಳಲ್ಲಿ ಬಲಿಕೊಡುವದು ಅವಶ್ಯವೆಂದು ಕೆಲವರು ವಾದಿಸುತ್ತಾರೆ; ಆದರೆ ಅಕ್ಬರನಕಾಲಕ್ಕೆ ಗೋಹತ್ಯವನ್ನು ನಿಲ್ಲಿಸುವ ರಾಜಾಜ್ಞೆಯಾಗಿತ್ತೆಂದು ತಿಳಿಯಬರುತ್ತದೆ. ಕುರಾನಿನಲ್ಲಿ ಗೋಬಲಿದಾನವು ವಿಹಿತವಾಗಿದ್ದಿದ್ದರೆ ಇದು ಹೇಗೆ ಸಾಧ್ಯ ? ಕ್ರಿಸ್ತಿಯನ್ನರ ಮತದಲ್ಲಿ ಗೋಹತ್ಯವು ನಿಷಿದ್ಧವೆಂಬುದಕ್ಕೂ ಇತರ ಮತಗಳಲ್ಲಿಯೂ ಗೋಬಲಿದಾನವು ವಿಹಿತವಾಗಿಲ್ಲವೆಂಬುದಕ್ಕೂ ಪ್ರಮಾಣವನ್ನು ಗೋರಕ್ಷಾಸಮಿತಿಯವರು ಕೊಟ್ಟಿರುತ್ತಾರೆ. ಇದೆಲ್ಲ ಹೇಗೇ ಇರಲಿ, ವೈಶ್ಯರಂತೂ ಗೋರಕ್ಷಣಕಾರ್ಯಕ್ಕೆ ಸೊಂಟವನ್ನು ಕಟ್ಟುವದು ಅವಶ್ಯವೆಂಬುದು ಗೀತಾಚಾರ್ಯನ ಮತವಾಗಿರುತ್ತದೆ.

ಈಗ ವಾಣಿಜ್ಯದ ವಿಚಾರ. ವಾಣಿಜ್ಯವೆಂದರೆ ಇಲ್ಲಸಲ್ಲದ ಜಾಹಿರಾತು ಗಳಿಂದ ವಸ್ತುಗಳನ್ನು ಬಣ್ಣಿಸಿ ಜನರ ಮನಸ್ಸನ್ನು ಸೆಳೆದುಕೊಂಡು ಮೂರಕ್ಕೆ ಆರಾಗಿ ಮಾಡಿ ಮಾರುವ ಮೋಸದ ವ್ಯಾಪಾರವಲ್ಲ. ಅಗ್ಗವಾಗಿರುವ ಸ್ಥಲಗಳಿಂದ ಸಾಮಾನುಗಳನ್ನು ಕೊಂಡುತಂದು ಅಲ್ಪಲಾಭದಿಂದಲೇ ತೃಪ್ತರಾಗಿ ಜನರಿಗೆ ಅವಶ್ಯವಾಗಿ ಬೇಕಾಗುವ ಆಹಾರವೇ ಮುಂತಾದ ಜೀವನದ ಅವಶ್ಯಕತೆಗಳನ್ನು ಪೂರೈಸಿ ತಾನೂ ಧರ್ಮದಿಂದ ಜೀವಿಸುತ್ತಾ ಧಾರ್ಮಿಕಜೀವನದಿಂದ ಇರುವುದಕ್ಕೆ ಇಚ್ಛಿಸುವ ಸಮಾಜಕ್ಕೆ ನೆರವಾಗುವ ಉಪಕಾರದ ಕಾರ್ಯ. ಧರ್ಮವು ನಿತ್ಯವು, ಸುಖದುಃಖಗಳು ಅನಿತ್ಯ: ಜೀವನು ನಿತ್ಯ; ಇದರ ಜೀವತ್ವಕ್ಕೆ ಹೇತುವಾದದ್ದು ಅನಿತ್ಯ—ಎಂಬ ಭಾರತಸಾವಿತ್ರಿಯ ವಾಕ್ಯವನ್ನು ನೆನಪಿನಲ್ಲಿ ಇಟ್ಟುಕೊಂಡು ಧರ್ಮವನ್ನೇ ಎಲ್ಲಾ ಸಮಯದಲ್ಲೂ ಅನುಷ್ಠಾನಮಾಡಿ ಇಹ ಪರಸುಖವನ್ನು ಸಂಪಾದಿಸಿ ಪರಸ್ಪರ ಸಹಾಯಮಾಡುತ್ತಿರುವ ಸಮಾಜಕ್ಕೆ ಸೇವೆಯನ್ನು ಮಾಡುವುದಕ್ಕೆಂದೇ ಜೀವನವನ್ನು ವಿನಿಯೋಗಿಸಿ ಶುಶ್ರೂಷೆ ಯನ್ನು ಮಾಡುವವನು ಶೂದ್ರನು. ಇಂಥ ಉಚ್ಚವಾದ ಆದರ್ಶಜೀವನಕ್ಕೆ ಬೇಕಾದ ಒಂದು ಸಮಾಜವನ್ನು ನಿರ್ಮಾಣಮಾಡಿರುವ ಋಷಿಗಳ ದೂರದೃಷ್ಟಿ ಯು ಎಂಥ ಅಮೋಘವಾದದ್ದು !

ಧರ್ಮದಲ್ಲಿ ಎಲ್ಲಾ ಉದ್ಯೋಗದವರಿಗೂ ಪಾಲು ಇರಬೇಕು— ಎಂಬ ದೃಷ್ಟಿಯಿಂದ ವರ್ಣವಿಭಾಗವು ಸ್ಪಷ್ಟವಾಗಿರುತ್ತದೆ. ಈ ಗುಟ್ಟನ್ನು ಅರಿಯದೆ ಈ ವರ್ಣದವನು ಹೆಚ್ಚು ಆ ವರ್ಣದವನು ಕಡಿಮೆ— ಎಂಬ ಸಲ್ಲದ ತಾರತಮ್ಯ ವನ್ನು ಕಲ್ಪಿಸಿಕೊಂಡು ಹೆಮ್ಮೆಯಿಂದ ಮೆರೆಯುವವರಿಗೆ ಧರ್ಮದಲ್ಲಿ ಸ್ಥಾನವು ಸಿಕ್ಕಲಾರದೆಂಬುದು ಹಾಗಿರಲಿ, ಅಧರ್ಮವೇ ಗಂಟುಬೀಳುವುದು. ಎಲ್ಲಾ ದೇಶಗಳಲ್ಲಿಯೂ ಮಾನವನ ಪ್ರಕೃತಿಗೆ ಅನುಗುಣವಾಗಿ ಬ್ರಾಹ್ಮಣ್ಯ, ಕ್ಷತ್ರ ಸ್ವಭಾವ, ವೈಶ್ಯತನ—ಶೂದ್ರತ್ವ—ಇವು ಇದ್ದೇ ಇರುತ್ತವೆಯಾದರೂ ಇವುಗಳನ್ನು ಧರ್ಮಕ್ಕೆ ಹೊಂದಿಸಿಕೊಳ್ಳುವ ಭಾಗ್ಯವು ಭಾರತದೇಶದವರಿಗೆ ಮಾತ್ರವೇ ಇದೆ. ಇತರ ದೇಶಗಳಲ್ಲಿರುವ ವರ್ಣಗಳ ವಿಭಾಗಗಳಂತೆಯೇ ಇದು—ಎಂದು ಭಾವಿಸುವ ಅಜ್ಞರ ಅಥವಾ ಅಸೂಯಾವಂತರ ಬೋಧೆಗೆ ಒಳಗಾಗಿ ವರ್ಣವಿಭಾಗದ ದುರುಪ ಯೋಗವನ್ನು ಮಾಡಿಕೊಳ್ಳುವ ಭಾರತದೇಶೀಯರ ದೌರ್ಭಾಗ್ಯಕ್ಕೆ ಏನೆನ್ನ ಬೇಕು ?

ಇನ್ನು ಆಶ್ರಮಗಳನ್ನು ಕುರಿತು ವಿಚಾರಮಾಡೋಣ. ಧರ್ಮಪ್ರಧಾನ ನಾಗಿ ಧನರಾಶಿಯನ್ನು ಕೂಡಿಹಾಕುವ ದುರಾಶೆಯಿಲ್ಲದ ಬ್ರಾಹ್ಮಣನಿಗೇ ಸಮಾಜ ದಲ್ಲಿ ಹೆಚ್ಚಿನ ಗೌರವವನ್ನು ಕೊಟ್ಟಿದ್ದಲ್ಲದೆ, ಮನುಷ್ಯಜೀವನದಲ್ಲಿ ಐಹಿಕಭೋಗ ಕ್ಕಿಂತಲೂ ಪರಗತಿಗೇ ಹೆಚ್ಚಿನ ಬೆಲೆಯನ್ನು ಕೊಟ್ಟು ಮನುಷ್ಯಜೀವಿತವನು

ನಾಲ್ಕು ಆಶ್ರಮಗಳಾಗಿ ವಿಂಗಡಿಸಿರುವ ಋಷಿಗಳ ಸೂಕ್ಷ್ಮದೃಷ್ಟಿಯನ್ನು ಎಷ್ಟು ಹೊಗಳಿದರೂ ತೀರದು.

ತ್ರಯೋ ಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯೋಽತ್ಯಂತಮಾತ್ಮಾನಮಾಚಾರ್ಯಕುಲೇಽವಸಾದಯನ್ ಸರ್ವ ಏತೇ ಪುಣ್ಯಲೋಕಾ ಭವಂತಿ ಬ್ರಹ್ಮಸಂಸ್ಥೋಽಮೃತತ್ವಮೇತಿ ॥

ಛಾ. ೨–೨೩–೧

ಎಂಬ ಛಾಂದೋಗ್ಯವಾಕ್ಯದಲ್ಲಿ ಈ ಆಶ್ರಮಗಳ ವಿಚಾರವನ್ನು ಕೊಟ್ಟಿರುತ್ತದೆ.

ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಮುಖ್ಯವಾದದ್ದು: ಏಕೆಂದರೆ ಗೃಹಸ್ಥನನ್ನವಲಂಬಿಸಿಯೇ ಮಿಕ್ಕ ಆಶ್ರಮದವರ ಜೀವನವು ನಡೆಯಬೇಕಾಗಿರುತ್ತದೆ. ಯೋಗ್ಯವಾದವರನ್ನು ಯಾಜಿಸಿದ ಪ್ರಸ್ತಾವದಿಂದ ಯಜ್ಞವನ್ನು ಮಾಡುವದು, ವೇದಾಧ್ಯಯನವನ್ನು ಮಾಡುವದು' ದಾನವನ್ನು ಕೊಡುವದು– ಇವೇ ಗೃಹಸ್ಥನ ಧರ್ಮಗಳು. ವರ್ಣಗಳಲ್ಲಿ ಬ್ರಾಹ್ಮಣನೇ ಹೆಚ್ಚಿನವನಾಗಿದ್ದರೂ ಇತರರಿಗೆ ಕರ್ಮವನ್ನು ಮಾಡಿಸುವದು, ಅಧ್ಯಯನವನ್ನು ಮಾಡಿಸುವದು, ಅವರಲ್ಲಿ ಧಾರ್ಮಿಕಜೀವನದಲ್ಲಿರುವವರು ಮಾಡಿದ ದಾನವನ್ನು ಪ್ರತಿಗ್ರಹಿಸಿ ಅದರಿಂದಲೇ ತನ್ನ ನಿತ್ಯಜೀವನವನ್ನು ಸಾಗಿಸುವದು– ಇವೇ ಬ್ರಾಹ್ಮಣನ ಜೀವಿಕೆಗೆ ಉಪಾಯಗಳು. ಬ್ರಾಹ್ಮಣನಿಗೆ ಆಸ್ತಿಯನ್ನು ಕೂಡಿಡುವದು ಧರ್ಮವಲ್ಲ. ಇವನ ಜೀವಿತವು ಸುಖವಾಗಿ ಸಾಗುವಂತೆ ಮಾಡುವದು ಉಳಿದ ವರ್ಣದವರ ಕರ್ತವ್ಯವು. ಇಂಥ ಅಲ್ಪತುಷ್ಟನಾದ ಬ್ರಾಹ್ಮಣನು ವೇದಾಧ್ಯಯನವನ್ನು ಮಾಡಿದಬಳಿಕ ಗುರುಗಳ ಅಪ್ಪಣೆಯನ್ನು ಪಡೆದು ಗೃಹಸ್ಥನಾಗಿ ಯೋಗ್ಯಳಾದ ಪತ್ನಿಯನ್ನು ಸ್ವೀಕರಿಸಿ ಧರ್ಮಾಚರಣೆ, ಅತಿಥಿಸತ್ಕಾರ– ಇವುಗಳನ್ನು ಮಾಡುತ್ತಿರಬೇಕು. ಆದರೆ ಯಾವ ಬ್ರಹ್ಮಚಾರಿಗೆ ತನ್ನ ಆಯುಸ್ಸನ್ನೆಲ್ಲ ಗುರುವಿನ ಪರಿಚರ್ಯೆಯಿಂದಲೇ ದೇಹವನ್ನು ಸವೆಯಿಸುವ ಆಶ್ರಮದಲ್ಲಿರಬೇಕೆಂಬ ಅಭಿಲಾಷೆಯಿರುವದೋ ಅವನು ನೈಷ್ಠಿಕಬ್ರಹ್ಮಚಾರಿಯೆನಿಸುತ್ತಾನೆ. ಗೃಹಸ್ಥನಾದವನು ದೇವಋಣ, ಪಿತೃಋಣ, ಋಷಿಋಣ–ಈ ಮೂರನ್ನೂ ತೀರಿಸಿದ ಬಳಿಕ ವಿರಕ್ತನಾಗಿ ತಪಸ್ಸಿನಿಂದಲೇ ಜೀವನವನ್ನು ಕಳೆಯಬೇಕೆಂದು ವನವಾಸಕ್ಕೆ ಹೊರಟರೆ, ಅವನಿಗೆ ವಾನಪ್ರಸ್ಥಾಶ್ರಮವು ಉಚಿತವಾಗುವದು. ಕಾಡಿನಲ್ಲಿದ್ದು ಗೆಡ್ಡೆಗೆಣಸುಗಳನ್ನೂ ನೀವಾರಾದಿಧ್ಯಾನಗಳನ್ನೂ ಉಂಡು ತೃಪ್ತಿಯನ್ನು ತಂದುಕೊಂಡು ಶರೀರವನ್ನು ಕೃಚ್ಛ್ರ, ಚಾಂದ್ರಾಯಣ– ಮುಂತಾದ ತಪೋವಿಶೇಷಗಳಿಂದ ಸವೆಯಿಸುತ್ತಾ ಶರೀರವು ಜರ್ಝರಿತವಾಗಿ

ತಪಸ್ಸನ್ನು ಮಾಡುವದಕ್ಕೆ ಅಶಕ್ತವೆಂದು ಕಂಡಾಗ ಶಾಸ್ತ್ರೋಕ್ತರೀತಿಯಿಂದ ಶರೀರವನ್ನು ತ್ಯಾಗಮಾಡುವವನು ವಾನಪ್ರಸ್ಥನು.

ಈ ಮೂರು ಆಶ್ರಮದವರೂ ಧರ್ಮಕ್ಕಾಗಿಯೇ ಜೀವಿಸಿಕೊಂಡಿದ್ದು ತಾವು ಅನುಸರಿಸುವ ಧಾರ್ಮಿಕಜೀವನದಿಂದ ಪುಣ್ಯಲೋಕಗಳನ್ನು ಪಡೆಯುವರು. ಆದರೆ ಯಾವನಿಗೆ ಬ್ರಹ್ಮಚರ್ಯ, ಗಾರ್ಹಸ್ಥ್ಯ ಅಥವಾ ವಾನಪ್ರಸ್ಥಾಶ್ರಮ– ಈ ಮೂರರಲ್ಲಿ ಯಾವದಾದರೊಂದರಲ್ಲಿ ಇರುವಾಗಲೇ ಮನುಷ್ಯಲೋಕ, ಪಿತೃಲೋಕ, ದೇವಲೋಕ– ಎಂಬ ಕರ್ಮಸಾಧ್ಯವಾದ ಲೋಕಗಳಲ್ಲಿ ಪುಣ್ಯಫಲಗಳನ್ನು ಅನುಭವಿಸುವ ವಿಷಯಕ್ಕೆ ವೈರಾಗ್ಯವುಂಟಾಗುವದೋ ಅವನು ಸಕಲಕರ್ಮಗಳನ್ನೂ ಸಂನ್ಯಾಸಮಾಡಿ ವೇದಗಳನ್ನೆಲ್ಲ ಪ್ರಣವದಲ್ಲಿ ಪ್ರವೇಶಮಾಡಿಕೊಂಡು ಬ್ರಹ್ಮವೇ ಎಲ್ಲಕ್ಕೂ ಹೆಚ್ಚಿನ ತತ್ತ್ವವೆಂದರಿತು ಆ ಬ್ರಹ್ಮವನ್ನು ಓಂಕಾರದ ಮೂಲಕ ಉಪಾಸನೆಮಾಡಿ ಅಥವಾ ಜ್ಞಾನದಿಂದ ಪಡೆದುಕೊಳ್ಳುವದಕ್ಕಾಗಿ ಪಾರಮಹಂಸ್ಯವೆಂಬ ಅತ್ಯಾಶ್ರಮವನ್ನು ಸ್ವೀಕರಿಸುವನು. ನಾಲ್ಕನೆಯ ಆಶ್ರಮವಾದ ಸಂನ್ಯಾಸದಲ್ಲಿ ಕುಟೀಚಕ, ಬಹೂದಕ, ಹಂಸ– ಎಂಬ ಪ್ರಭೇದಗಳನ್ನು ಸ್ಮೃತಿಗಳಲ್ಲಿ ಹೇಳಿರುತ್ತದೆ. ಆದರೆ ಈ ಲೋಕದ ಮತ್ತು ಪರಲೋಕದ –ಎಲ್ಲಾ ಭೋಗಗಳಲ್ಲಿಯೂ ವಿರಕ್ತನಾಗಿ ಶಮಾದಿಸಾಧನಸಂಪನ್ನನಾಗಿ ಎಲ್ಲಾ ಬಗೆಯ ಸಂಸಾರಬಂಧದಿಂದಲೂ ಮುಕ್ತನಾಗಬೇಕೆಂಬ ಇಚ್ಛೆಯಿರುವವನು ಪಾರಮಹಂಸ್ಯವೆಂಬ ಆಶ್ರಮವನ್ನೇ ಸ್ವೀಕರಿಸುತ್ತಾನೆ.

ಈವರೆಗೆ ಹೇಳಿದ ವರ್ಣಾಶ್ರಮಧರ್ಮಗಳನ್ನು ಅನುಷ್ಠಾನಮಾಡಬೇಕೆಂದು ಇಚ್ಛಿಸುವವರು ತಮ್ಮತಮ್ಮ ವರ್ಣದ ಕರ್ಮಗಳನ್ನು ಮಾಡಿದರೆ ಯಾವ ಫಲವಾಗುವದು ? ಎಂದರೆ **'ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲ–ಧರ್ಮಾಯುಃಶ್ರುತವೃತ್ತಸುಖಮೇಧಸೋ ಜನ್ಮ ಪ್ರತಿಪದ್ಯಂತೇ'** (ಗೌ. ಸ್ಮೃ. ೨–೨೯) ಆಯಾ ವರ್ಣಾಶ್ರಮದ ಕರ್ಮದ ಫಲವನ್ನು ಪರಲೋಕದಲ್ಲಿ ಅನುಭವಿಸಿ ಕರ್ಮಶೇಷಕ್ಕೆ ಅನುಗುಣವಾಗಿ ದೇಶ, ಜಾತಿ, ಕುಲ, ಧರ್ಮ, ಆಯುಸ್ಸು, ಸುಖ, ಜ್ಞಾನ–ಇವುಗಳಿಂದ ಕೂಡಿ ಆಯಾ ಜನ್ಮವನ್ನು ಪಡೆಯುತ್ತಾರೆ–ಎಂದು ಸ್ಮೃತಿಯಲ್ಲಿ ಹೇಳಿರುತ್ತದೆ. ಆದರೆ ಮುಮುಕ್ಷುಗಳಾದವರಿಗೆ ಈ ಫಲಗಳ ಭೋಗದ ಆಶೆಯು ಇರುವದಿಲ್ಲವಾದ್ದರಿಂದ ಅವರು ಪ್ರವೃತ್ತಿಧರ್ಮದ ಫಲವಾಗಿ ಜ್ಞಾನಸಂಪಾದನೆಗೆ ತಕ್ಕ ನಿವೃತ್ತಿಧರ್ಮವನ್ನೇ ಅನುಸರಿಸುತ್ತಾರೆ. ಈ ವಿಷಯವನ್ನು ಮತ್ತೆ ವಿಚಾರಕ್ಕೆ ತೆಗೆದುಕೊಳ್ಳೋಣ. ವರ್ಣವಿಭಾಗದಂತೆಯೇ ಆಶ್ರಮವಿಭಾಗವೂ ನಿವೃತ್ತಿಧರ್ಮದಲ್ಲಿರುವ ಉತ್ಕಟೇಚ್ಛೆಯ ಅಂತಸ್ತನ್ನು

ಅನುಸರಿಸಿ ಏರ್ಪಟ್ಟಿರುತ್ತದೆ. ಈ ಗುಟ್ಟನ್ನರಿತು ನಮ್ಮನಮ್ಮ ಮನಸ್ಸಿನ ಅಂತಸ್ಥಿತಿಗೆ ತಕ್ಕ ಆಶ್ರಮವನ್ನು ಸ್ವೀಕರಿಸುವದು ಶ್ರೇಯಸ್ಕರವೆಂಬುದನ್ನು ನಾವು ಮರೆಯದೆ ಇರಬೇಕು.

## ೧೩. ದೈವಾಸುರಪ್ರಕೃತಿಗಳು

(11—8—69)

ಶಾಸ್ತ್ರಪ್ರವೃತ್ತಿಗೆ ಶ್ರದ್ಧೆಯು ಅತ್ಯಾವಶ್ಯ ಎಂಬುದನ್ನು ಕೆಲವು ದಿನಗಳಿಂದ ಹೇಳುತ್ತಾ ಬಂದಿದ್ದೇನೆ. ಈಗ್ಗೆ ನಮಗೆ ಬುದ್ಧಿಯು ಹೆಚ್ಚುತ್ತಾ ಬಂದು ತಲೆ ದಪ್ಪನಾಗಿ ಹೃದಯವು ದಿನದಿನಕ್ಕೂ ಸಂಕುಚಿತವಾಗುತ್ತಾ ಬರುತ್ತಿದೆ. ಆದ್ದರಿಂದಲೇ ನಮಗೆ ಅತಿಪ್ರಿಯವಾದ ಧರ್ಮಭಕ್ತಿಜ್ಞಾನವೈರಾಗ್ಯಾದಿಗಳ ತತ್ತ್ವವು ಮನಸ್ಸಿಗೆ ಹಿಡಿಯುವದು ಕಷ್ಟವಾಗುತ್ತಾ ಬಂದಿರುತ್ತದೆ. ಮನುಷ್ಯನ ಸಂಸ್ಕಾರಕ್ಕನುಸಾರವಾಗಿ ಧನ-ಬುದ್ಧಿಯೋ ಸ್ವಾರ್ಥ-ಬುದ್ಧಿಯೋ ಉತ್ಪನ್ನವಾಗಿ ತೋರಿಕೊಳ್ಳುತ್ತದೆ. ಜನಾಂಗಗಳಲ್ಲಿಯೂ ಹೀಗೆಯೇ ಕಾಲಾನುಗುಣವಾಗಿ ಶ್ರದ್ಧಾದಿಗಳ ವಿಕಾಸವೋ, ಹ್ರಾಸವೋ ಆಗುತ್ತಿರುತ್ತದೆ, ಬಡವರಾದವರು ಸಂಕಟಪಡುತ್ತಿದ್ದರೂ ನಮ್ಮಲ್ಲನೇಕರಿಗೆ ಬಡವರೂ ಇದಾರೆ ಎಂಬ ಅರಿವೇ ಇರುವದಿಲ್ಲ. ಭಿಕ್ಷುಕರಲ್ಲಿಯೂ ಹೀಗೆಯೇ ಹೊರಗೆ ತಾವು ನಿರ್ಗತಿಕರೆಂದು ತೋರಿಸಿಕೊಂಡು ಹೇಗಾದರೂ ನಟನೆಯಿಂದ ಜನರಲ್ಲಿ ಮರುಕವನ್ನು ಹುಟ್ಟಿಸಿ ಅನ್ನವಸ್ತ್ರಾದಿಗಳನ್ನು ಸಂಪಾದಿಸಿಕೊಳ್ಳಬೇಕು– ಎಂದು ದುರ್ಬುದ್ಧಿಯು ಅಂಕುರಿಸುತ್ತಿದೆ.

ಇಂದ್ರಿಯವೃತ್ತಿಗಳಿಗೆ ಅಧಿಷ್ಠಾತೃಗಳಾಗಿ ದೇವತೆಗಳೂ ಅಥವಾ ದುಷ್ಟಬುದ್ಧಿಯ ಕಡೆಗೆ ಎಳೆಯುವ ಅಸುರರೂ ಇರುತ್ತಾರೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ದೇವತೆಗಳಿಗೂ ಅಸುರರಿಗೂ ಆದ ಸ್ಪರ್ಧೆಯನ್ನು ವರ್ಣಿಸಿದೆ. ಅಲ್ಲಿ ಭಾಷ್ಯಕಾರರು ಹೇಳಿರುವದೇನೆಂದರೆ : ಪ್ರಜಾಪತಿಯ ಹಿಂದಿನ ಜನ್ಮದಲ್ಲಿ ಅವನ ಅಂತಃಕರಣದಲ್ಲಿದ್ದ ವಾಗಾದಿವೃತ್ತಿಗಳು ದೇವತೆಗಳೆಂದೂ ಅಸುರರೆಂದೂ ಎರಡು ತಂಡಗಳಾಗಿದ್ದರು. ಅವರೊಳಗೆ ದೇವತೆಗಳು ಕಡಿಮೆ ; ಅಸುರರು ಬಹಳ. ಶಾಸ್ತ್ರದಿಂದುಂಟಾದ ಜ್ಞಾನಕರ್ಮಭಾವಿತರಾದವರು ದೇವತೆಗಳು ; ಸ್ವಾಭಾವಿಕವಾದ ಪ್ರತ್ಯಕ್ಷಾನುಮಾನಗಳಿಂದುಂಟಾದ ದೃಷ್ಟಫಲವುಳ್ಳ ಕರ್ಮಜ್ಞಾನಗಳಿಂದ ಭಾವಿತರಾದವರೇ ಅಸುರರು. ಏಕೆಂದರೆ ಅವರು ತಮ್ಮನ್ನು ತಾವು ಕಾಪಾಡಿ

ಕೊಳ್ಳುವವರಲ್ಲಿಯೇ ರತರಾಗಿರುತ್ತಾರೆ. ಇಂದ್ರಿಯವೃತ್ತಿಗಳು ಎದ್ದುಕೊಳ್ಳುವವು ಜಯ; ಅಡಗಿಕೊಳ್ಳುವವು ಪರಾಜಯ. ಯಾವಾಗ ಶಾಸ್ತ್ರಜನಿತ ಕರ್ಮಜ್ಞಾನಸಭಾವಿತವಾದ ಬುದ್ಧಿಯು ಎದ್ದುಕೊಳ್ಳುವದೋ ಆಗ ದೇವತೆಗಳಿಗೆ ಜಯ; ಯಾವಾಗ ದೃಷ್ಟಫಲವುಳ್ಳ ಕರ್ಮಜ್ಞಾನಸಭಾವಿತವಾದ ವೃತ್ತಿಯು ಎದ್ದುಕೊಳ್ಳುವದೋ ಅದೇ ಅಸುರರ ಜಯ.

ಇದು ಈಗಲೂ ನಡೆಯುವ ಸ್ಪರ್ಧೆ. ನಮ್ಮಲ್ಲಿ ಕೆಲವರು ದೈವಪ್ರಕೃತಿಯವರಾಗಿರುತ್ತೇವೆ, ಇನ್ನು ಕೆಲವರು ಅಸುರಪ್ರಕೃತಿಯವರು. ಒಂದೇ ಮನೆಯಲ್ಲಿ ಹುಟ್ಟಿದ ಇಬ್ಬರು ಅಣ್ಣತಮ್ಮಂದಿರೊಳಗೆ ಅಣ್ಣನು ದೈವಪ್ರಕೃತಿಯವನೂ ತಮ್ಮನು ಅಸುರಪ್ರಕೃತಿಯವನೂ ಆಗಿರಬಹುದು. ವ್ಯಾಧನೊಬ್ಬನು ಒಂದೇ ಗಿಳಿಯ ಎರಡು ಮರಿಗಳಲ್ಲಿ ಒಂದನ್ನು ಕಟುಕರವನಿಗೂ ಇನ್ನೊಂದನ್ನು ಒಬ್ಬ ಬಡ ಬ್ರಾಹ್ಮಣನಿಗೂ ಮಾರಿದ್ದನಂತೆ. ಒಬ್ಬ ಪರಸ್ಥಳದವನು ಕಟುಕರವನ ಮನೆಯ ಜಗಲಿಯಮೇಲೆ ಕುಳಿತಿರುವಲ್ಲಿ ಅಲ್ಲಿದ್ದ ಗಿಳಿಯ ಮರಿಯು ಹೊಡೆಯಿರೊ, ಒದೆಯಿರೊ! ಇಲ್ಲೇಕೆ ಬಂದ?' ಎಂದುಮುಂತಾಗಿ ಕ್ರೌರ್ಯದ ಮಾತುಗಳನ್ನು ಆಡಿತು; ಅದೇ ದಾರಿಹೋಕನು ಬ್ರಾಹ್ಮಣನ ಮನೆಯ ಜಗುಲಿಯಮೇಲೆ ತಂಗಿದಾಗ 'ಬನ್ನಿ, ವಿಶ್ರಮಿಸಿಕೊಳ್ಳಿರಿ; ಸ್ನಾನಮಾಡಬೇಕೆ? ಆಯಾಸವಾಗಿದೆಯೆ? ಎಲ್ಲಿಂದ ಬಂದಿರಿ?' ಎಂದುಮುಂತಾಗಿ ಸತ್ಕಾರದ ಮಾತುಗಳನ್ನಾಡಿತಂತೆ! ಹೇಗೆ ಆಯಾ ಮನೆಯವರ ಸ್ವಭಾವದಿಂದ ಪ್ರಭಾವಿತವಾಗಿದ್ದ ಆ ಗಿಳಿಗಳು ಆಯಾ ಪ್ರಕಾರದ ಭಾಷೆಯನ್ನೇ ಕಲಿತುಕೊಂಡವೋ ಹಾಗೆಯೇ ದೈವಪ್ರಕೃತಿಯವರು ಸೌಮ್ಯಸ್ವಭಾವದವರಾಗಿರುತ್ತಾರೆ; ಆಸುರಪ್ರಕೃತಿಯವರು ಕ್ರೂರಿಗಳಾಗಿರುತ್ತಾರೆ.

ಇದನ್ನು ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ವಿವರಿಸಿರುತ್ತದೆ. ಅಲ್ಲಿ ದೈವಪ್ರಕೃತಿಯನ್ನು ವರ್ಣಿಸಿರುವದು ಹೇಗೆಂದರೆ :

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥**
**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಮಾರ್ಜವಂ ಹ್ರೀರಚಾಪಲಮ್ ॥**
**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವನ್ತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥** ೧೬—೧ರಿಂದ ೩

ಅಂಜಿಕೆಯಿಲ್ಲದಿರುವದು, **ಸತ್ತ್ವಸಂಶುದ್ಧಿ** ಎಂದರೆ ವ್ಯವಹಾರದಲ್ಲಿ ಮೋಸ, ಕಾಪಟ್ಯ, ಸುಳ್ಳು— ಮುಂತಾದವುಗಳಿಲ್ಲದಿರುವದು ; ಜ್ಞಾನಯೋಗಗಳಲ್ಲಿಯೇ

ನಿಲ್ಲುವದು ಎಂದರೆ ಶಾಸ್ತ್ರದಿಂದಲೂ ಸದ್ಗುರುಗಳಿಂದಲೂ ಆತ್ಮಾದಿತತ್ತ್ವಗಳನ್ನು ಅರಿತುಕೊಳ್ಳುವದಕ್ಕೂ ಅರಿತುಕೊಂಡದ್ದರಲ್ಲಿಯೇ ಮನಸ್ಸನ್ನು ಏಕಾಗ್ರತೆಯಿಂದ ನಿಲ್ಲಿಸಿಕೊಳ್ಳುವದಕ್ಕೂ ಪ್ರಯತ್ನಿಸುತ್ತಿರುವದು– ಇವೇ ಮುಂತಾದವುಗಳು ದೈವ ಪ್ರಕೃತಿಯು ನಮ್ಮಲ್ಲಿ ಎದ್ದುಕೊಂಡಿದೆ ಎಂಬುವದಕ್ಕೆ ಮುಖ್ಯವಾದ ಗುರುತುಗಳು. ತನ್ನಲ್ಲಿರುವ ಅನ್ನವಸ್ತ್ರಾದಿಗಳನ್ನು ಪಾತ್ರರಿಗೆ ಕೊಡುವದು, ದಮ ಎಂದರೆ ಇಂದ್ರಿಯ ಗಳನ್ನು ಹಿಡಿತದಲ್ಲಿಟ್ಟುಕೊಳ್ಳುವದು, ಯಜ್ಞ ಎಂದರೆ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಅಗ್ನಿಹೋತ್ರಾದಿಗಳನ್ನೂ ದೇವಯಜ್ಞಾದಿಗಳನ್ನೂ ಅನುಷ್ಠಾನಮಾಡುತ್ತಿರು ವದು ಮತ್ತು ಸ್ವಾಧ್ಯಾಯ ಎಂದರೆ ಕರ್ಮಕ್ಕೆ ಬೇಕಾದ ವೇದಾಧ್ಯಯನ, ತಪಸ್ಸು ಎಂದರೆ ತ್ರಿಕರಣಗಳನ್ನು ಶುದ್ಧವಾದ ರೀತಿಯಲ್ಲಿಟ್ಟುಕೊಳ್ಳುವದು, ಆರ್ಜವ– ಎಂದರೆ ಯಾವಾಗಲೂ ನಡೆನುಡಿಗಳಲ್ಲಿ ಕೌಟಿಲ್ಯವಿಲ್ಲದೆ ಇರುವದು– ಇವುಗಳು ದೈವೀಸಂಪತ್ತಿನ ಕಾರ್ಯಗಳು.

ಇನ್ನು ಅಹಿಂಸೆ– ಪ್ರಾಣಿಗಳನ್ನು ಗೋಳಾಡಿಸದೆ ಇರುವದು ; ಸತ್ಯ ಎಂದರೆ ಯಥಾರ್ಥವಚನ : ಅಕ್ರೋಧ, ಸಿಟ್ಟುಬಂದರೂ ತಡೆದುಕೊಳ್ಳುವದು ; ತ್ಯಾಗ, ಎಂದರೆ ಕರ್ಮಸಂನ್ಯಾಸ : ಶಾಂತಿ, ಎಂದರೆ ಅಂತಃಕರಣವನ್ನು ಹಿಡಿತದಲ್ಲಿಟ್ಟು ಕೊಳ್ಳುವದು, 'ಅಪೈಶುನಮ್' ಒಬ್ಬರ ದೋಷವನ್ನು ಮತ್ತೊಬ್ಬರಲ್ಲಿ ಎತ್ತಿ ಆಡದೆ ಇರುವದು, ಪ್ರಾಣಿಗಳಲ್ಲಿಯೂ ದುಃಖಿತರಾದವರಲ್ಲಿಯೂ ದಯೆ, ವಿಷಯ ಲೋಲುಪನಾಗದೆ ಇರುವದು, ಮೃದುವಾಗಿರುವ ನಡತೆ, ನಾಚಿಕೆ, ಇಂದ್ರಿಯಗಳ ಚಾಪಲ್ಯವಿಲ್ಲದಿರುವದು– ಇವೂ ದೈವಸಂಪತ್ತಿನ ಗುರುತುಗಳು.

ಇವುಗಳಲ್ಲದೆ ತೇಜಸ್ಸು, ಕಾರ್ಯದಲ್ಲಿ ದಕ್ಷನಾಗಿರುವದು, ಕ್ಷಮೆ, ಎಂದರೆ ಸಹನಶೀಲತೆ ; ಧೃತಿ ಎಂದರೆ ದೇಹೇಂದ್ರಿಯಾದಿಗಳನ್ನು ಕುಸಿಯಬಿಡದಿರುವದು, ಶರೀರದಲ್ಲಿಯೂ ಮನಸ್ಸಿನಲ್ಲಿಯೂ ಶುಚಿಯಾಗಿರುವದು, ಮತ್ತೊಬ್ಬರಿಗೆ ದ್ರೋಹ ವನ್ನು ಬಗೆಯದಿರುವದು, ಅತ್ಯಭಿಮಾನವಿಲ್ಲದಿರುವದು – ಇವೆಲ್ಲ ದೈವಸಂಪತ್ತಿನ ಗುರುತು. ನಮ್ಮ ಅಂತಃಕರಣದಲ್ಲಿ ಇಂಥ ಒಲವುಗಳು ಇವೆಯೆ ?– ಎಂಬುದನ್ನು ಮತ್ತೆಮತ್ತೆ ನೋಡಿಕೊಳ್ಳುವದು ಒಂದು ದೊಡ್ಡ ಸಾಧನ.

ಇನ್ನು ಆಸುರಸಂಪತ್ತಿನ ವಿಚಾರ. ಈ ಕಾಲಕ್ಕೆ ಆಸುರಸಂಪತ್ತಿನವರೇ ಬಹಳವಿರುತ್ತಾರೆ. ಆಸುರಪ್ರಕೃತಿಯ ಜನರಿಗೆ ಪ್ರವೃತ್ತಿ, ನಿವೃತ್ತಿ– ಯಾವದನ್ನು ಮಾಡಬೇಕು, ಯಾವದನ್ನು ಮಾಡಬಾರದು –ಎಂಬುದೇ ತಿಳಿದಿರುವದಿಲ್ಲ, ಶುಚಿಯಾಗಿರುವದೆಂದರೇನು, ಸದಾಚಾರವು ಯಾವದು ?– ಎಂಬುದರ ಅರಿವೇ ಅವರಿಗಿರುವದಿಲ್ಲ : ಸತ್ಯವಂತೂ ಅವರಿಗೆ ದೂರ. ಈ ಲೋಕವೆಲ್ಲ ಅನೃತಪ್ರಾಯ ವಾಗಿದೆ: ಇದಕ್ಕೆ ಧರ್ಮದ ಆಧಾರವೇ ಇಲ್ಲ; ದೇವನೊಬ್ಬನೂ ಇಲ್ಲ: ಕಾಮದಿಂದಲೇ

ಜಗತ್ತು ಹುಟ್ಟಿದೆ ಎಂಬುದು ಅವರ ನಿಶ್ಚಯ. ಒಮ್ಮೆ ಹೊಸದಾಗಿ ಒಂದು ಉದ್ಯೋಗಕ್ಕೆ ಪ್ರಾರಂಭಿಸುವಾತನಿಗೆ ತಿಳಿವಳಿಕೆಹೇಳಬೇಕೆಂದು ಒಬ್ಬ ಹಳೆಯ ಉದ್ಯೋಗಸ್ಥರನ್ನು ಕೇಳಿಕೊಂಡದ್ದಕ್ಕೆ "ನಿಜವನ್ನು ಹೇಳಿ ಕೆಲಸವನ್ನು ಮಾಡುತ್ತೇನೆ ಎಂಬ ಸಂಕಲ್ಪವನ್ನು ಮೊದಲು ಬಿಡಿರಿ!" ಎಂದು ಅವರು ಹೇಳಿದರು. ಸತ್ಯವನ್ನಾಡಿದರೆ ವ್ಯವಹಾರವು ಸಾಗುವದಿಲ್ಲವೆಂಬುದೇ ಅವರ ತೀರ್ಮಾನವಾಗಿತ್ತು! ಅಸುರರು ತಮ್ಮ ದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡು ಜನರಿಗೆ ತೊಂದರೆಯನ್ನು ಮಾಡುವದರಲ್ಲಿಯೇ ನಿರತರಾಗಿರುತ್ತಾರೆ. ಕಾಮ, ದಂಭ, ಅಭಿಮಾನ, ಮದ–ಇವುಗಳನ್ನು ಇಟ್ಟುಕೊಂಡು ತಮ್ಮ ಕೊಳಕಿನ ದಾರಿಯಲ್ಲಿಯೇ ಅವರು ನಡೆಯುತ್ತಿರುತ್ತಾರೆ. ಅವರಿಗೆ ಆಶೆಗಳು ಹೆಚ್ಚು, ಕಾಮಕ್ರೋಧಗಳೇ ಜೀವನಕ್ಕೆ ಸಾಧನ. ಅನ್ಯಾಯದಿಂದ ಅರ್ಥವನ್ನು ರಾಶಿಹಾಕಿಕೊಳ್ಳುವದೇ ಜೀವನದ ಗುರಿ; ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ– ಇವುಗಳನ್ನಿಟ್ಟುಕೊಂಡಿರುವವರಾದ್ದರಿಂದ ಎಲ್ಲರಲ್ಲಿಯೂ ಒಬ್ಬ ಈಶ್ವರನು ಇದ್ದಾನೆ ಎಂಬ ನಂಬಿಕೆಯೇ ಅವರಿಗಿರುವದಿಲ್ಲ. ತಮ್ಮ ಪ್ರಕೃತಿಯಿಂದ ಮತ್ತೆಮತ್ತೆ ಆಸುರಜನ್ಮವನ್ನೇ ಪಡೆದು ಸಕಲಪುರುಷಾರ್ಥಗಳಿಂದಲೂ ಅವರು ವಂಚಿತರಾಗುವರು.

ದೈವಪ್ರಕೃತಿಯೂ ಆಸುರಪ್ರಕೃತಿಯೂ ಬೇರೆಬೇರೆಯ ಜನರಿಗೇ ಹಂಚಿಕೊಂಡಿರುವದಿಲ್ಲ; ಒಬ್ಬೊಬ್ಬರಲ್ಲಿಯೇ ಕಾಲಕಾಲಕ್ಕೆ ಅವು ಎದ್ದುಕೊಳ್ಳುತ್ತಿರುವವು. ಸಾಧಕರಾದವರು ತಮ್ಮಲ್ಲಿ ಆಗಾಗ್ಗೆ ಎದ್ದುಕೊಳ್ಳುವ ಆಸುರಗುಣಗಳನ್ನು ಕುಗ್ಗಿಸಿಕೊಳ್ಳಬೇಕು; ದೈವಗುಣಗಳನ್ನು ಬೆಳೆಯಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಮುಖ್ಯವಾಗಿ ಶಾಸ್ತ್ರದೃಷ್ಟಿಯನ್ನೇ ಅವಲಂಬಿಸಿ 'ಇದು ಮಾಡಬಾರದ್ದು, ಏಕೆಂದರೆ ಶಾಸ್ತ್ರದಲ್ಲಿ ಇದನ್ನು ಮಾಡಕೂಡದೆಂದಿದೆ: ಇದು ಮಾಡಬೇಕಾದದ್ದು, ಏಕೆಂದರೆ ಶಾಸ್ತ್ರದಲ್ಲಿ ವಿಹಿತವಾಗಿದೆ'– ಎಂಬ ದೃಢನಿಶ್ಚಯದಿಂದ ತಮ್ಮ ಸ್ವಭಾವವನ್ನು ತಿದ್ದಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿರಬೇಕು. ಭಗವದ್ಗೀತೆಯಂಥ ಆಧ್ಯಾತ್ಮಿಕ ಶಾಸ್ತ್ರವನ್ನು ಸುಮ್ಮನೆ ಓದಿದರೆ ಸಾಲದು; ಇದು ಭಗವಂತನು ಅರ್ಜುನನಿಗೆ ಮಾಡಿದ ಉಪದೇಶ; ಇದರಂತೆ ನಡೆಯುವದರಿಂದ ನನಗೆ ಶ್ರೇಯಸ್ಸಾಗುವದು– ಎಂಬ ನಂಬಿಕೆಯಿಂದ ಗ್ರಂಥವನ್ನು ಪಠಿಸಬೇಕು. 'ಶ್ರೀಭಗವಾನುವಾಚ' ಎಂಬ ವಾಕ್ಯವು ಬಂದಾಗಲೆಲ್ಲ, ಕಿವಿಗೊಟ್ಟು 'ಭಗವಂತನ ವಾಕ್ಯವಿದು; ನನಗೇ ಈ ಉಪದೇಶವನ್ನು ಮಾಡುತ್ತಿದ್ದಾನೆ'– ಎಂಬ ಶ್ರದ್ಧಾತಿಶಯದಿಂದ ಗ್ರಂಥವನ್ನು ಪಾರಾಯಣಮಾಡಬೇಕು. ಆಗಲೇ ನಾವು ನಮ್ಮ ಪ್ರಕೃತಿಯಲ್ಲಿ ಸಂಸ್ಕಾರವನ್ನುಂಟುಮಾಡಿಕೊಳ್ಳುವದಕ್ಕೆ ಸಾಧ್ಯವಾದೀತು.

# ೧೪. ಯುಗಾನುಸಾರಿಧರ್ಮ

## (12—8—69)

ಆಸುರಸ್ವಭಾವ, ದೈವಸ್ವಭಾವ– ಇವುಗಳು ಇಂದ್ರಿಯಗಳಲ್ಲಿರುವ ಒಲವಿನಿಂದ ಉಂಟಾಗತಕ್ಕವುಗಳು. ಇದು ಆಸುರೀಸಂಪತ್ತಿನವನ ಸ್ವಭಾವ, ಇದು ದೈವಸಂಪತ್ತಿನವನ ಒಲವು– ಎಂದಿಷ್ಟೇ ಗೀತೆಯಲ್ಲಿ ಹೇಳಿದೆಯೇ ಹೊರತು ಇಂಥ ಜನರಿಗೆ, ಇಂಥ ದೇಶದಲ್ಲಿ, ಇಂಥ ಕಾಲದಲ್ಲಿ ಈ ಸ್ವಭಾವಗಳು ಬರುತ್ತವೆ ಎಂದೇನೂ ಹೇಳಿರುವದಿಲ್ಲ, ಆದ್ದರಿಂದ ಪಾಶ್ಚಾತ್ತ್ಯರಿಗೆ ಆಸುರಸಂಪತ್ತು, ಭಾರತದವರಿಗೆ ದೈವಸಂಪತ್ತು–ಎಂದಾಗಲಿ, ಹಿಂದಿನವರೆಲ್ಲ ದೈವಸಂಪತ್ತಿನವರು, ಈಗಿನ ನಾವುಗಳೆಲ್ಲ ಆಸುರಸಂಪತ್ತಿನಲ್ಲಿ ಹುಟ್ಟಿದವರು– ಎಂದಾಗಲಿ ಸಾಧಿಸುವದಕ್ಕೆ ಆಗುವದಿಲ್ಲ. ಆದರೂ ಇದರಲ್ಲಿಯೂ ಒಂದು ದೃಷ್ಟಿಯಿಂದ ಸತ್ಯಾಂಶವಿರುತ್ತದೆ: ಈಗ್ಗೆ ಇತರ ದೇಶಗಳಲ್ಲಿ ಆಸುರಪ್ರವೃತ್ತಿಗೆ ಹೆಚ್ಚು ಅವಕಾಶವಿರುತ್ತದೆ. ನಮ್ಮ ದೇಶದಿಂದ ಪರದೇಶಗಳಿಗೆ ಹೋದವರು ಅವರ ಆಧುನಿಕವೇಷಭಾಷೆಗಳನ್ನೂ ಆಚಾರಗಳನ್ನೂ ಅನುಸರಿಸಿಕೊಂಡು ಅಲ್ಲಿನ ಹೆಣ್ಣುಹೊನ್ನುಗಳಿಗೆ ಮರುಳಾಗಿ ಆಚಾರಭ್ರಷ್ಟರಾಗಿ ಬಂದವರೂ ಅನೇಕರು ಇದಾರೆ. ಇದರಂತೆ ಕಾಲಕಾಲಕ್ಕೆ ಜನರ ಸ್ವಭಾವವು ಮಾರ್ಪಡುತ್ತದೆ ಎಂದರೆ ಕೃತ, ತ್ರೇತ, ದ್ವಾಪರ, ಕಲಿ–ಎಂಬ ಯುಗಗಳು ಬದಲಾಯಿಸಿದಮೇಲೆಯೇ ಜನರ ಧರ್ಮಾಧರ್ಮಗಳ ಒಲವು ಮಾರ್ಪಡುತ್ತವೆ ಎಂದೇ ಕಟ್ಟುನಿಟ್ಟಾಗಿ ಹೇಳುವದಕ್ಕೆ ಬರುವದಿಲ್ಲ: ಬಹುಭಾಗದ ಜನರ ಸ್ವಭಾವವು ಯುಗಾನುಸಾರವಾಗಿ ಮಾರ್ಪಡುವದೂ ನಿಜ. ಅದರೆ ಈಗ ನಾವು ನೋಡುತ್ತಿರುವಂತೆಯೇ ಐವತ್ತುವರ್ಷಗಳಿಂದೀಚೆಗೆ ನಮ್ಮ ದೇಶದಲ್ಲಿಯೇ ಜನರ ಆಚಾರವಿಚಾರಗಳೂ ಧರ್ಮದೃಷ್ಟಿಯಲ್ಲಿ ಮಾರ್ಪಾಡುಗಳೂ ಆಗಿರುವದು ಕಂಡುಬರುತ್ತದೆ. ಅಲ್ಪಾವಧಿಯ ಕಾಲದಲ್ಲಿಯೇ ಕೃತತ್ರೇತಾದಿಗಳಂತೆ ಕಾಲಪರಿವರ್ತನವಾಗಿ ಜನರ ಮನೋವೃತ್ತಿಯೂ ಮಾರ್ಪಟ್ಟಿರುವದು ಕಣ್ಣಿಗೆ ಬೀಳುತ್ತಿದೆ.

ಆದ್ದರಿಂದ ಈಗ ಕಾಲವಿಪರ್ಯಯವೂ ಧರ್ಮವಿಪರ್ಯಯವೂ ಆಗಿರುವದನ್ನು ಕಂಡು 'ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಣ್ಡಿತಃ' ಎಂಬಂತೆ ಕೆಲವು ಆಚಾರಗಳು ಮಾರ್ಪಟ್ಟಿದ್ದರೂ ಅಂಜದೆ ಧರ್ಮವನ್ನು ಕಾಪಾಡಿಕೊಳ್ಳುವದಕ್ಕೆ ನಾವು ಯತ್ನಿಸಬೇಕು, ಉತ್ತಮವಾದ ಹಳೆಯ ಆಚಾರಗಳನ್ನು ಉಜ್ಜೀವನಗೊಳಿಸುವದಕ್ಕೂ ಯತ್ನಿಸಬೇಕು.

ಸಗರರಾಜನು ಔರ್ವನೆಂಬ ಬ್ರಾಹ್ಮಣನನ್ನು ಪ್ರಶ್ನಿಸಿದಾಗ ಆತನು ಕೊಟ್ಟ ಉತ್ತರವು ಮನನೀಯವಾಗಿರುತ್ತದೆ. ಅವನು ಎಲ್ಲಾ ವರ್ಣದವರೂ ಅನು

ಷ್ಠಾನಮಾಡಬೇಕಾದ ಸಾಧಾರಣಧರ್ಮಗಳನ್ನೂ ಮೇಲಿನ ವರ್ಣದವರೂ ಆಪತ್ಕಾಲಕ್ಕೆ ತಕ್ಕಂತೆ ಮಾಡಬಹುದಾದ ಧರ್ಮಗಳನ್ನೂ ವಿವರಿಸಿರುತ್ತಾನೆ.

'ಕಾಲವು ಮಾರ್ಪಡುವದೇ ಇಲ್ಲ; ಈಗಿನಂತೆಯೇ ಹಿಂದಿನವರೂ ಇಷ್ಟೇ ಪರಿಚ್ಛಿನ್ನಬುದ್ಧಿಯವರೂ ಅಶಕ್ತರೂ ಆಗಿದ್ದರು'—ಎಂದು ಹೇಳುವದು ಸಂಕುಚಿತ ದೃಷ್ಟಿ. ಈ ವಿಷಯದಲ್ಲಿ ಶ್ರೀಶಂಕರಭಗವತ್ಪಾದರವರು ಬರೆದಿರುವ ವಾಕ್ಯಗಳನ್ನು ನಾವು ಮನಸ್ಸಿನಲ್ಲಿ ಹೊರಳಾಡಿಸುವದರಿಂದ ಪ್ರಯೋಜನವುಂಟು :

'ಯಸ್ತು ಬ್ರೂಯಾತ್ ಇದಾನೀಂತನಾನಾಮಿವ ಪೂರ್ವೇಷಾಮಪಿ ನಾಸ್ತಿ ದೇವಾದಿಭಿರ್ವ್ಯವಹರ್ತುಂ ಸಾಮರ್ಥ್ಯಮ್— ಇತಿ ಸ ಜಗದ್ವೈಚಿತ್ರ್ಯಂ ಪ್ರತಿಷೇಧೇತ್। ಇದಾನೀಮಿವ ಚ ನಾನ್ಯದಾಪಿ ಸಾರ್ವಭೌಮಃ ಕ್ಷತ್ರಿಯೋಽಸ್ತೀತಿ ಬ್ರೂಯಾತ್। ತತಶ್ಚ ರಾಜಸೂಯಾದಿಚೋದನಾ ಉಪರುನ್ಧ್ಯಾತ್। ಇದಾನೀಮಿವ ಚ ಕಾಲಾನ್ತರೇಽಪಿ ಅವ್ಯವಸ್ಥಿತಪ್ರಾಯಾನ್ ವರ್ಣಾಶ್ರಮಧರ್ಮಾನ್ ಪ್ರತಿಜಾನೀತ; ತತಶ್ಚ ವ್ಯವಸ್ಥಾವಿಧಾಯಿ ಶಾಸ್ತ್ರಮ್ ಅನರ್ಥಕಂ ಸ್ಯಾತ್।ತಸ್ಮಾತ್, ಧರ್ಮೋತ್ಕರ್ಷವಶಾತ್ ಚಿರನ್ತನಾ ದೇವಾದಿಭಿ ಪ್ರತ್ಯಕ್ಷಂ ವ್ಯವಜಹ್ರುಃ-ಇತಿ ಶ್ಲಿಷ್ಯತೇ ॥' ಸೂ.ಭಾ. ೧—೩—೩೩

ಇವು ದೇವತೆಗಳೊಡನೆ ಹಿಂದಿನವರು ವ್ಯವಹರಿಸುತ್ತಿದ್ದರು— ಎಂಬ ವಿಷಯಕ್ಕೆ ಬರೆದಿರುವ ವಾಕ್ಯಗಳು. 'ಹಿಂದಿನವರಿಗೂ ಈಗಿನವರಂತೆ ಅಂಥ ವ್ಯವಹಾರವನ್ನು ಮಾಡುವದಕ್ಕೆ ಸಾಮರ್ಥ್ಯವಿರಲಿಲ್ಲ—ಎಂದು ಯಾರಾದರೂ ಆಡಿದರೆ ಹಿಂದೆಯೂ 'ಈಗಿನಂತೆ ಸಾರ್ವಭೌಮರಾಜನು ಇರಲೇ ಇಲ್ಲ' ಎಂದೂ ಅವನು ಹೇಳಿಯಾನು; ಅದರಿಂದ ರಾಜಸೂಯಯಾಗವೇ ಮುಂತಾದ ಕರ್ಮವನ್ನು ವಿಧಿಸುವ ಶಾಸ್ತ್ರಕ್ಕೆ ವಿರೋಧವಾದೀತು. ಈಗಿನಂತೆ ಹಿಂದೆಯೂ ವರ್ಣಾಶ್ರಮಧರ್ಮಗಳು ಅವ್ಯವಸ್ಥಿತವಾಗಿಯೇ ಇದ್ದಿರಬೇಕು— ಎಂದಾನು; ಆದರಿಂದ ಆ ವ್ಯವಸ್ಥೆಯನ್ನು ಹೇಳುವ ಶಾಸ್ತ್ರವು ವ್ಯರ್ಥವೆಂದಾದೀತು. ಇದೆಲ್ಲ ಸರಿಯಲ್ಲವಷ್ಟೆ? ಆದ್ದರಿಂದ ಹಿಂದಿನವರು ಧರ್ಮೋತ್ಕರ್ಷವಶದಿಂದ ದೇವತೆಗಳೊಡನೆ ಪ್ರತ್ಯಕ್ಷವಾಗಿ ವ್ಯವಹರಿಸುತ್ತಿದ್ದರು—ಎಂದು ತಿಳಿಯುವದು ಯುಕ್ತವಾಗಿರುತ್ತದೆ' ಎಂಬುದು ಭಾಷ್ಯ ವಾಕ್ಯದ ಅರ್ಥ. ಈ ವಾಕ್ಯದ ಅರ್ಥವನ್ನು ಮನಸ್ಸಿನಲ್ಲಿ ಹೊರಳಾಡಿಸಿದರೆ ಆಚಾರ್ಯರ ಕಾಲಕ್ಕೇ ವರ್ಣಾಶ್ರಮಧರ್ಮಗಳು ಅವ್ಯವಸ್ಥಿತವಾಗಿದ್ದವೆಂದು ಅವರು ಎಣಿಸಿದ್ದರೆಂದು ಹೇಳಬೇಕಾಗುತ್ತದೆ. ಹೀಗಿರುವಾಗ ನಮ್ಮ ಕಾಲದ ಸ್ಥಿತಿಯು ತೀರ ಹದಗೆಟ್ಟಿದೆ ಎಂಬುದಕ್ಕೆ ಅಡ್ಡಿಯೇನಿದೆ? ಇದನ್ನು ಹೇಳುವದು ಏಕೆಂದರೆ ನಮ್ಮ ಸಮಾಜಸ್ಥಿತಿಯು ಎಷ್ಟೇ ಕೆಟ್ಟಿದ್ದರೂ ಇದನ್ನು ಸುಧಾರಿಸುವ

ದಕ್ಕೆ ಅವಕಾಶವು ಇದ್ದೇಇದೆ. 'ಮನೆಗೆ ಬೆಂಕಿಬಿದ್ದಿದೆ' ಎಂದರೆ 'ಹೋಗಲಿ ಬಿಡಿ!' ಎಂದು ಯಾರೂ ಉದಾಸೀನರಾಗುವದಿಲ್ಲ; ಈಗಲೆ ಬೆಂಕಿಯನ್ನು ಆರಿಸುವ ಪ್ರಯತ್ನವನ್ನು ಮಾಡಬೇಕು– ಎಂಬುದೇ ಹೇಳಿದವರ ಆಶಯ. ಅಲ್ಲವೆ !

ಈಗ ಔರ್ವನು ಸಗರರಾಜನಿಗೆ ಹೇಳಿದ್ದರ ಅರ್ಥವನ್ನು ವಿಮರ್ಶಿಸುವ ದಕ್ಕೆ ಆರಂಭಿಸಬಹುದಾಗಿದೆ.

ಬ್ರಾಹ್ಮಣಾದಿಗಳ ಧರ್ಮವನ್ನು ಬೇರೆಬೇರೆಯಾಗಿ ವರ್ಣಿಸಿದ ಬಳಿಕ ;

ದಯಾ ಸಮಸ್ತಭೂತೇಷು ತಿತಿಕ್ಷಾ ನಾತಿಮಾನಿತಾ ।
ಸತ್ಯಂ ಶೌಚಮನಾಯಾಸೋ ಮಙ್ಗಲಂ ಪ್ರಿಯವಾದಿತಾ ॥
ಮೈತ್ರ್ಯಸ್ಪೃಹಾ ತಥಾ ತದ್ವದಕಾರ್ಪಣ್ಯಂ ನರೇಶ್ವರ ।
ಅನಸೂಯಾ ಚ ಸಾಮಾನ್ಯವರ್ಣಾನಾಂ ಕಥಿತಾ ಗುಣಾಃ ॥

ಇಲ್ಲಿ ಹೇಳಿರುವಂತೆ ಸಮಸ್ತಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸುವದು, ಶೀತೋಷ್ಣಾದಿಗಳನ್ನು ಸಹಿಸುವದು, ಅಮಾನಿತ್ವ, ಸತ್ಯವನ್ನು ನುಡಿಯುವದು, ಶುಚಿಯಾಗಿರುವದು, ಶರೀರಕ್ಕೆ ಅನವಶ್ಯಕವಾಗಿ ಆಯಾಸವನ್ನು ಕೊಡದೆ ಇರುವದು, ಮಂಗಲಕರವಾದ ಕರ್ಮಗಳನ್ನು ಆಚರಿಸುವದು, ಪ್ರಿಯವಾದ ವಚನವನ್ನೇ ಆಡುತ್ತಿರುವದು, ಜನರಲ್ಲಿ ಮಿತ್ರಭಾವದಿಂದ ವರ್ತಿಸುವದು, ಅತ್ಯಾಶೆ ಇಲ್ಲದಿರುವದು, ದೈನ್ಯವನ್ನು ತ್ಯಜಿಸುವದು, ಮತ್ತೊಬ್ಬರಲ್ಲಿ ಅಸೂಯೆಯಿಲ್ಲದಿರುವದು– ಇವು ವರ್ಣಗಳೆಲ್ಲಕ್ಕೂ ಸಾಮಾನ್ಯಧರ್ಮಗಳು.

ಪ್ರತಿಯೊಬ್ಬನೂ ತನ್ನತನ್ನ ಧರ್ಮವನ್ನು ಕಾಪಾಡಿಕೊಂಡುಬರಬೇಕು. ಆದರೆ ಆಪತ್ಕಾಲದಲ್ಲಿ ಮತ್ತೊಬ್ಬರ ಕರ್ಮವನ್ನು ಸ್ವಲ್ಪಮಟ್ಟಿಗೆ ಅನುಸರಿಸಬಹುದಾಗುವದು. ಹೇಗೆಂದರೆ ಇದನ್ನು ಔರ್ವನು ಹೀಗೆ ಹೇಳಿರುತ್ತಾನೆ :

ಗುಣಾಂಸ್ತಥಾಪದ್ಧರ್ಮಾಂಶ್ಚ ವಿಪ್ರಾದೀನಾಮಿಮಾನ್ ಶೃಣು ।
ಕ್ಷಾತ್ರಂ ಕರ್ಮ ದ್ವಿಜಸ್ಯೋಕ್ತಂ ವೈಶ್ಯ ಕರ್ಮ ತಥಾಪದಿ ॥
ರಾಜನ್ಯಸ್ಯ ಚ ವೈಶ್ಯೋಕ್ತಂ ಶೂದ್ರಕರ್ಮ ನ ಚೈತಯೋಃ ।
ಸಾಮರ್ಥ್ಯೇ ಸತಿ ತತ್ತ್ಯಾಜ್ಯಮುಭಾಭ್ಯಾಮಪಿ ಪಾರ್ಥಿವ ।
ತದೇವಾಪದಿ ಕರ್ತವ್ಯಂ ನ ಕುರ್ಯಾತ್ ಕರ್ಮಸಙ್ಕರಮ್ ॥

ವಿ. ಪು. ೩–೮–೩೮ ರಿಂದ ೪೦

ಬ್ರಾಹ್ಮಣನಾದವನು ಆಪತ್ತಿನಲ್ಲಿ ಕ್ಷಾತ್ರಧರ್ಮವನ್ನಾಗಲಿ ವೈಶ್ಯಧರ್ಮವನ್ನಾಗಲಿ ಅನುಸರಿಸಬಹುದು, ಹೀಗೆಯೇ ಕ್ಷತ್ರಿಯರು ವೈಶ್ಯಧರ್ಮವನ್ನು

ಅನುಸರಿಸಬಹುದು. ಆದರೆ ಈ ಕ್ಷತ್ರಿಯವೈಶ್ಯರುಗಳು ಶೂದ್ರಕರ್ಮಕ್ಕೆ ಹೋಗಬಾರದು. ಆಪತ್ಕಾಲದಲ್ಲಿ ಹೀಗೆ ಬೇರೆಯ ಧರ್ಮವನ್ನು ಅನುಸರಿಸಬಹುದಾಗಿದ್ದರೂ ಆಪತ್ತಿಲ್ಲದ ಕಾಲದಲ್ಲಿ ಎಲ್ಲರೂ ತಮ್ಮತಮ್ಮ ವರ್ಣದ ಕರ್ಮವನ್ನೇ ಮಾಡಬೇಕು.

ಈ ಅಭಿಪ್ರಾಯವನ್ನು ಭೀಷ್ಮಾಚಾರ್ಯರೂ ಧರ್ಮರಾಯನ ಪ್ರಶ್ನೆಗೆ ಉತ್ತರವನ್ನು ಹೇಳುವ ಸಂದರ್ಭದಲ್ಲಿ ಪ್ರಕಟಿಸಿರುತ್ತಾರೆ. ಧರ್ಮರಾಯನು –ವರ್ಣಾಶ್ರಮಧರ್ಮದ ವ್ಯವಸ್ಥೆಯಿಲ್ಲದ ದಸ್ಯುಗಳ ರಾಜ್ಯವನ್ನು ಕ್ಷತ್ರಿಯನಾದ ರಾಜನು ಸ್ವಾಧೀನಪಡಿಸಿಕೊಂಡಾಗ ಅಲ್ಲಿಯ ಪ್ರಜೆಗಳನ್ನು ಯಾವ ಧರ್ಮದಲ್ಲಿ ಇಡಬೇಕು ?–ಎಂದು ಕೇಳಿದ್ದಕ್ಕೆ ಭೀಷ್ಮರು 'ವರ್ಣಾಶ್ರಮವಿಲ್ಲದ ಜನಾಂಗಗಳಲ್ಲಿ ಪ್ರಜೆಗಳು ಹಿತಕರವಾದ ಆಚಾರಗಳನ್ನಿಟ್ಟುಕೊಂಡಿದ್ದಿದ್ದರೆ ಅವುಗಳನ್ನು ರಕ್ಷಿಸುವದು ರಾಜನ ಧರ್ಮ ; ಅವರಲ್ಲಿ ಯಾವ ಧರ್ಮದ ನಿಯಮಗಳೂ ಇಲ್ಲದಿದ್ದರೆ ದಶಧರ್ಮಗಳನ್ನು ಒತ್ತಾಯದಿಂದ ನಡೆಯಿಸಿಕೊಂಡುಬರುವಂತೆ ಅವರನ್ನು ಕಟ್ಟುಮಾಡಬೇಕು' ಎಂದು ಅವರು ಉತ್ತರವನ್ನು ಕೊಟ್ಟಿರುತ್ತಾರೆ.

'ಆಪತ್ತಿನಲ್ಲಿ ಸ್ವಧರ್ಮವನ್ನು ಕಾಪಾಡಿಕೊಳ್ಳುವದಕ್ಕೆ ಆಗದೆ ಇರುವಾಗ ಯತ್ನಸಾಧ್ಯವಾದಷ್ಟುಮಟ್ಟಿಗೆ ಮಾಡಿಕೊಂಡರಾಯಿತು'– ಎಂಬುದನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಆಖ್ಯಾನದಿಂದ ತೋರಿಸಿರುತ್ತದೆ. ಕುರುದೇಶದಲ್ಲಿ ಒಮ್ಮೆ ಆಲಿಕಲ್ಲುಗಳ ಮಳೆ ಸುರಿದು ಪೈರುಗಳು ವಿನಾಶವಾಗಲಾಗಿ ಇನ್ನೂ ಚಿಕ್ಕವಯಸ್ಸಿನವಳಾದ ಹೆಂಡತಿಯೊಡನೆ ಉಷಸ್ತಿಚಾಕ್ರಾಯಣನೆಂಬ ಬ್ರಾಹ್ಮಣನು ಒಂದು ಮಾವಟಿಗರ ಹಳ್ಳಿಯಲ್ಲಿ ಸಂಚರಿಸುತ್ತಿದ್ದನು. ಅವನಿಗೆ ಹಸಿವಾದಾಗ ಮಾವಟಿಗನೊಬ್ಬನು ಹುರುಳಿಯನ್ನು ಊಟಕ್ಕೆ ಬಡಿಸಿಕೊಂಡು ಕುಳಿತಿರುವಲ್ಲಿ 'ನನಗಷ್ಟು ಕೊಡು' ಎಂದು ಯಾಚಿಸಿದನು. 'ಈ ತಟ್ಟೆಯಲ್ಲಿ ಬಡಿಸಿಕೊಂಡಿರುವಷ್ಟೇ ಕಾಳು ನನ್ನಲ್ಲಿದೆ, ಏನು ಮಾಡಲಿ !' ಎಂದು ಮಾವಟಿಗನು ಪಶ್ಚಾತ್ತಾಪವನ್ನು ತೋರಿಸಲು 'ಅದರಲ್ಲಿಯೇ ಸ್ವಲ್ಪ ಕೊಡು' ಎಂದು ಬ್ರಾಹ್ಮಣನು ಕೇಳಿಕೊಂಡನು. ಆಗ ಮಾವಟಿಗನು ತಟ್ಟೆಯಲ್ಲಿದ್ದ ಹುರುಳಿಯಲ್ಲಿಯೇ ಸ್ವಲ್ಪ ಭಾಗವನ್ನು ತೆಗೆದುಕೊಡಲು ಬ್ರಾಹ್ಮಣನು ಅದನ್ನೇ ತಿಂದು ಮುಂದಕ್ಕೆ ಹೊರಡುತ್ತಿರುವಲ್ಲಿ ಆ ಮಾವಟಿಗನು 'ಕುಡಿಯುವದಕ್ಕೆ ನೀರು ಬೇಡವೆ, ಸ್ವಾಮಿ ?' ಎಂದನು. ಬ್ರಾಹ್ಮಣನು 'ಬೇಡ, ನಿನ್ನ ಉಚ್ಛಿಷ್ಟವದು' ಎಂದನು. ಮಾವಟಿಗನು 'ಈ ಹುರುಳಿಯೂ ಉಚ್ಛಿಷ್ಟವೇ ಅಲ್ಲವೆ ?' ಎಂದು ಶಂಕಿಸಿದ್ದಕ್ಕೆ ಬ್ರಾಹ್ಮಣನು 'ಇದನ್ನು ತಿನ್ನದೆಇದ್ದರೆ ನನ್ನ ಪ್ರಾಣವೇ ಹೋಗಿಬಿಡುತ್ತಿತ್ತು; ಕುಡಿಯುವದಕ್ಕೆ ನೀರು ಮತ್ತೆಲ್ಲಿಯಾದರೂ ಸಿಕ್ಕಿಯೇಸಿಕ್ಕುತ್ತದೆ' ಎಂದು ಉತ್ತರವನ್ನು ಕೊಟ್ಟನಂತೆ ! ಮಾರನೆಯದಿನವೂ ಚಾಕ್ರಾಯಣನು

ಉಳಿದಿದ್ದ ಆ ತಂಗುಳುಕುರುಳಿಯನ್ನೇ ತಿಂದು ಪ್ರಯಾಣವನ್ನು ಮುಂದುವರಿಸಿದನು. ಅವನೇನೂ ಸಾಮಾನ್ಯಬ್ರಾಹ್ಮಣನಲ್ಲ. ಸಮೀಪದಲ್ಲಿಯೇ ಒಬ್ಬ ರಾಜನು ಮಾಡುತ್ತಿದ್ದ ಯಜ್ಞಕ್ಕೆ ಹೋದಾಗ ಅಲ್ಲಿ ಯಜ್ಞಕ್ಕೆ ಬಂದ ಋತ್ವಿಜರು ಯಾರಿಗೂ ತಿಳಿಯದೆ ಇದ್ದ ಪ್ರಸ್ತಾವದೇವತೆ, ಉದ್ಗೀಥದೇವತೆ, ಪ್ರತಿಹಾರದೇವತೆ–ಇವುಗಳ ಉಪಾಸನೆಯ ರಹಸ್ಯವನ್ನು ತಿಳಿದಿದ್ದ ಮಹಾತ್ಮನಿವನೆಂದು ತಿಳಿದುಬಂದಿತು ! ಇಂಥ ಮಹಾತ್ಮನುಕೂಡ ನೀಚಜಾತಿಯವನ ಉಚ್ಛಿಷ್ಟವಾದ ಮತ್ತು ಅವನಲ್ಲಿಯೂ ತಂಗಳಾದ ಹುರುಳಿಯ ಅಂಶವನ್ನು ಆಪತ್ತಿನಲ್ಲಿ ತಿಂದನು; ಅದರಿಂದ ಅವನ ತೇಜಸ್ಸಿಗೆ ಯಾವ ಹಾನಿಯೂ ಆಗಲಿಲ್ಲ !– ಎಂದು ಶ್ರುತಿಯಲ್ಲಿ ಸೂಚಿಸಿರುವದರಿಂದ ಆಪತ್ಕಾಲವು ಬಂದಿರುವಾಗ ಧರ್ಮದಲ್ಲಿ ಸ್ವಲ್ಪ ಸಂಕೋಚವಾದರೂ ಬಾಧಕವಿಲ್ಲ !–ಎಂಬುದು ಸೂಚಿತವಾಗುತ್ತದೆ.

ಪುರಾಣದಲ್ಲಿಯೂ 'ಆಯಾ ಯುಗಕ್ಕೆ ತಕ್ಕಂತೆ ಧರ್ಮಸಂಕೋಚವನ್ನು ಮಾಡಿದರೂ ಚಿಂತೆಯಿಲ್ಲ; ಶಕ್ತ್ಯನುಸಾರವಾಗಿ ಮಾಡಿದ ಧರ್ಮಾಚರಣೆಯಿಂದಲೇ ಹೆಚ್ಚಿನ ಫಲವಾಗುವದು'–ಎಂದು ಸ್ಪಷ್ಟವಾಗಿ ಹೇಳಿರುತ್ತದೆ.

ಧ್ಯಾಯನ್ ಕೃತೇ ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽ–
ರ್ಚಯನ್
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥

'ಕೃತಯುಗದಲ್ಲಿ ಧ್ಯಾನಮಾಡುವದರಿಂದ ಯಾವ ಫಲವು ಬರುತ್ತದೆಯೋ, ತ್ರೇತಾಯುಗದಲ್ಲಿ ಯಜ್ಞಗಳನ್ನು ಮಾಡುವದರಿಂದ ಯಾವ ಫಲವು ದೊರಕುತ್ತದೆಯೋ ದ್ವಾಪರದಲ್ಲಿ ಅರ್ಚನೆಮಾಡಿದರೆ ಯಾವ ಫಲವು ಲಭಿಸುವದೋ, ಅಷ್ಟೇ ಫಲವು ಕಲಿಯುಗದಲ್ಲಿ ಭಗವಂತನ ನಾಮವನ್ನು ಸಂಕೀರ್ತನೆಮಾಡುವದರಿಂದಲೇ ದೊರಕುವದು' ಎಂದು ಹೇಳಿರುತ್ತದೆ. ಇದರಿಂದ ನಾವು ಅರ್ಚನಾದಿಸಾಧನಗಳನ್ನು ಈಗಿನ ಕಾಲಕ್ಕೆ ಮಾಡಬೇಕಾದದ್ದಿಲ್ಲವೆಂದು ತಿಳಿಯಬಾರದು. ಯಾವಚ್ಛಕ್ತಿಯಾಗಿ ಸಾಧನವನ್ನು ಮಾಡಿದರೆ ಸಾಕು, ಅಷ್ಟರಿಂದಲೇ ಭಗವತ್ಪ್ರೀತಿಯಾಗುವದು ; ಮಹಾಫಲವೂ ದೊರಕುವದು– ಎಂಬುದೇ ಇಲ್ಲಿ ತಿಳಿಯಬೇಕಾದದು.

# ೧೫. ವರ್ಣಾಶ್ರಮಧರ್ಮವೂ ಉಪಾಸನೆಯೂ

(13—8—69)

ಈಗ ಕೆಲವು ದಿವಸಗಳಿಂದ ವರ್ಣಾಶ್ರಮಧರ್ಮವನ್ನೇ ಕುರಿತು ಮಾತಾಡುತ್ತಾ ಬಂದಿರುತ್ತೇನೆ. ಇದೇಕೆಂಬುದು ಕೆಲವರಿಗೆ ತಿಳಿಯದೆ ಇರಬಹುದು. ಆದ್ದರಿಂದ ನನ್ನ ಆಶಯವನ್ನು ಸ್ಫುಟಗೊಳಿಸುವದಕ್ಕಾಗಿ ಈ ದಿನ ಕೆಲವು ವಾಕ್ಯಗಳನ್ನು ಹೇಳಬೇಕಾಗಿದೆ.

ಇಂದ್ರಿಯಗೋಚರವಾದ ಭಾಗ, ಅತೀಂದ್ರಿಯತತ್ತ್ವಗಳ ಭಾಗ– ಎಂದು ಪ್ರಪಂಚವು ಎರಡು ಭಾಗಗಳಾಗಿ ನಿಂಗಡಿಸಿಕೊಂಡಿದೆ. ಪ್ರತ್ಯಕ್ಷಗೋಚರವಾಗಿ–ರುವ ವಸ್ತುಗಳ ವಿಷಯದ ಪರಿಚಯವೇ ಹೆಚ್ಚುತ್ತಿರುವ ಈಗಿನ ಕಾಲದವರಿಗೆ ಅತೀಂದ್ರಿಯಪ್ರಪಂಚಭಾಗವೂ ಇದೆ ಎಂದರೆ ಆಶ್ಚರ್ಯವಾಗುತ್ತದೆ. ಇದಕ್ಕೊಂದು ದೃಷ್ಟಾಂತವನ್ನು ಹೇಳಬಹುದು. ಹಿಂದಿನ ಕಾಲದಲ್ಲಿ ಗಡಿಯಾರಗಳೇ ಇರಲಿಲ್ಲ; ಆಗ್ಗೆ ಗಳಿಗೆಯ ಬಟ್ಟಲುಗಳುಮಾತ್ರವೇ ಬಳಕೆಯಲ್ಲಿದ್ದವು. ಹೀಗಿರುವಲ್ಲಿ ಒಂದು ಹಳ್ಳಿಯಲ್ಲಿ ಒಬ್ಬ ಯುವಕನು ಒಂದು ಗಡಿಯಾರವನ್ನು ಕೊಂಡುಕೊಂಡು ಬಂದನು. ಅದು ಒಂದೇಸಮನೆ ಟಿಕ್ ! ಟಿಕ್ ! ಎಂದು ಸದ್ದುಮಾಡುತ್ತಿದ್ದದ್ದನ್ನು ಕಂಡು ಸೋಜಿಗದಿಂದ ಮನೆಯ ಮುದುಕಿ 'ಇದನ್ನು ಏಕೆ ತಂದೆಯಪ್ಪ? ಇದು ಮನೆಗೆ ಶುಭಸೂಚನೆಯಲ್ಲ, ಇದನ್ನು ಮತ್ತೆಲ್ಲಿಗಾದರೂ ಕಳುಹಿಸಿಬಿಡು!' ಎಂದು ಎಷ್ಟುಸಲ ಹೇಳಿದರೂ ಅವನು 'ಪಾಪ ! ಮುದುಕಿಗೆ ಏನೂ ತಿಳಿಯದು!' ಎಂದುಕೊಂಡು ಸುಮ್ಮನೆ ಇದ್ದುಬಿಟ್ಟನು. ಆದರೆ ಮುದುಕಿಯು ಮನಸ್ಸಿನಲ್ಲಿ'ಈ ಪ್ರಾಣಿ ನಮ್ಮ ಮನೆಯಲ್ಲಿದ್ದರೆ ನಮಗೆ ಒಳ್ಳೆಯದಾಗಲಾರದು, ಏನುಮಾಡಲಿ !', ಎಂದು ಯೋಚಿಸುತ್ತಾ ಇದ್ದು ಮಗನು ಎಲ್ಲಿಗೋ ಹೋಗಿದ್ದಾಗ ಅದನ್ನು ಕೀಲು ತಿರುಗಿಸಿ 'ಈ ಪ್ರಾಣಿಯು ಸತ್ತು ಹೋದಲ್ಲದೆ ನಮಗೆ ಒಳ್ಳೆಯದು ಆಗಲೇ ಆರದು' ಎಂದುಕೊಂಡು ಅದನ್ನು ಒಂದು ಹಾಳುಬಾವಿಗೆ ಹಾಕಿಬಿಟ್ಟಳಂತೆ ! ಹೀಗೆಯೇ ನಮಗೆ ಋಷಿಗಳು ಅತೀಂದ್ರಿಯವಾದ ತತ್ತ್ವಗಳನ್ನು ಹೇಳಿದರೆ ಆಶ್ಚರ್ಯವಾಗುತ್ತದೆ. ಅಂಥ ತತ್ತ್ವಗಳು ಇರುವ ಸಂಭವವೇಇಲ್ಲ ; ಒಂದುವೇಳೆ ಇದ್ದರೆ ಎಲ್ಲರಿಗೂ ಏತಕ್ಕೆ ಅವು ಕಾಣಿಸುವದಿಲ್ಲ ? ಆದ್ದರಿಂದ ಅವುಗಳ ಗೋಜಿಗೆ ಹೋಗದೆ ಇರುವದೇ ಕ್ಷೇಮಕರ !– ಎಂಬುದು ಪ್ರಾಕೃತರ ಭಾವನೆ !

ಸಾಮಾನ್ಯರಿಗೆ ತಿಳಿಯದ ಹೊಸ ವಿಷಯಗಳ ಜ್ಞಾನವೆಲ್ಲ ಹೀಗೆಯೇ ಮೊದಮೊದಲುಆಶ್ಚರ್ಯಕರವಾಗಿರುತ್ತದೆ. ಬೀಜವನ್ನುಹಾಕಿದರೆ ಅದು ಮೊಳೆತು, ಚಿಗುರಿ, ಬೆಳೆದುಕೊಂಡು, ಮೊಗ್ಗು, ಹೂವು, ಹಣ್ಣು– ಮುಂತಾದವುಗಳನ್ನು ಹೇಗೆ ಕೊಡುತ್ತದೆ?–ಎಂಬುದರ ತತ್ತ್ವ ನಮಗೆ ಗೊತ್ತಾಗುವದಿಲ್ಲ. ಇದರ

ನಿಜವನ್ನು ಸಸ್ಯಶಾಸ್ತ್ರಜ್ಞರು ಶೋಧನೆಮಾಡಿ ನಮಗೆ ತಿಳಿಸಿಕೊಡುತ್ತಾರೆ. ಹೀಗೆಯೇ ಪಶುಮೃಗಪಕ್ಷ್ಯಾದಿಪ್ರಾಣಿಗಳು ಹುಟ್ಟುವದು, ಬಗೆಬಗೆಯಾದ ಸ್ವಭಾವವನ್ನು ತೋರ್ಪಡಿಸುವದು– ಮುಂತಾದ ತತ್ತ್ವಗಳನ್ನು ಪ್ರಾಣಿಶಾಸ್ತ್ರಜ್ಞರು ನಮಗೆ ತಿಳಿಸಿಕೊಟ್ಟಮೇಲೆಯೇ ಅವರ ವಿಶೇಷಜ್ಞಾನವು ನಮಗೆ ಆಗುತ್ತದೆ. ಮನುಷ್ಯನಾಗಿರುವದು ಬೆಳೆಯುವದು, ಜ್ಞಾನವಂತನಾಗುವದು, ಅವನ ಶರೀರದ ರಚನೆ, ಶರೀರದ ಅವಯವಗಳ ಕೃತ್ಯಗಳು, ಶರೀರದೊಳಗೆ ಆಗುತ್ತಿರುವ ರಕ್ತಸಂಚಾರ– ಮುಂತಾದವುಗಳನ್ನು ಶರೀರರಚನಾಶಾಸ್ತ್ರವನ್ನು ಶರೀರಾವಯವಗಳ ಕೃತ್ಯದ ಶಾಸ್ತ್ರವನ್ನು ಬಲ್ಲವರು ತಿಳಿಸಿಕೊಟ್ಟಮೇಲೆಯೇ ನಮಗೆ ಅವುಗಳ ಅರಿವು ಆಗುತ್ತದೆ. ಹೀಗೆಯೇ ಕ್ರಿಮಿಕೀಟಾದಿಗಳ ತತ್ತ್ವವನ್ನು ಅವುಗಳ ಸೂಕ್ಷ್ಮಣಾದಿಗಳಿಂದ ಶೋಧನೆಮಾಡಿದ ಶಾಸ್ತ್ರಜ್ಞರು ತಿಳಿಸಿಕೊಟ್ಟಮೇಲೆಯೇ ನಮಗೆ ಅವುಗಳ ಅರಿವು ಸ್ಪಷ್ಟವಾಗಿ ಆಗುತ್ತದೆ.

ಅತೀಂದ್ರಿಯಪ್ರಪಂಚಭಾಗದ ವಿಷಯವನ್ನೂ ಹೀಗೆಯೇ ತಿಳಿಯಬೇಕು. ಅವುಗಳನ್ನು ಕಂಡುಹಿಡಿದ ಋಷಿಗಳು ಮಾತ್ರವೇ ನಮಗೆ ತಿಳಿಯಿಸಿಕೊಡಬೇಕು. ಸಾಮಾನ್ಯಜನರಿಗೆ ಇಂದ್ರಿಯಗಳ ಮೂಲಕ ಆಯಾ ಕಾಲದಲ್ಲಿ ಆಗುವ ಘಟನೆಗಳು ಮಾತ್ರ ಗೋಚರವಾಗುತ್ತವೆ. ಆದರೆ ಅತಿದೂರದಲ್ಲಿರುವ ಅಥವಾ ಕಾಲತ್ರಯದಲ್ಲಿ ಆಗುವ ಘಟನೆಗಳುಕೂಡ ಭರದ್ವಾಜಾದಿಋಷಿಗಳಿಗೆ ಗೋಚರವಾಗುತ್ತಿದ್ದವೆಂದು ಪುರಾಣಾದಿಗಳಲ್ಲಿ ಹೇಳಿದುತ್ತದೆ. ಯೋಗಿಪ್ರತ್ಯಕ್ಷದಲ್ಲಿ ಶ್ರದ್ಧೆಯಿರುವವರಿಗೆ ಮಾತ್ರವೇ ಆ ವೃತ್ತಾಂತದಲ್ಲಿ ನಂಬಿಕೆಯಾದೀತೇ ಹೊರತು ಮಿಕ್ಕವರಿಗೆ ಆಗದು. ಸಾಮಾನ್ಯರು ಅವುಗಳೆಲ್ಲ ಕಟ್ಟುಕಥೆಗಳೆಂದೇಹೇಳಿಬಿಟ್ಟಾರು !

ಋತುಮಾನಕ್ಕೆ ತಕ್ಕಂತೆ ನಮ್ಮ ಆಹಾರ, ವೇಷ, ಆಚರಣೆ– ಮುಂತಾದವುಗಳನ್ನು ಹೇಗೆ ಮಾರ್ಪಡಿಸಿಕೊಳ್ಳುವದು ಅವಶ್ಯವೋ ಹಾಗೆಯೇ ಅತೀಂದ್ರಿಯವಾದ ಧರ್ಮಾಧರ್ಮಗಳು, ದೇವತೆಗಳು– ಮುಂತಾದವರ ವಿಷಯಕ್ಕೆ, ಅನುಸರಿಸಬೇಕಾದ ಸಂಧ್ಯಾದ್ಯನುಷ್ಠಾನಗಳು, ಯಜ್ಞಾದಿಗಳ ಆಚರಣೆ– ಇವಕ್ಕೆಲ್ಲ ಅರ್ಥವಿದೆ ಎಂಬುದು ಅತೀಂದ್ರಿಯಪ್ರಪಂಚದ ನಿಯಮಗಳನ್ನು ಬಲ್ಲವರಿಗೆ ಮಾತ್ರವೇ ಮನವರಿಕೆಯಾದೀತೇ ಹೊರತು ಮಿಕ್ಕವರಿಗೆ ಎಂದಿಗೂ ಅರ್ಥವಾಗುವದಿಲ್ಲ. ಸಂಧ್ಯಾವಂದನೆಯಲ್ಲಿ ಮಾಡುವ ಮಾರ್ಜನೆ, ಅರ್ಘ್ಯಪ್ರದಾನ, ಜಪ–ಮುಂತಾದವುಗಳ ತತ್ತ್ವವೇನೆಂಬುದನ್ನು ಆಯಾ ಕರ್ಮಗಳನ್ನು ಮಾಡುವಾಗ ತೋರ್ಪಡಿಸುವ ಬಾಹ್ಯವರ್ತನೆಯಿಂದ ನಿಶ್ಚಯಿಸುವದಕ್ಕಾದೀತೇನು ?

ಹೊರಗೆ ಕಾಣುವ ಸ್ಥೂಲವಸ್ತುಗಳಂತೆ ಇಂದ್ರಿಯಗಳಿಗೆ ಗೋಚರವಾಗುವದಿಲ್ಲವೆಂಬ ಒಂದೇ ಕಾರಣದಿಂದ ಕಾಮ, ಕ್ರೋಧ, ಮಾತ್ಸರ್ಯ, ಆಶ್ಚರ್ಯ,

ಭಯ—ಮುಂತಾದವುಗಳು ಇಲ್ಲವೆನ್ನಲಾದೀತೆ ? ಅವು ಇವೆಯೆಂಬುದು ನಮ್ಮೆಲ್ಲ ರಿಗೂ ಅನುಭವದಿಂದ ಗೊತ್ತಾಗುತ್ತಿದೆ. ಯಾರು ತಮ್ಮೊಳಗೆ ತಾವು ನೋಡಿ ಕೊಳ್ಳುವ ಅಭ್ಯಾಸವನ್ನು ಇಟ್ಟುಕೊಂಡಿಲ್ಲವೋ ಅವರಿಗೆ ಧರ್ಮ, ಅಧರ್ಮ— ಮುಂತಾದ ಶಬ್ದಗಳಿಗೆ ಎಂದಿಗೂ ಅರ್ಥವಾಗಲಾರದು. **ದಶಧರ್ಮಗಳನ್ನು** ಎಲ್ಲಾ ವರ್ಣದವರೂ ಪಾಲಿಸಬೇಕು— ಎಂದು ನಿನ್ನೆಯದಿವಸ ಹೇಳಿದೆನಲ್ಲವೆ ? ಅವುಗಳನ್ನು ಆಚರಿಸಲು ಯತ್ನಿಸುವವರಿಗೆ ಈಶ್ವರನ ಅಸ್ತಿತ್ವದಲ್ಲಿ ಶ್ರದ್ಧೆಯು ಬೇಕು.

ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿನ್ದತಿ ತಚ್ಛೃಣು ॥
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥

ಗೀ. ೧೮—೪೫, ೪೬

ಎಂದು ಗೀತೆಯಲ್ಲಿ ಹೇಳಿರುವಂತೆ ಪ್ರಾಣಿಗಳೆಲ್ಲವೂ ಈಶ್ವರನಿಂದಲೇ ಹುಟ್ಟಿ ಈಶ್ವರನ ಅನುಗ್ರಹದಿಂದಲೇ ಸ್ವಸ್ವವ್ಯಾಪಾರದಲ್ಲಿ ಪ್ರವೃತ್ತವಾಗಿರುವವು. ಮಂಜಿನ ಗಡ್ಡೆಯಲ್ಲಿ ಎಲ್ಲೆಲ್ಲಿಯೂ ನೀರೇ ವ್ಯಾಪಿಸಿಕೊಂಡಿರುವಂತೆ ಈ ಜಗತ್ತಿನಲ್ಲೆಲ್ಲ ಈಶ್ವರನೇ ವ್ಯಾಪಿಸಿಕೊಂಡಿರುತ್ತಾನೆ. ಆತನನ್ನು ನಮ್ಮನಮ್ಮ ಕರ್ಮದಿಂದ ಅರ್ಚನೆಮಾಡಿದರೆ ಸಿದ್ಧಿಯುಂಟಾಗುತ್ತದೆ. ನಮ್ಮ ಶರೀರ, ಇಂದ್ರಿಯಗಳು, ಮನಸ್ಸು— ಎಲ್ಲವೂ ಆತನ ಸಂಕಲ್ಪವನ್ನು ಅನುಸರಿಸಿ ಹುಟ್ಟಿ ವ್ಯಾಪಾರಮಾಡು ತ್ತಿರುವವೆಂಬ ಭಾವವನ್ನು ತಳೆದು, ಅವುಗಳಲ್ಲಿ ಅಹಂತೆಯನ್ನಾಗಲಿ ಮಮತೆ ಯನ್ನಾಗಲಿ ಮಾಡದೆ ನಮ್ಮನಮ್ಮ ಕರ್ಮವನ್ನು ಮಾಡುವದೇ ಅಭ್ಯರ್ಚನೆ. ಹೀಗೆ ನಮ್ಮ ಸರ್ವಸ್ವವನ್ನೂ ಈಶ್ವರನಿಗೆ ಅರ್ಪಿಸಿ ಈಶ್ವರಭಾವದನ್ನು ಬೆಳೆಯಿಸಿ ಕೊಂಡಂತೆಲ್ಲ, ಅತೀಂದ್ರಿಯಪ್ರಪಂಚದ ಪ್ರಾಮುಖ್ಯವು ನಮಗೆ ಗೊತ್ತಾಗುವದು. ಈಶ್ವರನ ಪರಮಾರ್ಥತತ್ತ್ವವು ನಮಗೆ ಗೊತ್ತಾದಾಗ **'ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ'** (ಮುಂ. ೩—೨—೯) ಎಂಬ ವಾಕ್ಯ ದಂತೆ ನಾವು ಬ್ರಹ್ಮವೇ ಆಗಿರುವೆವೆಂಬ ಅರಿವು ಉಂಟಾಗಿಬಿಡುವದು. ಈಗ ಮೊದಲ ನೆಯದಾಗಿ ಶರೀರಾದಿಗಳನ್ನು ಈಶ್ವರನ ಸೇವೆಗೆ ತೊಡಗಿಸಬೇಕು. ಆಮೇಲೆ ನನ್ನ ಸರ್ವಸ್ವವೂ ನಿನ್ನದು ಎಂಬುದರ ಸೂಚಕವಾಗಿ ಸಾಷ್ಟಾಂಗನಮಸ್ಕಾರವನ್ನು ಮಾಡಬೇಕು. ಪರಮೇಶ್ವರತತ್ತ್ವವನ್ನು ನಿರ್ಧರಿಸುವದಕ್ಕೆ ಅನುಭವಾನುಸಾರಿ ತರ್ಕವನ್ನು ವಿನಿಯೋಗಿಸಬೇಕು. ಇದನ್ನು ಬಿಟ್ಟು ಮಕ್ಕಳಿಗೆ ಪಟಾಕಿಯನ್ನಿ ಕೊಂಡುಕೊಟ್ಟರೆ ಗುಡಿಸಲಮೇಲೆ ಹಾಕಿ ಕುಣಿದಾಡುವಂತೆ ಈಶ್ವರನು ನಮಗೆ

ಅನುಗ್ರಹಿಸಿರುವ ಇಂದ್ರಿಯಮನೋಬುದ್ಧಿಗಳನ್ನು ಬಾಹ್ಯವಿಷಯಗಳತ್ತಲೇ ತಿರುಗಿಸಿದರೆ ಆತ್ಮವಿನಾಶಕ್ಕೇ ನಾವು ಕಾರಣರಾದಂತಾಗುವದು.

ಸಮಾಜದಲ್ಲಿ ಪ್ರತಿಯೊಬ್ಬನೂ ತನ್ನತನ್ನ ಕರ್ತವ್ಯವನ್ನು ಮಾಡಿ ಹೇಗೆ ಕೃತಕೃತ್ಯನಾಗಬಹುದೆಂಬುವನ್ನು ತೋರಿಸಿಕೊಡುವದಕ್ಕೆ ವರ್ಣಾಶ್ರಮವಿಭಾಗವೆಂಬುದೊಂದು ವಿಸ್ಮಯಕಾರಿಯಾದ ವ್ಯವಸ್ಥೆಯಾಗಿದೆ. ಈ ದಿನ ನಾನು ಬೇರೊಂದು ವಿಷಯವನ್ನು ಹೇಳಬೇಕೆಂದಿದ್ದೆನಾದರೂ 'ವರ್ಣಾಶ್ರಮವಿಭಾಗವು ಜೊಳ್ಳು; ಇದರಲ್ಲೇನೂ ಕಾಲಹರಣಮಾಡುವದು ಯುಕ್ತವಲ್ಲ' ಎಂಬ ಭಾವನೆಯು ಕೆಲವರಲ್ಲಿದೆ– ಎಂಬ ಸುದ್ದಿ ನನ್ನ ಕಿವಿಗೆ ಬಿದ್ದುದರಿಂದ ಈ ವಿಷಯವನ್ನೇ ಸ್ವಲ್ಪ ಒತ್ತಿ ಈ ದಿನವೂ ಹೇಳುತ್ತೇನೆ. ಜನರಿಗೆ ಹಿತವಾದದ್ದನ್ನು ಹೇಳುವದು ಒಳ್ಳೆಯದೇ ಹೊರತು ಪ್ರಿಯವಾದದ್ದನ್ನು ಮಾತ್ರ ಆಡಿದರೆ ಸಾಲದು. ಇದು ಸಾಧಕರೆಲ್ಲರಿಗೆ ಹಿತದ ದೃಷ್ಟಿಯಿಂದ ಸರ್ವತ್ರ ಪರಮೇಶ್ವರನ ಭಾವನೆಗೆ ಪೀಠಿಕೆಯಾಗಿ ಈ ವಿಷಯವನ್ನು ಈ ದಿನ ಹೇಳುತ್ತೇನೆ.

## ೧೬. ಈಶ್ವರಾರಾಧನೆ

(14—8—69)

ನಿನ್ನೆಯ ದಿನ ನಾನು ಈಶ್ವರೋಪಾಸನೆಯನ್ನು ಕುರಿತು ಮಾತನಾಡಬೇಕಾಗಿತ್ತಾದರೂ ಕಾರಣಾಂತರದಿಂದ ವರ್ಣಾಶ್ರಮಗಳಿಗೂ ಉಪಾಸನೆಗೂ ಇರುವ ಸಂಬಂಧವನ್ನೇ ಹೇಳಿದೆನು. ಹೊರಗಿನ ವಿಷಯಗಳ ವಾಸನೆಯನ್ನು ಬಿಟ್ಟು ಈಶ್ವರನ ಅರ್ಚನೆಯ ಕ್ರಮವನ್ನು ಅರಿತರೆ ನಮಗೆ ಯಾವ ಭಯವೂ ಇರುವದಿಲ್ಲ. ಇಷ್ಟಾರ್ಥವು ದೊರಕುವದು, ಜೀವನವು ಆನಂದಮಯವಾಗುವದು, ಪರಮಪುರುಷಾರ್ಥವೇ ಕೈವಶವಾಗುವದು. ಮಾರ್ಕಂಡೇಯನಿಗೆ ಮೃತ್ಯುವಿನ ಭಯವು ತಪ್ಪಿದ್ದು, ಧ್ರುವನಿಗೆ ಧ್ರುವಪದವಿಯೇ ದೊರಕಿದ್ದು, ಪ್ರಹ್ಲಾದನಿಗೆ ಜೀವನವೆಲ್ಲವೂ ಭಗವನ್ಮಯವಾದದ್ದು–ಇವೆಲ್ಲ ಪರಮೇಶ್ವರನಿಗೆ ಶರಣಾಗತರಾದದ್ದರಿಂದಲ್ಲವೆ ಮತ್ತೇತರಿಂದಲೂ ಅಲ್ಲ. ನಮ್ಮ ದೇಶದಲ್ಲಿ ಅತ್ಯಂತ ಚಿಕ್ಕವಯಸ್ಸಿನ ಬಾಲಕರೂ ಬಾಹ್ಯದೃಷ್ಟಿಯನ್ನು ತ್ಯಜಿಸಿ ಭಗವಂತನ ಕಡೆಗೆ ತಿರುಗಿದರೆಂಬುದೊಂದು ಹೆಮ್ಮೆಯ ವಿಷಯ. ಶ್ರೀಶಂಕರಭಗವತ್ಪಾದರವರು ತಮ್ಮ ಎಂಟನೆಯ ವರ್ಷದಲ್ಲಿಯೇ ಸರ್ವಕರ್ಮಸಂನ್ಯಾಸವನ್ನು ಮಾಡಿ

ಪ್ರತ್ಯಕ್ಷಜ್ಞಾನದತ್ತ ತಿರುಗಿದ್ದು ಎಂಥ ಅದ್ಭುತಘಟನೆ! 'ತತ್ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ' (ಯಾವುದು ಬಂಧಕವಲ್ಲವೋ ಅದೇ ಸತ್ಕರ್ಮ, ಯಾವುದು ಮುಕ್ತಿದಾಯಕವೋ ಅದೇ ಸದ್ವಿದ್ಯೆ) ಎಂಬ ಸೂಕ್ತಿಯಲ್ಲಿ ಈ ತತ್ತ್ವವು ಅಡಗಿರುತ್ತವೆ.

ಈ ದಿನ ಈಶ್ವರಾರಾಧನೆಯ ವಿಷಯವನ್ನು ಕುರಿತು ಮಾತನಾಡಬೇಕೆಂದಿದ್ದೇನೆ. ಲೋಕರೂಢಿಯ ವ್ಯವಹಾರದಲ್ಲಿ ಆರಾಧನೆ ಎಂದರೆ ಸಂನ್ಯಾಸಿಗಳ ಮೃತದಿನದಲ್ಲಿ ಮಾಡುವ ಸ್ಮರಣಾರ್ಥ ಕರ್ಮ. ಬಹುಜನ ಬ್ರಾಹ್ಮಣರಿಗೆ ಭೋಜನವನ್ನು ಏರ್ಪಡಿಸಿದ್ದರೆ ಸಮಾರಾಧನೆ ಮಾಡಿದೆವು ಎನ್ನುತ್ತಾರೆ. ಪ್ರಕೃತದಲ್ಲಿ ಈಶ್ವರಾರಾಧನೆ ಎಂದರೆ, ಈಶ್ವರತುಷ್ಟಿಗಾಗಿ ಕರ್ಮಗಳನ್ನು ಮಾಡುವದು. ಯಜ್ಞ, ದಾನ, ತಪಸ್ಸು—ಇವು ಮೂರೂ ಈಶ್ವರಾರಾಧನೆಗೆ ಸಾಧನಗಳಾಗಿರುತ್ತವೆ.

ಮನುಷ್ಯನು ಸಕಾಮನಾಗಿ ಕರ್ಮಗಳನ್ನು ಮಾಡಿದರೆ ಆಯಾ ಕಾಂಕ್ಷಿತ ಫಲವು ಅವಶ್ಯವಾಗಿ ಲಭಿಸುತ್ತದೆ, ಆದರೆ ಅವನ್ನು ಪ್ರಕಾರಾಂತರದಿಂದ ಮಾಡಿದರೆ ಅದರಿಂದ ಭಗವಂತನ ಆರಾಧನೆಯಾಗಿ ಉತ್ತಮಫಲಕ್ಕೆ ದ್ವಾರವಾಗುವದು.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ।**

ಗೀ. ೨-೪೫.

ಈ ಉಪಾಯವನ್ನು ಭಗವಂತನೇ ಹೇಳಿಕೊಟ್ಟಿರುತ್ತಾನೆ. ತ್ರೈಗುಣ್ಯವೆಂದರೆ ಸಂಸಾರವು; ಏಕೆಂದರೆ ತ್ರಿಗುಣಾತ್ಮಕವಾದ ಕರ್ಮಗಳ ಫಲವೇ ಸಂಸಾರವು. ಜನರು ಯಾವ ಕರ್ಮವನ್ನೇ ಮಾಡಲಿ, ಅದು ಸತ್ತ್ವಪ್ರಧಾನವಾದ, ರಜಃಪ್ರಧಾನವಾದ ಅಥವಾ ತಮಃಪ್ರಧಾನವಾದ ಅಂತಃಕರಣದಿಂದ ಪ್ರೇರಿತವಾಗಿರುತ್ತದೆ. ಆಯಾ ಗುಣಗಳಿಂದ ಪ್ರೇರಿತರಾದ ಜೀವರು ಆಯಾ ಫಲವನ್ನು ಪಡೆಯುತ್ತಾರೆ; ಮತ್ತೆ ಅದಕ್ಕನುಗುಣವಾಗಿ ಕರ್ಮವನ್ನು ಮಾಡುತ್ತಾ ಸಂಸಾರದಲ್ಲಿ ತೊಳಲುತ್ತಿರುತ್ತಾರೆ. ಈ ಜನ್ಮಕರ್ಮಗಳ ಬಂಧದಿಂದ ಬಿಡುಗಡೆಯಾಗಬೇಕಾದರೆ, ಸಾಧಕನಾದವನು ನಿಸ್ತ್ರೈಗುಣ್ಯನಾಗಬೇಕು. ಯಾವ ಗುಣವೂ ಇಲ್ಲದವನು ಎಂದರೆ ನಿಷ್ಕಾಮನು. ನಿಷ್ಕಾಮನಾಗುವದಕ್ಕೆ ಉಪಾಯವೇನೆಂದರೆ: ಗುಣಗಳನ್ನು ಮೀರಬೇಕು, ನಿರ್ದ್ವಂದ್ವನೂ ಆಗಬೇಕು. ನಿರ್ದ್ವಂದ್ವನು—ಎಂದರೆ ಸುಖದುಃಖಗಳಿಗೆ ಕಾರಣವಾಗಿ ಪರಸ್ಪರವಿರುದ್ಧವಾಗಿರುವ ಪದಾರ್ಥಗಳು ದ್ವಂದ್ವಗಳು; ಅವುಗಳಿಂದ ತಪ್ಪಿಸಿಕೊಂಡವನು— ಎಂದರ್ಥ. ಇಂಥ ಸ್ಥಿತಿಯನ್ನು ಪ್ರಯತ್ನದಿಂದ ಪಡೆಯಬೇಕು.

ಗುಣಗಳ ಸ್ವಭಾವವನ್ನು ಸಾಂಖ್ಯರು ಹೇಳುವ ಬಗೆ ಹೇಗೆಂದರೆ:

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥** ಗೀ. ೧೪–೫.

ಸುಖ, ಜ್ಞಾನ– ಇವುಗಳಲ್ಲಿ ಸಂಗವನ್ನುಂಟುಮಾಡಿ ಪುರುಷನನ್ನು ಕಟ್ಟಿಹಾಕುತ್ತಿರುವದು ಸತ್ತ್ವವು; ಕರ್ಮದಲ್ಲಿ ಸಂಗವನ್ನುಂಟುಮಾಡುತ್ತಿರುವದು ರಜಸ್ಸು; ಪ್ರಮಾದ, ಆಲಸ್ಯ, ನಿದ್ರೆ– ಇವುಗಳಲ್ಲಿ ಸಂಗವನ್ನುಂಟುಮಾಡಿ ಕಟ್ಟಿಹಾಕುತ್ತಿರುವದು ತಮಸ್ಸು. ಈ ಗುಣಗಳು ಒಂದೊಂದುವೇಳೆ ಪ್ರಬಲವಾಗಿ ಮಿಕ್ಕವುಗಳನ್ನು ಹಿಂದೊತ್ತರಿಸುತ್ತಿರುತ್ತವೆ; ಆದ್ದರಿಂದ ಜೀವನು ಸಾತ್ತ್ವಿಕನೋ ರಾಜಸನೋ ಅಥವಾ ತಾಮಸನೋ ಆಗುತ್ತಿರುತ್ತಾನೆ; ಇವುಗಳ ಸಂಮಿಶ್ರಣವಾದ ಈ ಜಗತ್ತಿನಲ್ಲಿರುವ ಚೇತನಾಚೇತನಾತ್ಮಕವಾದ ಪದಾರ್ಥಗಳೆಲ್ಲವೂ ಗುಣಮಯವಾಗಿರುವವು. ಯಾವ ಗುಣವು ಪ್ರಬಲವಾದಾಗ ಮರಣವನ್ನು ಹೊಂದುವನೋ ಅವನು ಅದಕ್ಕನುಗುಣವಾದ ಜನ್ಮವನ್ನು ಪಡೆಯುತ್ತಿರುವನು; ಉತ್ತಮಮಧ್ಯಮಾಧಮಜನ್ಮಗಳಾಗುವದಕ್ಕೆ ಇದೇ ಕಾರಣವು.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥**

ಭೂಲೋಕದಲ್ಲಾಗಲಿ, ಅಂತರಿಕ್ಷದಲ್ಲಾಗಲಿ, ದೇವಲೋಕದಲ್ಲಾಗಲಿ– ಈ ಮೂರು ಗುಣಗಳ ವ್ಯಾಪ್ತಿಗೆ ಒಳಪಡದ ಪ್ರಾಣಿಯಾಗಲಿ, ಪದಾರ್ಥವೇ ಆಗಲಿ– ಇರುವದೇ ಇಲ್ಲ. ಆದ್ದರಿಂದ ನಾವು ಮಾಡುವ ಕರ್ಮವು ತಮೋಗುಣರಜೋಗುಣಗಳ ಸಂಬಂಧವಿಲ್ಲದೆ, ಶುದ್ಧಸತ್ತ್ವಪ್ರಧಾನವಾಗಿರುವಂತೆಯೂ, ಆ ಕರ್ಮವು ದ್ವಂದ್ವಗಳಿಲ್ಲದೆ, ರಾಗದ್ವೇಷಾದಿಗಳ ಸಂಪರ್ಕವಿಲ್ಲದೆ, ಈಶ್ವರನಿಗೆ ಅರ್ಪಿತವಾಗಿ ಇರುವಂತೆಯೂ ನೋಡಿಕೊಂಡರೆ, ಈ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಬಹುದು.

ಎಲ್ಲಾ ಕರ್ಮಗಳೂ ಸಾತ್ತ್ವಿಕ, ರಾಜಸ, ತಾಮಸ– ಈ ಮೂರರಲ್ಲಿ ಒಂದಾಗಿರಲೇಬೇಕಾಗಿರುವದರಿಂದ ನಮ್ಮ ಯಜ್ಞದಾನತಪಸ್ಸುಗಳು ಸಾತ್ತ್ವಿಕವಾಗಿರುವಂತೆ ನೋಡಿಕೊಳ್ಳುವದು ಆವಶ್ಯ. ಇವುಗಳು ಸಾತ್ತ್ವಿಕವೆಂಬುದಕ್ಕೆ ಇರಬೇಕಾದ ಲಕ್ಷಣಗಳನ್ನು ಹೀಗೆ ಗೀತೆಯಲ್ಲಿ ವರ್ಣಿಸಿದೆ :

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃಸಮಾಧಾಯ ಸ ಸಾತ್ತ್ವಿಕಃ ॥** ಗೀ. ೧೭–೧೧

ಫಲದ ಆಕಾಂಕ್ಷೆಯಿರಬಾರದು, ಶಾಸ್ತ್ರದಲ್ಲಿ ವಿಧಿಸಿರುವದಕ್ಕೆ ಸ್ವಲ್ಪವೂ ನ್ಯೂನಾತಿರೇಕವಿಲ್ಲದಂತೆ ಮಾಡಬೇಕು, 'ಇದನ್ನು ಮಾಡಬೇಕು, ಆದ್ದರಿಂದ ಮಾಡುತ್ತೇನೆ'

ಎಂದು ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿಟ್ಟುಕೊಂಡು ಮಾಡಬೇಕು. ಹೀಗಾದರೆ ಅದು ಸಾತ್ತ್ವಿಕಯಜ್ಞವೆನಿಸುತ್ತದೆ. ಯಜ್ಞಕ್ಕೆ ಹೋತೃ, ಉದ್ಗಾತೃ, ಅಧ್ವರ್ಯು–ಎಂಬ ಮೂವರು ಋತ್ವಿಜರು ಬೇಕು ; ಅವರ ಸಹಾಯಕ್ಕೆ ಇತರ ಋತ್ವಿಜರೂ ಇರುತ್ತಾರೆ. ಈ ಒಬ್ಬೊಬ್ಬರಿಗೂ ಇಂತಿಷ್ಟು ಗೋವುಗಳ ದಕ್ಷಿಣೆಯನ್ನು ಕೊಡುವೆನೆಂದು ವಾಗ್ದಾನಮಾಡಿ ಯಜಮಾನನು ಯಜ್ಞಕ್ಕೆ ಸಹಾಯಕರನ್ನಾಗಿ ಅವರನ್ನು ಕರೆದಿರುತ್ತಾನೆ. ಈಗಿನಕಾಲದಲ್ಲಿ ಗೋಗಳು ಸಿಕ್ಕುವದು ಕಷ್ಟವಾದ್ದರಿಂದ ಅದಕ್ಕೆ ಬದಲಾಗಿ ಹಣದರೂಪವಾಗಿ ದಕ್ಷಿಣೆಯನ್ನು ಕೊಡುತ್ತಾರೆ. ಯಜಮಾನನೆಂದರೆ ಯಾಗವನ್ನು ಮಾಡುವೆನೆಂದು ಸಂಕಲ್ಪಿಸಿರುವಾತನು. ಯಜ್ಞವೆಂದರೆ ದೇವತೆಗಳಲ್ಲೆಲ್ಲ ಪರಮದೇವತೆಯಾದ ಮಹಾವಿಷ್ಣುವೇ ಎಂಬ ಭಾವನೆಯಿದ್ದರೆ ಯಜ್ಞವು ಈಶ್ವರನ ಆರಾಧನೆಯಾಗುವದು. ಸಾತ್ತ್ವಿಕರಲ್ಲಿ ಧನಸಹಾಯವನ್ನು ಪಡೆದುಕೊಂಡು ಯೋಗ್ಯರಾದ ಋತ್ವಿಜರನ್ನು ಕರೆತಂದು ದೇವತೆಗಳ ಆವಾಹನ, ಸ್ತೋತ್ರ, ಅವರಿಗಾಗಿ ಹೋಮ– ಇವುಗಳನ್ನು ಮಾಡಿಸಿ ಇದೆಲ್ಲವೂ ಭಗವಂತನಿಗೆ ಅರ್ಪಿತವಾಗಲಿ !– ಎಂಬುದು ಎಷ್ಟು ಕಷ್ಟಸಾಧ್ಯ ! ನಾನು ದೀಕ್ಷಿತನೆನ್ನಿಸಿಕೊಳ್ಳಬೇಕು, ಕುಂಡಲಗಳನ್ನು ಧರಿಸಿದ್ದರೆ ಸಾಕು– ಎಂದಾಗಲಿ, 'ವಿಧಿಯಿಲ್ಲ, ಅನ್ನದಾನವಿಲ್ಲ, ಮಂತ್ರವಿಲ್ಲ, ದಕ್ಷಿಣೆಯಿಲ್ಲ, ಶ್ರದ್ಧೆಯಂತೂ ಇಲ್ಲವೇಇಲ್ಲ'– ಎಂದಾಗಲಿ ಮಾಡಿದರೆ ಅಂಥ ಯಜ್ಞವು ನಿಜವಾಗಿ ಯಜ್ಞವಾದೀತೆ ? ಆದರಿಂದ ಈಶ್ವರನ ಆರಾಧನೆಯಾದೀತೆ ?

ಹೀಗೆಯೇ ತ್ರಿಕರಣಗಳಿಂದಲೂ ಮಾಡುವ ತಪಸ್ಸೂ– ಹೆಚ್ಚಿನ ಶ್ರದ್ಧೆಯಿಂದ ಕೂಡಿದ್ದರೆ, ಫಲಾಭಿಸಂಧಿಯಿಲ್ಲದೆ ಮಾಡಿದ್ದರೆ– ಸಾತ್ತ್ವಿಕವೆನಿಸುತ್ತದೆ. ದಾನವನ್ನು ಮಾಡತಕ್ಕದ್ದು, ಆದ್ದರಿಂದ ಮಾಡುತ್ತೇನೆ– ಎಂದುಕೊಂಡು ಉಪಕಾರದ ಅಪೇಕ್ಷೆಯಿಲ್ಲದೆ, ದೇಶಕಾಲಗಳನ್ನು ಅರಿತು ಸತ್ಪಾತ್ರಕ್ಕೆ ಕೊಟ್ಟ ದಾನವು ಸಾತ್ತ್ವಿಕವೆನಿಸುವದು.

ಅಂತೂ ಈ ರೀತಿಯಲ್ಲಿ ಸಾತ್ತ್ವಿಕವಾದ ಯಜ್ಞದಾನತಪಸ್ಸುಗಳನ್ನು ಈಶ್ವರನಿಗೆ ಅರ್ಪಿತವಾಗಲೆಂದು ಮಾಡಿದರೆ ಈಶ್ವರಾರಾಧನೆಯೆನಿಸುತ್ತದೆ.

# ೧೭. ಅರ್ಚನ

(15—8—69)

ಈಶ್ವರಾರಾಧನೆ ಎಂಬ ಮಾತಿಗೆ ಅರ್ಥವು ವಿಶಾಲವಾದ ಕ್ಷೇತ್ರವಿದೆ ತನ್ನ ಕರ್ಮದಿಂದ ಈಶ್ವರನ ಅಭ್ಯರ್ಚನೆಮಾಡುವುದು ಈಶ್ವರಾರಾಧನೆ. ಆ ಅರ್ಚನೆಯಲ್ಲಿ ಯಾವಯಾವ ಅಂಶಗಳು ಅಡಕವಾಗಿವೆ ಎಂಬುದನ್ನು ಈ ದಿನ ಬಿಡಿಸಿ ನೋಡಬೇಕಾಗಿರುತ್ತದೆ.

ಈಶ್ವರನು ಎಲ್ಲಿರುತ್ತಾನೆ? ಆತನನ್ನು ಹೇಗೆ ಅರ್ಚಿಸಬೇಕು ?—ಎಂಬ ಬಗ್ಗೆ ಈ ಶ್ರುತಿಯ ಅರ್ಥವನ್ನು ಸ್ವಲ್ಪ ಪರ್ಯಾಲೋಚನೆಮಾಡೋಣ :

ಯೋ ದೇವೋಽಗ್ನೌ ಯೋಽಪ್ಸು, ಯೋ ವಿಶ್ವಂ ಭುವನಮಾವಿವೇಶ ।
ಯ ಓಷಧೀಷು ಯೋ ವನಸ್ಪತಿಷು ತಸ್ಮೈ ದೇವಾಯ ನಮೋ ನಮಃ ॥
ಶ್ವೇ. ೨—೧೭.

ಯಾವ ದೇವನು ಬೆಂಕಿಯಲ್ಲಿರುತ್ತಾನೋ, ಯಾವಾತನು ನೀರಿನಲ್ಲಿರುತ್ತಾನೋ, ಯಾವನು ಭುವನವೆಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನೋ, ಯಾವನು ಗಿಡಗಳಲ್ಲಿರುತ್ತಾನೋ ಯಾವನು ಹೆಮ್ಮರಗಳಲ್ಲಿರುತ್ತಾನೋ ಆ ದೇವನಿಗೆ ನಮಸ್ಕಾರ, ನಮಸ್ಕಾರ !– ಎನ್ನುತ್ತಿದೆ, ಶ್ರುತಿ. ಬೆಂಕಿಯೆಂದರೆ ಯಾವದೋ ಒಂದು ಸುಡುವ ಸಾಧನಮಾತ್ರವೆಂದು ಈಗಿನವರ ಭಾವನೆ. ಮನೆಗೆ, ರೈಲಿಗೆ, ಅಂಗಡಿಗೆ, ದೇವಾಲಯಕ್ಕೆ, ಉದ್ಯೋಗಮಂದಿರಗಳಿಗೆ ಬೆಂಕಿಹತ್ತಿಸಿ ತುಂಟಜನರೂ ಹುಡುಗರೂ ಹಾವಳಿಮಾಡುತ್ತಾರೆಂದು ವೃತ್ತಪತ್ರಿಕೆಗಳಲ್ಲಿ ಸುದ್ದಿಯನ್ನು ಪ್ರಕಟಿಸುತ್ತಿರುತ್ತಾರೆ. ಆ ಬೆಂಕಿಯಲ್ಲಿ ಅಗ್ನಿದೇವತೆಯಿದೆ ಎಂಬ ವಿಶ್ವಾಸವಾಗಲಿ, ಅಗ್ನಿದೇವತೆಯಲ್ಲಿಯೂ ಅಂತರ್ಯಾಮಿಯಾದ ಈಶ್ವರನೊಬ್ಬನು ಇದ್ದಾನೆಂಬ ಶ್ರದ್ಧೆಯಾಗಲಿ ಬಹುಜನರಿಗೆ ಇರುವದಿಲ್ಲ. ಬೆಂಕಿಗೆ ಮೇಲಕ್ಕೆ ಉರಿಯುವ ಶಕ್ತಿಯೂ ಪದಾರ್ಥಗಳನ್ನು ಸುಡುವ ಶಕ್ತಿಯೂ ಯಾರಿಂದ ಬಂದಿದೆ ?– ಎಂಬ ಪ್ರಶ್ನೆಯು ಸ್ಥೂಲದೃಷ್ಟಿಯ ಜನರ ಮನಸ್ಸಿನಲ್ಲಿ ಎದ್ದುಕೊಳ್ಳುವದೇ ಇಲ್ಲ. ಹೀಗೆಯೇ ನಮಗೆ ನದಿ, ಸರೋವರ, ಸಮುದ್ರ—ಇವುಗಳು ಬರಿಯ ಜಲಾಶಯಗಳು; ನೀರಿಗೆ ವರುಣನು ಅಧಿದೇವತೆಯೆಂದಾಗಲಿ, ಆ ದೇವತೆಯಲ್ಲಿಯೂ ಅಂತರ್ಯಾಮಿಯಾದ ಭಗವಂತನು ಇರುತ್ತಾನೆಂದಾಗಲಿ ಜನರಿಗೆ ಹೊಳೆಯುವದೇ ಇಲ್ಲ. ಮರಗಿಡ ಬಳ್ಳಿಗಳಲ್ಲಿಯೂ ಹೀಗೆಯೇ ಅವುಗಳಿಗೆ ಅಭಿಮಾನಿಗಳಾದ ದೇವತೆಗಳೂ ಅವರಲ್ಲಿ ಅಂತರ್ಯಾಮಿಯಾಗಿ ಭಗವಂತನೂ ಇರುತ್ತಾನೆ– ಎಂಬ ನಂಬಿಕೆಯು ಅತೀಂದ್ರಿಯಪ್ರಪಂಚವನ್ನು ಪ್ರವೇಶಿಸುವದಕ್ಕೆ ಯತ್ನಿಸುವವರಿಗೆ ಮಾತ್ರವೇ

ಉಂಟಾದೀತು : ಭಗವಂತನನ್ನು ನೋಡುವ ಇಚ್ಛೆಯುಳ್ಳವರು ತನ್ನ ಒಳಕ್ಕೆ ಪ್ರವೇಶಿಸಬೇಕು. 'ಬಿಂಬಗಳು–ಕಲ್ಲು, ಮಣ್ಣು, ಮರಗಿಡಗಳು, ಪ್ರಾಣಿಗಳು. ಮನುಷ್ಯರು– ಎಲ್ಲವನ್ನೂ ಪೂಜಿಸುತ್ತಾರೆ; ಮೂಢಭಕ್ತಿ ಅವರದು!' ಎಂದು ಕೆಲವರು ಪರಮತದವರು ಹಾಸ್ಯಮಾಡುತ್ತಿರುತ್ತಾರೆ. ಸರಿಯಾಗಿ ಒಳಹೊಕ್ಕು ನೋಡಿದವರಿಗೆ– ವಿಷ್ಣುಭಗವಂತನು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುತ್ತಾನೆ ; ಜ್ಯೋತಿಗಳು, ಭುವನಗಳು, ವನಗಳು, ಪರ್ವತಗಳು, ಆತನೇ ಎಲ್ಲವೂ– ಎಂಬ ಪುರಾಣವಾಕ್ಯದ ಗಂಭೀರಾರ್ಥವು ಆಗ ಮನವರಿಕೆಯಾಗುವದು. ದೇವರನ್ನು ಎಲ್ಲಿ ಪೂಜಿಸಬೇಕು ?–ಎಂಬಲ್ಲ, ನಿಜವಾಗಿ ಕೇಳಬೇಕಾಗಿರುವ ಪ್ರಶ್ನೆ. ಆತನನ್ನು ಎಲ್ಲಿ ಪೂಜಿಸಬಾರದು? ಆತನು ಇಲ್ಲದ ಸ್ಥಳವು ಯಾವದು ?–ಎಂಬುದೇ ಪ್ರಶ್ನೆ. "ರೂಪಂ ರೂಪಂ ಪ್ರತಿರೂಪೋ ಬಭೂವ । ತದಸ್ಯ ರೂಪಂ ಪ್ರತಿಚಕ್ಷಣಾಯ ॥ (ಬೃ. ೨-೫-೧೯) ಎಂಬ ವಾಕ್ಯಕ್ಕೆ ಪ್ರತಿಯೊಂದು ಪ್ರಾಣಿಯಲ್ಲಿಯೂ ಆಯಾ ರೂಪದಿಂದ ಪರಮಾತ್ಮನು ಇರುತ್ತಾನೆ: ಹಾಗೆ ರೂಪವನ್ನು ಭಗವಂತನು ಪಡೆದಿರುವದು ಆತನ ಮಹಿಮೆಯನ್ನು ಸಾಧಕನಾದವನು ಕಂಡು ನಲಿಯುವದಕ್ಕೆ–ಎಂದು ಅರ್ಥ.

ಆಗಮಿಕರು ಪರಮೇಶ್ವರನಿಗೆ ಒಂದೊಂದು ಪ್ರತೀಕವನ್ನು ಹೇಳಿ 'ಅವರಲ್ಲಿ ಈಶ್ವರನನ್ನು ಪೂಜಿಸಬೇಕು : ವಿಷ್ಣು, ಶಿವ– ಮುಂತಾದ ಹೆಸರುಗಳಿಂದ ಆತನನ್ನು ಅಲ್ಲಿ ಅರ್ಚಿಸಬೇಕು' ಎಂದು ಉಪದೇಶಿಸಿರುತ್ತಾರೆ. ಸ್ಥೂಲ ದೃಷ್ಟಿಯಿಂದ ನೋಡಿದರೆ ಶಾಲಗ್ರಾಮವೆಂದರೆ ಒಂದು ಕಲ್ಲು ; ಒಂದೂರಿನಲ್ಲಿ ಒಬ್ಬನು ಒಂದು ಶಾಲಗ್ರಾಮವನ್ನು 'ಸರಿಯಾಗಿ ಒಂದುತೊಲ ತೂಗುತ್ತದೆ' ಎಂದು ಸಕ್ಕವನ್ನು ತೂಗುವದಕ್ಕೆ ಇಟ್ಟುಕೊಂಡಿದ್ದನು ! ಅತೀಂದ್ರಿಯವಸ್ತು ವಿಚಾರವೇ ತಲೆಯಲ್ಲಿಲ್ಲದಿದ್ದರೆ ಅವರ ದೃಷ್ಟಿಯಲ್ಲಿ ಸಾಲಗ್ರಾಮಾದಿಗಳಿಗೆ ಅಷ್ಟೇ ಬೆಲೆ. ಮನುಷ್ಯನೆಂದರೆ ಮಾಂಸ, ರಕ್ತ, ಎಲುಬು–ಎಂದು ಹೊರದೃಷ್ಟಿಯಿಂದ ನಿಶ್ಚಯಿಸುವವರಿಗೆ ಮಾನವನ ಸೂಕ್ಷ್ಮಶರೀರವಾಗಲಿ, ಆವನ ವಿಚಾರಸರಣಿಯಾಗಲಿ, ಮನುಷ್ಯನಿಗೆ ಉಂಟಾಗಿರುವ ಶ್ರದ್ಧಾಭಕ್ತ್ಯಾದಿಪ್ರತ್ಯಯಗಳ ಬೆಲೆಯಾಗಲಿ ಆವನ ಪರಮಾರ್ಥಸ್ವರೂಪವಾಗಲಿ ಹೇಗೆ ಗೊತ್ತಾದೀತು ?

ಶಾಲಗ್ರಾಮಾದಿಗಳಲ್ಲಿ ಹೇಗೋ ಹಾಗೆಯೇ ಪ್ರತಿಮಾದಿಗಳಲ್ಲಿಯೂ ಅರ್ಚನೆಯನ್ನು ಮಾಡಬೇಕು. ಪ್ರತಿಮೆಗಳು–ಆಯಾ ಅವತಾರದಲ್ಲಿ ಪರಮೇಶ್ವರನು ಲೋಕಾನುಗ್ರಹಕ್ಕಾಗಿ ಧರಿಸಿದ ರೂಪಗಳು. ಆತನ ಆಯಾ ಲೋಕೋಪಕಾರದ ಕೃತಿಗಳು–ಇವುಗಳನ್ನು ಸ್ಮರಣೆಗೆ ತರುತ್ತವೆ. ಈಗ ನಾವು ದೇಹಾತ್ಮಬುದ್ಧಿಯನ್ನು ಬೆಳೆಯಿಸಿಕೊಳ್ಳುತ್ತಾ ದೇಹವನ್ನು ಅಲಂಕರಿಸಿಕೊಳ್ಳುವದು,

ಬಗೆಬಗೆಯ ಉಡುಪನ್ನು ತೊಡಿಸುವುದು, ಅದಕ್ಕೆ ಅಭ್ಯಂಗಾದಿಗಳಿಂದ ಮಿರುಗು ಕೊಡುವುದು, ರುಚಿರುಚಿಯಾದ ಭಕ್ಷ್ಯಭೋಜ್ಯಗಳನ್ನು ಉಣಿಸುವುದು, ಸುಪ್ಪತ್ತಿಗೆಯ ಹಾಸಿಗೆಯನ್ನೇರ್ಪಡಿಸಿಕೊಳ್ಳುವುದು—ಮುಂತಾದ ಯಾವ ಯಾವ ಉಪಚಾರಗಳನ್ನು ಅದಕ್ಕೆ ಮಾಡುತ್ತಿರುವೆವೋ ಆ 'ದೇಹಾಯ ನಮಃ' ಎಂಬ ಭಾವನೆಯನ್ನು 'ದೇವಾಯ ನಮಃ' ಎಂದು ಮಾಡಿ ಷೋಡಶೋಪಚಾರಗಳಿಂದ ಪರಮೇಶ್ವರನ ಅರ್ಚನೆಯನ್ನು ಮಾಡಿ ಪ್ರಣಾಮಪೂರ್ವಕವಾಗಿ ಈಶ್ವರನಿಗೆ ಅರ್ಪಿಸುವ ಅಭ್ಯಾಸವನ್ನು ಇಟ್ಟುಕೊಂಡರೆ ದೇಹಮೋಹಗೊಳಿಸುವ ಆಧ್ಯಾತ್ಮಿಕಪ್ರಪಂಚದ ಅರಿವು ಮೆಲ್ಲಮೆಲ್ಲಗೆ ಉದಯಿಸುವದು. ಮನೆಯಲ್ಲಿ ಪೂಜೆಮಾಡುವಾಗ ಅಥವಾ ದೇವಾಲಯಕ್ಕೆ ಹೋಗುವಾಗ, ನಮಗೆ ಪ್ರಿಯವೆಂದು ತೋರುವ ಉತ್ತಮವಸ್ತ್ರಾಭರಣಾದಿಗಳನ್ನು ತೆಗೆದುಕೊಂಡುಹೋಗಿ ಈಶ್ವರನಿಗೆ ಅರ್ಪಿಸುವ ಅಭ್ಯಾಸವು ಸ್ವಾಭಾವಿಕವಾಗಬೇಕು.

ಅರ್ಚನೆಗೆ ಇಟ್ಟುಕೊಂಡಿರುವ ಮನೆಯ ಭಾಗವು ಅತ್ಯಂತವಾಗಿ ಪವಿತ್ರಭಾವನೆಯನ್ನು ಕೊಡುವಂತಿರಬೇಕು. ಅದು ಉಗ್ರಾಣದ ಮನೆಯಾಗಿ ಪರಿಣಮಿಸದಂತೆ ಎಚ್ಚರಿಕೆಯಿಂದಿರಬೇಕು. ಅಲ್ಲಿಗೆ ಪ್ರವೇಶಮಾಡಿದೊಡನೆಯೇ ದೇವರಿಗಾಗಿ ಮಾಡಿಕೊಂಡಿರುವ ಪೂಜಾಮಂಟಪವು ಉತ್ಕೃಷ್ಟರೀತಿಯಿಂದ ಕಾಣುವಂತೆ ಅಲಂಕೃತವಾಗಿರಬೇಕು. ಗುರುಗಳ ಸ್ಮರಣೆ, ದ್ವಾರಪಾಲಕರ ಸ್ಮರಣೆ—ಇವನ್ನು ಮಾಡುತ್ತಾ ಆ ಭಗವಂತನ ಪೂಜೆಗೆ ಸಂಭಾರವನ್ನು ಸಿದ್ಧ ಮಾಡಿಕೊಂಡು ಅವೆಲ್ಲವೂ ಆತನ ಸೇವೆಗೆ ಎಂಬ ಭಾವನೆಯಿಂದ 'ನನ್ನ ದಾರಾಪುತ್ರ-ಕ್ಷೇತ್ರವಿತ್ತಾದಿಗಳೆಲ್ಲವೂ ಆತನ ಸೇವೆಗೆ ಮೀಸಲಾಗುವಂತೆ ನನ್ನ ಬುದ್ಧಿಯನ್ನು ಆತನು ಪ್ರೇರಿಸಲಿ!'—ಎಂಬ ಪ್ರಾರ್ಥನೆಯನ್ನು ಮನಸ್ಸಿನಲ್ಲಿ ಮಾಡುತ್ತಾ ಪೂಜಿಸಬೇಕು. ನಮಗೆ ಅತ್ಯಂತಪ್ರಿಯರಾದ ಮಕ್ಕಳು, ಅಥವಾ ವೃದ್ಧರಾದ ತಾಯಿತಂದೆಗಳು—ಮುಂತಾದವರನ್ನು ಸೇವಿಸುವಾಗ ಹೇಗೆ ಯಾವ ಪ್ರತ್ಯುಪಕಾರದ ಸ್ಮರಣೆಯೂ ಇಲ್ಲದೆ ಉಪಚರಿಸುವೆವೋ ಹಾಗೆಯೇ 'ನಾನು', 'ನನ್ನದು' ಎಂಬ ಬುದ್ಧಿಯೆಲ್ಲವೂ ಮಾಯವಾಗಿ ಪೂಜೆಯು ಸಾರ್ಥಕವಾಗಬೇಕು.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥** ಗೀ. ೯–೨೬

ಎಂದು ಭಗವಂತನು ಹೇಳಿರುತ್ತಾನೆ. ಇಲ್ಲಿ ಭಕ್ತಿಗೇ ಮುಖ್ಯಸ್ಥಾನ; ನಮ್ಮ ಶಕ್ತಿಯಿದ್ದಷ್ಟು ಸ್ವಾರ್ಥತ್ಯಾಗದಿಂದ ಅನರ್ಘವಾದ ಉಪಚಾರವಸ್ತುಗಳನ್ನು ಅರ್ಚನೆಯಲ್ಲಿ ಭಗವಂತನಿಗೆಂದು ಅರ್ಪಿಸಬೇಕು.

ಅರ್ಚನೆಯ ಉತ್ತರಾಂಗವಾಗಿ ಮಾಡುವ ಜಪ, ಸ್ತೋತ್ರ, ಪಾರಾಯಣ ಮುಂತಾದವುಗಳೆಲ್ಲವೂ ಅರ್ಚನೆಯೇ ಎಂಬ ಭಾವನೆಯು ಬರುವಂತೆ ಪ್ರಯತ್ನಿಸಬೇಕು. ಹೀಗೆ ಮನಃಶುದ್ಧಿಯಿಂದ ಮಾಡಿದ ಅರ್ಚನೆಯ ಫಲವಾಗಿ ನಮ್ಮ ದೇಹದೊಳಗೆ ಇರುವ ಭಗವಂತನ ಅರ್ಚನೆಗೆ ಮನಸ್ಸು ಸಜ್ಜಾಗುವದು.

---

## ೧೮. ನಮಸ್ಕಾರ

### (16—8—69)

ಅಧ್ಯಾತ್ಮವಿದ್ಯೆ ಎಂದರೆ ಏಣಿಯನ್ನು ಹತ್ತುವಂತೆ ನಮ್ಮ ಶರೀರ, ಇಂದ್ರಿಯಗಳು, ಮನಸ್ಸು– ಇವುಗಳನ್ನು ಕ್ರಮಕ್ರಮವಾಗಿ ಸ್ವಾಧೀನಕ್ಕೆ ತಂದುಕೊಂಡು ಎಲ್ಲಕ್ಕೂ ಒಳಗಿರುವ ಆತ್ಮನನ್ನು ಕಂಡುಕೊಳ್ಳುವ ವಿದ್ಯೆ. ಬುದ್ಧಿಯು ವ್ಯವಹಾರಕ್ಕೆ ಬೇಕು. ವಸ್ತುಗಳನ್ನು ಕಂಡು ಅವುಗಳ ಸ್ವಭಾವವನ್ನೂ ಮನುಷ್ಯನ ಶರೀರಾದಿಗಳಮೇಲೆ ಅವುಗಳಿಂದಾಗುವ ಪರಿಣಾಮವನ್ನೂ ತರ್ಕಿಸುವದಕ್ಕೆ ಅದು ಅವಶ್ಯವಾಗಿರುತ್ತದೆ. ಆದರೆ ಆತ್ಮವಿದ್ಯೆಯನ್ನು ಹೀಗೆ ಜಾಣತನದಿಂದ ಸಂಪಾದಿಸಿಕೊಳ್ಳುವದಕ್ಕೆ ಆಗುವದಿಲ್ಲ. ಸಂಸಾರದಲ್ಲಿ ಬದ್ಧನಾಗಿರುವ ಜೀವನು ಶರೀರಾದಿಗಳ ಅಭಿಮಾನದಿಂದ ಮುಕ್ತರಾಗುವದಕ್ಕೆ ಕೆಲವು ಸಾಧನಗಳು ಬೇಕು. ಇವೇ ಅಧ್ಯಾತ್ಮಸಾಧನಗಳು. ಕಳೆದ ದಿವಸ ಶರೀರಪ್ರಧಾನವಾಗಿರುವ 'ಅರ್ಚನೆ' ಎಂಬ ಸಾಧನವನ್ನು ಹೇಳಿದೆನು. ಶರೀರದ ಅಭಿಮಾನದಿಂದ ಯಾವಯಾವ ವಿಷಯಗಳು ನಮಗೆ ಬೇಕೆಂದು ಬಯಸುತ್ತಿರುವೆವೋ ಅವುಗಳಲ್ಲಿರುವ ತೃಷ್ಣೆಯು ಹೋಗುವಂತೆ ಮಾಡಿಕೊಳ್ಳುವದಕ್ಕಾಗಿ ನಮಗೆ ಬೇಕೆನ್ನಿಸುವ ಉತ್ತಮವಾದ ವಸ್ತುಗಳನ್ನೇ ಪರಮೇಶ್ವರನಿಗೆ ಅರ್ಪಿಸುವದಕ್ಕೆ ಏರ್ಪಡಿಸಿಕೊಂಡಿರುವ ಅರ್ಚನೆಯು– ಬಹುಕಾಲದಿಂದ ನಮ್ಮದು ಎಂದುಕೊಂಡಿದ್ದ ಮನೆ, ತೋಟ, ಗದ್ದೆ– ಮುಂತಾದ ಯಾವದಾದರೊಂದು ಸ್ವತ್ತನ್ನು ರಿಜಿಸ್ಟ್ರಾರರ ಆಫೀಸಿಗೆ ಹೋಗಿ ಮತ್ತೊಬ್ಬರಿಗೆ ಬೆಲೆಗೆ ಅಥವಾ ದಾನವಾಗಿ ಕೊಡುವಾಗ ಒಂದು ದಸ್ತಾವೇಜನ್ನು ಬರೆದು 'ಇದರ ಎಲ್ಲಬಗೆಯ ಹಕ್ಕನ್ನೂ ಇಂಥವರೊಬ್ಬರಿಗೆ ಬಿಟ್ಟುಕೊಟ್ಟಿದ್ದೇನೆ; ನನಗೆ ಇಲ್ಲಿಂದ ಮುಂದಕ್ಕೆ ಇದರಮೇಲೆ ಯಾವಬಗೆಯ ಸ್ವಾಮ್ಯವೂ ಇರುವದಿಲ್ಲ' ಎಂದು ಹೇಳಿ ಹಸ್ತಾಕ್ಷರವನ್ನು ಬರೆದುಕೊಟ್ಟು ಆಮೇಲೆ ಅದರ ಸ್ಮರಣೆಯನ್ನು ಕೂಡ ಹೇಗೆ ಮಾಡುವದಿಲ್ಲವೋ ಹಾಗೆ– ದೇಹದ ಅಭಿಮಾನದಿಂದ, ಅದಕ್ಕೆ ಬೇಕಾಗುವದೆಂಬ ಕಾರಣದಿಂದ ಬಗೆಬಗೆಯ ಅನ್ನವಸ್ತ್ರಾದಿಗಳಲ್ಲಿ ಇಟ್ಟುಕೊಂಡಿದ್ದ ಮಮತೆಯನ್ನು –ವಸ್ತ್ರಂ ಸಮರ್ಪಯಾಮಿ, ಪುಷ್ಪಂ ಸಮರ್ಪಯಾಮಿ, ಫಲಂ ಸಮರ್ಪಯಾಮಿ–

ಎಂದುಮುಂತಾಗಿ ಸಂಕಲ್ಪಿಸುತ್ತಾ ಮಮತಾದೂರನಾಗುತ್ತಾ ದೇಹಾಭಿಮಾನ ವನ್ನು ಕುಗ್ಗಿಸಿಕೊಳ್ಳುವ ಯತ್ನವೇ ಆಗಿದೆ.

ಇನ್ನು **ನಮಸ್ಕಾರ.** ಈ ಶಬ್ದಕ್ಕೆ ಅರ್ಥವೇನೆಂಬುದು ಈಗಿನ ಅತಿವೇಗದ ಚಲನವಲನಗಳ ಜೀವನದಲ್ಲಿರುವವರಿಗೆ ಮನದಂದುಕೊಳ್ಳುವದು ಬಹಳ ಕಷ್ಟ ವಾಗಿರುತ್ತದೆ. ದಾರಿಯಲ್ಲಿ ಒಬ್ಬರನ್ನು ಕಂಡು 'ನಮಸ್ಕಾರ !' ಎಂದು ಒಬ್ಬನು ಅಂದರೆ ಅದಕ್ಕೆ ಮತ್ತೊಬ್ಬನು ಪ್ರತ್ಯುತ್ತರವಾಗಿ 'ನಮಸ್ಕಾರ !' ಎನ್ನುವಷ್ಟರಲ್ಲಿ ಇಬ್ಬರೂ ಎಷ್ಟೋ ಫರ್ಲಾಂಗುಗಳಷ್ಟು ದೂರಕ್ಕೆ ಒಬ್ಬರನ್ನೊಬ್ಬರು ಅಗಲಿಹೋ ಗಿರುತ್ತಾರೆ ; ಕಾಲುಚಕ್ರದ ಬೈಸಿಕಲ್, ಅಥವಾ ಮೋಟಾರುಸೈಕಲುಮೇಲೆ ವೇಗ ದಿಂದ ಭರ್ರನೆ ಚಲಿಸುತ್ತಿರುವ, ಯಾವದೋ ಒಂದು ಕಾರ್ಯವನ್ನು ಲಕ್ಷ್ಯದಲ್ಲಿ ಇಟ್ಟುಕೊಂಡ, ಆ ಇಬ್ಬರಿಗೆ ಒಬ್ಬರನ್ನೊಬ್ಬರು ನಿಧಾನವಾಗಿ ಸಂಧಿಸಿ ಪರಸ್ಪರವಾಗಿ ಸನ್ಮಾನವನ್ನು ತೋರಿಸುವದಕ್ಕೆ ಕಾಲಾವಕಾಶವೆಲ್ಲಿಂದ ಸಿಕ್ಕಬೇಕು ? ಅದನ್ನು 'ನಮಸ್ಕಾರ'ವೆಂದು ಕರೆಯುವದಕ್ಕಿಂತ ಹಳೆಯ ಪದ್ಧತಿಯ ಸಂಸ್ಕಾರದಿಂದ ತಪ್ಪಿಸಿಕೊಳ್ಳುವ 'ಚಮತ್ಕಾರ'ವೆಂದು ಕರೆಯುವದೇ ಯೋಗ್ಯವಾಗಿರುತ್ತದೆ.

ಎದೆ, ತಲೆ, ಕಣ್ಣು—ಮುಂತಾದ ಶರೀರದ ಎಂಟು ಅಂಗಗಳೂ ನೆಲಕ್ಕೆ ಮುಟ್ಟು ವಂತೆ ಅಡ್ಡಬೀಳುವ ಪದ್ಧತಿಗೆ '**ಸಾಷ್ಟಾಂಗನಮಸ್ಕಾರ**'ವೆಂಬ ಹೆಸರನ್ನು ಹಿಂದಿನವರು ಇಟ್ಟಿದ್ದರು. ಹಾಗೆ ನಮಸ್ಕಾರವನ್ನು ಮಾಡುವಾಗ ನಮ್ಮ ಶರೀರ ದಲ್ಲಿ ಒಂದೊಂದು ಅವಯವದಲ್ಲಿಯೂ ಅವ್ಯಕ್ತವಾಗಿ ಅಡಗಿಕೊಂಡಿರುವ ಅಹಂತೆ ಯನ್ನು ಬಿಟ್ಟೆನೆಂಬ ಮನೋಭಾವವು ಮೂಡಬೇಕು. ಉದ್ದಕ್ಕೆ ಶರೀರವನ್ನು ಅಡ್ಡಗೆಡಹುವದರಿಂದ ಇದನ್ನು 'ದಂಡವತ್ಪ್ರಣಾಮ' ಎಂದೂ ಕೆಲವರು ಕರೆಯು ತ್ತಾರೆ. ಕೋಲು ತನ್ನನ್ನು ಹಿಡಿದಿರುವವನ ಇಚ್ಛೆಗೆ ಅನುಸಾರವಾಗಿ ಎತ್ತಲೆಂದರೆ ಅತ್ತ ಹೇಗೆ ತಿರುಗಾಡುವದೋ ಹಾಗೆ 'ನಿಮ್ಮ ಕೈಯಲ್ಲಿನ ಕೋಲಿನಂತೆ ಇರು ವವನು ನಾನು ; ತಮ್ಮ ಇಚ್ಛೆಬಂದಂತೆ ನನ್ನನ್ನು ನಿಯೋಜಿಸಬಹುದು' ಎಂಬ ಭಾವವನ್ನು ನಮಗಿಂತ ಹಿರಿಯರಾದ ಪ್ರಾಜ್ಞರಿಗೆ ಸೂಚಿಸುವ ನಮಸ್ಕಾರವದು.

ಇಂಥ ನಮಸ್ಕಾರದಲ್ಲಿ ಸ್ವಲ್ಪವೂ ಮಾಯಾವಿತ್ವಕ್ಕೆ ಎಡೆಯಿರುವಂತಿಲ್ಲ. ಏಕೆಂದರೆ ನಾವೇ ಮನಃಪೂರ್ವಕವಾಗಿ ಮತ್ತೊಬ್ಬರನ್ನು ಎಲ್ಲಾ ವಿಧದಿಂದಲೂ ನಮಗಿಂತ ದೊಡ್ಡವರೆಂದು ಒಪ್ಪಿಕೊಂಡಿರುತ್ತೇವೆ. ಇಡಿಯ ಜಗತ್ತಿನ ಜನ್ಮ ಸ್ಥಿತಿಲಯಗಳಿಗೆ ಕಾರಣನಾಗಿರುವ ಪರಮೇಶ್ವರನಿಗೆ ನಮಸ್ಕಾರವನ್ನು ಮಾಡು ವಾಗ ಈ ಭಾವನೆಯು ಬಂದರೇ, ಅದು 'ನಮಸ್ಕಾರ'ವೆಂಬ ಸಾಧನವಾದೀತು. ಕಪಟದಿಂದಲೂ ಆಷಾಢಭೂತಿಯಂತೆ ಇಂಥ ನಮಸ್ಕಾರವನ್ನು ಮಾಡುವದಕ್ಕೆ ಆಗುತ್ತದೆ ; ಆದರೆ ಹಾಗೆ ಮಾಡಿದವರ ಮನೋಭಾವವು ಮತ್ತೊಬ್ಬರಿಗೆ

ತಿಳಿಯುವಂತಿರುವದಿಲ್ಲ. ಬಹಳ ಕಾಲದ ಹಿಂದೆ ಒಮ್ಮೆ ಒಬ್ಬ ಹಿಂದೂಸ್ಥಾನಿ ಸ್ಕೂಲು ಬೋಧಕನು ನನ್ನಲ್ಲಿಗೆ ಬಂದು ವಿದ್ಯಾಭ್ಯಾಸದ ಇಲಾಖೆಯ ಸರ್ವಶ್ರೇಷ್ಠಾಧಿಪತಿಗಳು ತನಗೆ ಮಾಡುತ್ತಿರುವ ಅನ್ಯಾಯವನ್ನು ವಿವರಿಸಿದನು. ನೇರಾಗಿ ಅವನಮೇಲಿದ್ದ ಅಧಿಕಾರಿಯು 'ಅವನು ಎಲ್ಲಿಯೋ ಹೇಳದೆಕೇಳದೆ ತಪ್ಪಿಸಿಕೊಂಡುಹೋಗಿಬಿಟ್ಟಿರುತ್ತಾನೆ' ಎಂದು ವರದಿಮಾಡಿಬಿಟ್ಟಿದ್ದನಂತೆ. ಶ್ರೇಷ್ಠಾಧಿಕಾರಿಗಳು 'ಇವನನ್ನು ಕೆಲಸದಿಂದ ತಾತ್ಕಾಲಿಕವಾಗಿ ನಿವೃತ್ತಿ (Suspension) ಮಾಡಿ' ಎಂದು ಆಜ್ಞೆ ಇತ್ತಿದ್ದರು. ಅವರ ಎದುರಿಗೇ ಹೋಗಿ ತನ್ನ ಗೋಳನ್ನೆಲ್ಲ ಎಷ್ಟು ಹೇಳಿಕೊಂಡರೂ ಅವರು ಕೇಳದೆ 'ಇನಸ್ಪೆಕ್ಟರು ನೀನು ಎಲ್ಲಿಯೋ ತಪ್ಪಿಸಿಕೊಂಡು ಹೋಗಿದ್ದೀಯೆ- ಎನ್ನುತ್ತಾರೆ' ಎಂದೇ ಮತ್ತೆ ಮತ್ತೆ ಹೇಳುತ್ತಿದ್ದರು. 'ಆ ಇಲಾಖೆಯ ಮಂತ್ರಿಗಳಿಗೆ ಒಂದು ದೂರು ಬರೆದುಕೊಳ್ಳಲೆ?' ಎಂದು ನನ್ನನ್ನು ಸಲಹೆಕೇಳುವದಕ್ಕಾಗಿ ಅವನು ಬಂದಿದ್ದನು. 'ಬೇಡ, ಬೇಡ! ಇನ್ನೊ ಒಮ್ಮೆ ಅವರಲ್ಲಿ ನಮ್ರತೆಯಿಂದ ಬೇಡಿಕೊ, ಅವರಿಗೆ ದಯೆಯುಂಟಾಗಬಹುದು' ಎಂದು ನಾನು ಹೇಳಿದ್ದಕ್ಕೆ ಅವನು "ತಮ್ಮ ಮಾತಿನಂತೆ ಇನ್ನೊಂದುಸಲ ಹೋಗಿ ಪ್ರಾರ್ಥನೆಮಾಡಿಕೊಳ್ಳುತ್ತೇನೆ, ಈ ಸಲವೂ ನನ್ನ ಗೋಳಿಗೆ ಅವರು ಕಿವಿಗೊಡದೆ ಹೋದರೆ, 'ಸ್ವಾಮಿ, ತಮ್ಮ ಕಾಲಿಗೆ ಬೀಳುತ್ತೇನೆ' ಎಂದು ಕಾಲುಹತ್ತಿರಕ್ಕೆ ಹೋಗಿ ಎರಡು ಕಾಲುಗಳನ್ನೂ ಎಳೆದುಕೊಂಡು ಅಪ್ಪಳಿಸಿ ಬಂದುಬಿಡುತ್ತೇನೆ!" ಎಂದನು. ಆಳಲಿನ ಬೇಗೆಯಲ್ಲಿ ಅವನು ಆಡಿದ ಮಾತು ಅದು. ಮಾಯಾವಿಗಳು 'ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಶರಣಾರ್ತಿ' ಎಂಬ ಗಾದೆಯನ್ನು ಅನುಸರಿಸುತ್ತಾರಲ್ಲವೆ? ಆ ಭಾವನೆಗೂ ಈಗ ನಾವು ವಿಚಾರಕ್ಕೆ ತೆಗೆದುಕೊಂಡಿರುವ 'ನಮಸ್ಕಾರ'ಕ್ಕೂ ಯಾವ ಸಂಬಂಧವೂ ಇಲ್ಲ. ಅಹಂತೆಯನ್ನೂ ಮಮತೆಯನ್ನೂ ಬಿಟ್ಟು ಸಂಪೂರ್ಣವಾದ ಶರಣಾಗತಿಯನ್ನು ಸೂಚಿಸುವ ಕೃತಿಯೇ ನಮಸ್ಕಾರವೆಂಬುದು. 'ನಮಃ' ಎಂಬಲ್ಲಿ 'ನಾಹಮ್ ನ ಮಮ' ಎಂಬ ಭಾವನೆಯೇ ತುಂಬಿತುಳುಕುತ್ತಿರಬೇಕು.

ಪೂರ್ವಾಶ್ರಮದಲ್ಲಿ ಒಮ್ಮೆ ನನ್ನ ಎಡಗಾಲಿನ ಹೆಬ್ಬೆರಳಿನಲ್ಲಿ ಯಾವದೋ ಕಾರಣದಿಂದ ಬಿರುಕು ಉಂಟಾಯಿತು. ಅದರಮೇಲೆ ನೀರುಬಿದ್ದಂತೆಲ್ಲ ಅದು ಕೀತುಕೊಂಡಿತು : ನಡೆಯುವದಕ್ಕೆ ಬಹಳ ತೊಂದರೆಯಾಯಿತು. ಅದರ ದುರ್ಗಂಧದಿಂದ ಮತ್ತೊಬ್ಬರಬಳಿಯಲ್ಲಿ ಕೂರುವದಕ್ಕೆಕೂಡ ಆಗುವಂತಿರಲಿಲ್ಲ. ಆಗ ನಾನು ಪ್ರತಿದಿನವೂ ಸೂರ್ಯನಮಸ್ಕಾರವನ್ನು ಮಾಡುತ್ತಿದ್ದೆನಲ್ಲದೆ, ಭಾನುವಾರ ವಿಶೇಷವಾಗಿ ಆ ನಮಸ್ಕಾರದಲ್ಲಿ ತೊಡಗುತ್ತಿದ್ದೆನು. ಆಸ್ಪತ್ರೆಯವರು ಎಷ್ಟೋ ಬಗೆಯ ಮುಲಾಮನ್ನು ಕೊಟ್ಟರೂ ಗುಣಮುಖವಾಗದೆ ಇದ್ದ ಸ್ಥಿತಿಯಲ್ಲಿ ನನಗೆ ಒಬ್ಬರು 'ನಿಮ್ಮ ಬಳಿಯಲ್ಲಿಯೇ ಇರುವ ಔಷಧಿಯನ್ನು ಏತಕ್ಕೆ ಉಪಯೋಗಿಸದೆ ಇರುವಿರಿ?

ಸೂರ್ಯನಮಸ್ಕಾರವನ್ನು ಮಾಡಿದಬಳಿಕ ತೀರ್ಥವನ್ನು ಪ್ರೋಕ್ಷಿಸಿಕೊಂಡು ನೋಡಿರಿ !' ಎಂದು ಸೂಚನೆಕೊಟ್ಟರು. ಸ್ವಭಾವದಿಂದಲೇ ನನಗೆ ಶ್ರದ್ಧಾಭಾವ ವಿದ್ದದ್ದರಿಂದ ಆದರಂತೆ ಮಾಡಲಾಗಿ ಮೂರುದಿನದಲ್ಲಿ ಅದು ಮಾಯ ನೆಟ್ಟ ಗಾಯಿತು! ನೀರಿಗೆ ಕೀತುಕೊಳ್ಳುತ್ತಿದ್ದ ಬಿಡುಕು ತೀರ್ಥಪ್ರೋಕ್ಷಣೆಗೆ ಹೆ ಗೆ ಮಾಯಿತು? ಅದೇ ಒಂದು ಅದ್ಭುತಘಟನೆ. ಮುಂದೆ ನಮ್ಮ ಮನೆಯಲ್ಲಿ ಜ್ವರ ದಿಂದ ನರಳುತ್ತಿದ್ದ ಒಬ್ಬ ಹುಡುಗಿ, ಆನುವಂಶಿಕವಾಗಿ ಜನನಾಂಗದಲ್ಲಿ ಆಗುತ್ತಿದ್ದ ರಕ್ತಸ್ರಾವದಿಂದ ಸಂಕಟಪಡುತ್ತಿದ್ದ ಒಬ್ಬ ಹುಡುಗ- ಇಬ್ಬರೂ ಮಿತ್ರ, ರವಿ, ಸೂರ್ಯ- ಮುಂತಾದ **ದ್ವಾದಶನಾಮಗಳ** ಉಚ್ಚಾರಣಪೂರ್ವಕವಾಗಿಯೂ 'ಹಂಸಾಯ ಭುವನಧ್ವಾಂತಧ್ವಂಸಾಯ' ಎಂದು ಮುಂತಾಗಿರುವ **ಪೌರಾಣಿಕ ಶ್ಲೋಕಗಳ** ಪಠನಪೂರ್ವಕವಾಗಿಯೂ ಮಾಡಿದ ನಮಸ್ಕಾರದ ಫಲವಾಗಿ ತಮ್ಮತಮ್ಮ ವ್ಯಾಧಿಯಿಂದ ಮುಕ್ತರಾದರು ! ನಾನು ಬರೆದುಕೊಂಡಿದ್ದ ಪೂಜಾ ಕ್ರಮವನ್ನು ಪರಸ್ಥಲಗಳಿಂದ ಬಂದ ಅನೇಕರು ಬರೆದುಕೊಂಡು ಆದರಂತೆ ಮಾಡಿದ ನಮಸ್ಕಾರದ ಫಲವಾಗಿ ತಮ್ಮತಮ್ಮ ಇಷ್ಟಾರ್ಥವು ನೆರವೇರಿತೆಂದು ಹೇಳಿ ಕೊಂಡರು. ನಮ್ಮ ಮನೆಯೊಂದು ಸೂರ್ಯನಮಸ್ಕಾರಸಂಪ್ರದಾಯಪ್ರವರ್ತನೆಯ ಆಸ್ಪತ್ರೆಯಾಗಿ ಪರಿಣಮಿಸಿತು ! ಹೀಗೆಲ್ಲ ಆದದ್ದು ಕಾಕತಾಳೀಯವೆಂದು ನೀವು ಹೇಳಬಹುದು. ಹೇಗಾದರೂ ಇರಲಿ, 'ಆರೋಗ್ಯಂ ಭಾಸ್ಕರಾದಿಚ್ಛೇತ್' ಎಂಬ ವಚನಕ್ಕೆ ಅಲ್ಲಿ ಬಹಳ ದೃಷ್ಟಾಂತಗಳು ದೊರೆತವು. ಶ್ರದ್ಧಾಭಕ್ತಿಗಳಿಗೆ ಅತೀಂದ್ರಿಯಪ್ರಕಾರದಿಂದ ಫಲಪ್ರಾಪ್ತಿಯಾಗುವದೆಂಬ ವಿಷಯಕ್ಕೆ ನಮ್ಮಲ್ಲಿ ಅನೇಕರಿಗೆ ನಂಬಿಕೆಯು ಬಲವಾಯಿತು.

ಕಾಶೀಯಾತ್ರೆ, ತಿರುಪತಿಯ ಯಾತ್ರೆ-ಮುಂತಾದವುಗಳಿಗೆ ಹಿಂದಿನ ಕಾಲದಲ್ಲಿ ಕಾಲುನಡಗೆಯಿಂದಲೇ ಹೋಗಿಬಂದ ಯಾತ್ರಿಕರು ಹೇರಳವಾಗಿರುತ್ತಿದ್ದರು. ಯಾತ್ರೆಯ ಸಂಕಲ್ಪದಿಂದ ಅವರು ನಡೆಯುತ್ತಿದ್ದದ್ದೇ ಒಂದು ಪ್ರದಕ್ಷಿಣನಮ ಸ್ಕಾರದ ವಿಧಾನವಾಗಿರುತ್ತಿತ್ತು. ಒಂದೊಂದು ಹೆಜ್ಜೆಯನ್ನು ಇಡುವಾಗಲೂ ಪರಮೇಶ್ವರನ ಸ್ಮರಣೆ, ಅವನ ಸ್ಥಾನಕ್ಕೆ ಹೋಗುವದಕ್ಕೆ ಹೊರಟದ್ದೇನೆ- ಎಂಬ ಸಂಕಲ್ಪವು ಅತೀಂದ್ರಿಯವಷ್ಟೆ ? ಅದರ ಫಲವೂ ಅತೀಂದ್ರಿಯವೇ. ರೈಲುಮೇಲೆ ಅಥವಾ ಬಸ್ಸಿನಮೇಲೆ ಯಾತ್ರೆಗೆಂದು ಹೋಗಿಬರುವ ಈಗಿನ ಯಾತ್ರೆಗೂ ಆ ಯಾತ್ರೆಗೂ ಭಾವನೆಯ ದೃಷ್ಟಿಯಿಂದ ಬಹಳ ವೈಲಕ್ಷಣ್ಯವಿದೆ.

ಅರ್ಚನೆ, ನಮಸ್ಕಾರ- ಮುಂತಾದ ಶರೀರಪ್ರಧಾನವಾದ ಸಾಧನಗಳಿಂದ ಶರೀರವೇ ನಾನೆಂಬ ಮಿಥ್ಯಾಭಾವನೆಯು ಕಡಿಮೆಯಾಗುವದು. ನಮ್ಮ ನೆರಳನ್ನು ನಾವು ನೋಡುತ್ತಿದ್ದರೂ ಅದರಲ್ಲಿ 'ನಾನು' ಎಂಬ ಬುದ್ಧಿಯು ಇರುವದೇ ಇಲ್ಲವಷ್ಟೆ? ಆದರೆ ಮೈಮೇಲೆ ಇರುವ ಅಂಗಿಯನ್ನು ಬಹುಕಾಲ ಮೈಮೇಲೆಯೇ ಇಟ್ಟುಕೊಂಡಿ

ರುವ ಅಭ್ಯಾಸವಾಗಿರುವವರಿಗೆ ಅಂಗಿಯುವರೆಗೂ ಆತ್ಮಬುದ್ಧಿಯು ಬಂದುಬಿಡುವ ಸಂಭವವಿದೆ. ಅಂಗಿಯನ್ನು ತೆಗೆದು ಗೂಟಕ್ಕೆ ಹಾಕಿದಂತೆ, ಶರೀರವನ್ನು ನಮಗಿಂತ ಹೊರಚಪ್ಪುವಮಾಡಿ ಬೇರೆಯಾಗಿ ಇಡುವುದಕ್ಕೆ ಬರುವುದಿಲ್ಲ. ಆದರೆ ನಮಸ್ಕಾರ, ಯಾತ್ರೆ–ಮುಂತಾದ ಉಪಾಯಗಳಿಂದ ಅದನ್ನು ದಂಡಿಸಿದಂತೆಲ್ಲ ಶರೀರವನ್ನು ದೃಶ್ಯವಾಗಿ ಕಂಡು 'ಅದಕ್ಕಿಂತ ವ್ಯತಿರಿಕ್ತನು ನಾನು'– ಎಂಬ ಭಾವನೆಯು ಬಲವಾಗುತ್ತಾ ಬರುವದು. 'ಶರೀರವು ನಾನಲ್ಲ, ಅದು ದೃಶ್ಯವಾಗಿದೆ; ಅದಕ್ಕಿಂತ ವ್ಯತಿರಿಕ್ತನು ನಾನು' ಎಂಬ ಯುಕ್ತಿಮಾತ್ರದಿಂದ ಎಂದಿಗೂ ಶರೀರಾತ್ಮಬುದ್ಧಿಯು ಹೋಗುವದಿಲ್ಲ. ಶರೀರವನ್ನು ಗುರುಹಿರಿಯರ, ದೇವತೆಗಳ, ಮತ್ತು ಮುಖ್ಯವಾಗಿ ಪರಮೇಶ್ವರನ ಸೇವೆಗೆ ಅರ್ಪಿಸುವ ಅಭ್ಯಾಸವು ಅಳವಟ್ಟಂತೆ ಶರೀರಾತ್ಮಭಾವವು ಮಿಥ್ಯಾಭಿಮಾನಮಾತ್ರವೇ ಎಂಬ ವೇದಾಂತಿಗಳ ಉಪದೇಶದಲ್ಲಿ ನಮಗೆ ಹೆಚ್ಚಿನ ನಂಬಿಕೆಯುಂಟಾಗುವದು. ಸ್ವಪ್ನಾದ್ಯವಸ್ಥೆಗಳಲ್ಲಿ ಪ್ರಾತೀತಿಕಶರೀರವನ್ನೂ ನಾವೆಂದು ವ್ಯವಹರಿಸುವಂತೆಯೇ ಈಗಲೂ ಶರೀರವನ್ನು ನಾವೆಂದುಕೊಳ್ಳುತ್ತಿದೇವೆ ಎಂಬ ಯುಕ್ತಿಗೆ ಆಗ ಪುಷ್ಟಿಯು ಬರುತ್ತದೆ.

## ೧೬. ಸ್ತೋತ್ರ

( 17–8–೨9 )

ಶರೀರಪ್ರಧಾನವಾದ ಅರ್ಚನೆ, ನಮಸ್ಕಾರ– ಇವುಗಳನ್ನು ಕುರಿತು ಆಲೋಚನೆಮಾಡಿದ್ದಾಯಿತು ; ನಾವು ಮಾಡುವ ಅರ್ಚನೆಯೂ ನಮಸ್ಕಾರವೂ ಯಾಂತ್ರಿಕವಾಗಿ ಮಾಡಲ್ಪಟ್ಟರೂ "ಭಗವಂತನಿಗೆ" ಎಂದು ಮಾಡಿದರೆ ಅದನ್ನು ಅವಶ್ಯವಾಗಿ ಭಗವಂತನು ಸ್ವೀಕರಿಸಿ ಅದಕ್ಕೂ ಫಲವನ್ನು ಕೊಡುತ್ತಾನೆ. ಆದರೆ ಶಿಷ್ಟಾಚಾರದಂತೆ ವಿಧ್ಯುಕ್ತವಾದ ರೀತಿಯಲ್ಲಿ ಮಾಡಿದರೆ ಆ ಸಾಧನೆಗಳು ಇನ್ನೂ ವೀರ್ಯವತ್ತರವಾಗುತ್ತವೆ. ಜವಾನನಾದವನು ತನ್ನ ದವಾಲಿಯನ್ನು ಧರಿಸಿದರೆ ಕರ್ತವ್ಯದಲ್ಲಿ ನಿರತನಾಗಿದ್ದಾನೆಂಬುದಕ್ಕೆ ಅದು ಗುರುತಾಗಿರುತ್ತದೆ. ಹೀಗೆಯೇ ದ್ವಿಜನಾದವನು ಲೌಕಿಕವಾದ ಉದ್ಯೋಗದ ಉಡುಪನ್ನು ಅತ್ತ ಇಟ್ಟು, ಶಾಸ್ತ್ರೀಯಕರ್ಮಕ್ಕೆ ತಕ್ಕಂತೆ ಸ್ನಾನಾದಿಗಳನ್ನು ಮಾಡಿ ಶುಭ್ರವಾದ ವಸ್ತ್ರವನ್ನು ಧರಿಸಿ ಮಡಿಯಿಂದ ದೇವಕರ್ಮದಲ್ಲಿ ಉಪವೀತ, ಪಿತೃಕರ್ಮದಲ್ಲಿ ಪ್ರಾಚೀನಾವೀತ, ಮನುಷ್ಯಕರ್ಮದಲ್ಲಿ ನಿವೀತ– ಹೀಗೆ ಕರ್ಮದ್ಯೋತಕವಾದ

ರೀತಿಯಲ್ಲಿ ವಸ್ತ್ರಾದಿಗಳನ್ನು ಧರಿಸಿ ನಿರ್ಮಲವಾದ ಮನಸ್ಸಿನಿಂದ ಮಾಡಿದ ಕರ್ಮವು ಸತ್ಕರ್ಮವಾಗುವದು. ಶರೀರಕ್ಕೆ ತಕ್ಕಂತೆ ವಾಙ್ಮನಸ್ಸುಗಳೂ ಈ ಅರ್ಚನಾದಿಗಳಿಗೆ ಹೊಂದುಗೆಯಾಗಬೇಕು.

ಈ ದಿನ ವ್ಯಾಖ್ಯಾನವಾದ ಸ್ತೋತ್ರದ ವಿಷಯದಲ್ಲಿ ಕೆಲವು ವಿಚಾರ ಗಳನ್ನು ತಮ್ಮಗಳ ಮುಂದೆ ಇಡಬೇಕೆಂದಿರುವೆನು. ಸ್ತೋತ್ರ ಎಂದರೆ ಹೊಗ ಳುವದು ಎಂದೇ ಅರ್ಥವಾದರೂ ಅದು— ಹೊಗಳುತ್ತಲೇ ಧನಿಕರ ಗಂಟು ಸಡಿಲಿಸಿಕೊಂಡು ಕೆಲವು ದುಡ್ಡುಗಳನ್ನು ಪಡೆಯಲು ಉಪಯೋಗಿಸುತ್ತಿರುವಂತೆ— ನಮ್ಮ ಕೆಲವು ಸ್ತೋತ್ರಗಳನ್ನು ಅಥವಾ ಮಂತ್ರಗಳನ್ನು ಬಳಸುವದಿಲ್ಲ. 'ಛತ್ರಪತಿ!' ಎಂದು ಅವರು ಬರೆದು ರಾಜರುಗಳನ್ನು ಹೊಗಳಿದರೂ ಅವ ನಲ್ಲಿ ಒಂದು ಛತ್ರಿಯು ಕೂಡ ಇಲ್ಲದಿರಬಹುದು. ಸ್ತೋತ್ರವೆಂಬುವದು ಬಾಯ ಸ್ತ್ರೀಳು ಹೊಗಳಿಕೆಯಲ್ಲ. ಇಲ್ಲಸಲ್ಲದ ಗುಣಗಳನ್ನು ಆರೋಪಿಸಿ, ಸ್ವಾರ್ಥಕ್ಕಾಗಿ ಒಬ್ಬನನ್ನು ಹೊಗಳುವ ವೃಥಾಸ್ತುತಿಯೂ ಇದಲ್ಲ.

ಆದರೇಣ ಯಥಾ ಸ್ತೌತಿ ಧನವನ್ತಂ ಧನೇಚ್ಛಯಾ ।
ತಥಾ ಚೇದ್ವಿಶ್ವಕರ್ತಾರಂ ಕೋ ನ ಮುಚ್ಯೇತ ಬನ್ಧನಾತ್ ॥

ಎಂದು ಸುಭಾಷಿತವಿದೆ. ಜನರು ಅರಸಿಗೆ ವಶಂವದರಾದರೂ ಒಂದು ಕಾರ್ಯ ವು ಆಗಬೇಕಾಗಿದ್ದರೆ, ಅವರನ್ನು "ತಾವು ಮಹಾವಿದ್ವಾಂಸರು, ಪ್ರಭಾವಶಾಲಿ ಗಳು' ಎಂದು ಮುಂತಾಗಿ ಅತಿಶಯೋಕ್ತಿಗಳಿಂದ ಉಬ್ಬಿಸುವದಕ್ಕಾಗಿ ಕೊಂಡಾ ಡುವದುಂಟು. ಕಿಂಗ್ ಕೆನ್ಯೂಟ್' ಎಂಬ ದೊರೆಯನ್ನು ಅವನ ಅರಮನೆಯ ನೌಕರರು 'ನಿಮ್ಮ ಅಧಿಕಾರಕ್ಕೆ ಎಣೆಯುಂಟೆ? ನಿಮ್ಮ ಇಷ್ಟದಂತೆಯೇ ಈ ಸಮುದ್ರವೂ ಮೇರಿಸಪ್ಪದಿ ಇದೆ!' ಎಂದು ಮುಂತಾಗಿ ಅಟ್ಟಕ್ಕೇರಿಸುವ ಮಾತು ಗಳಿಂದ ಹೊಗಳುತ್ತಿದ್ದರಂತೆ. ದೊರೆಯು ಆಗ ಸಮುದ್ರದ ದಡದಲ್ಲಿಯೇ ಒಂದು ಉಚ್ಚಾಸನದ ಮೇಲೆ ಕುಳಿತಿದ್ದನು. 'ಈ ಜನರಿಗೆ ವಿವೇಕಬರುವಂತೆ ನಿಜವಾದ ಸ್ಥಿತಿಯ ಮನವರಿಕೆಮಾಡಿಕೊಡುವದು ಅವಶ್ಯ" ಎಂದುಕೊಂಡು ಅವನು, 'ಎಲೊ ಸಾಗರವೆ, ನನ್ನ ಅಧಿಕಾರಕ್ಕೆ ಮನ್ನಣೆಯಿತ್ತು ನೀನು ಕೆಲವು ಅಡಿಗಳಷ್ಟು ದೂರ ಹಿಂದಕ್ಕೆ ಹೋಗು!' ಎಂದು ಗರ್ಜಿಸಿದನಂತೆ! ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಸಾಗರದ ಅಲೆಗಳು ಬಲವಾಗಿ ಉಕ್ಕಿಬಂದು ಅವನ ಆಸನದ ಮೇಲೆ ನುಗ್ಗಿ ಬಿಟ್ಟವಂತೆ! ರಾಜನು ತನ್ನ ನೌಕರರಕಡೆಗೆ ಮುಖವನ್ನು ತಿರುಗಿಸಿ ನೋಡುವಾಗ ಅವರೆಲ್ಲ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡಿದ್ದರು! ಧನಿಕ ರನ್ನು ಹೀಗೆ ವೃಥಾಸ್ತುತಿಯಿಂದ ಉಬ್ಬಿಸಿ ತಮ್ಮ ಇಷ್ಟಾರ್ಥವನ್ನು ಪಡೆದು ಕೊಳ್ಳುವ ಧೂರ್ತರೂ ಇರುತ್ತಾರೆ. ಆದರೆ ಭಗವಂತನ ಸ್ತೋತ್ರವೆಂದರೆ ಈ ಬಗೆಯ ಹೊಗಳಿಕೆಯೂ ಅಲ್ಲ.

ಶಿವಮಹಿಮ್ನಃಸ್ತೋತ್ರವೆಂಬುದೊಂದು ಸ್ತೋತ್ರವಿದೆ. ಅದರಲ್ಲಿ ಪುಷ್ಪದಂತನೆಂಬವನು ಹೇಳಿರುವದೇನೆಂದರೆ 'ಬ್ರಹ್ಮಾದಿಗಳು ಮಾಡುವ ಸ್ತುತಿಗಳೂ ನಿನ್ನ ಮಹಿಮೆಯ ಪಾರವನ್ನು ಕಂಡರಿಯವು. ಆದರೆ ತಮ್ಮತಮ್ಮ ಶಕ್ತಿಗೆ ತಕ್ಕಷ್ಟು ಸ್ತುತಿಸುವದೇನೂ ತಪ್ಪಲ್ಲವಷ್ಟೆ? ಆ ದೃಷ್ಟಿಯಿಂದ ನಾನು ಸ್ತೋತ್ರ ಮಾಡುವದೂ ತಪ್ಪಲ್ಲವೆಂದೇ ಆಗುತ್ತದೆ, ನಿನ್ನ ಮಹಿಮೆಯು ವಾಙ್ಮನಸ್ಸುಗಳ ಕ್ಷೇತ್ರವನ್ನೇ ಮೀರಿರುತ್ತದೆ. ಶ್ರುತಿಯುಕೂಡ ನಿನ್ನನ್ನು 'ನೇತಿ ನೇತಿ' ಎಂದು ಅತದ್ಧರ್ಮನಿವೃತ್ತಿಪೂರ್ವಕವಾಗಿಯೇ ಬಣ್ಣಿಸುತ್ತಿರುವದು. ಇಂಥ ನಿನ್ನನ್ನು ಯಾವನುತಾನೆ ಸ್ತುತಿಸಿಯಾನು? 'ಎಷ್ಟು ಗುಣಗಳುಳ್ಳವನು?'–ಎಂಬುದನ್ನು ಯಾರುತಾನೆ ಲೆಕ್ಕಹಾಕಿ ಹೇಳಿಯಾನು? ಯಾವನ ಮನಸ್ಸು, ಯಾವನ ವಾಕ್ಕುತಾನೆ, ನಿನ್ನನ್ನು ಸ್ತೋತ್ರಮಾಡುವಾಗ, ಇತ್ತಲಿನ ಕ್ಷೇತ್ರಕ್ಕೆ ಸೇರದೆ ಇದ್ದೀತು?" ಈ ದೃಷ್ಟಿಯಿಂದ ನೋಡುವಾಗ ಪರಮಾತ್ಮನಲ್ಲಿರುವ ಗುಣಗಳು ಅನಂತ, ಮನುಷ್ಯನ ಮನಸ್ಸೂ ವಾಕ್ಕೂ ಪರಿಚ್ಛಿನ್ನಕ್ಷೇತ್ರಕ್ಕೇ ಸೇರಿದವುಗಳು. ಪಕ್ಷಿಗಳು ಎಷ್ಟುಮೇಲಕ್ಕೆ ಹಾರಿದರೂ ಆಕಾಶದ ಕೊನೆಯನ್ನು ಮುಟ್ಟುತ್ತವೆ ಎಂಬ ಆಶೆಯುಂಟೆ? ಹಾಗೆಯೇ ನಾವು ನಮ್ಮ ಶಕ್ತಿಯಿದ್ದಷ್ಟು ಪರಮಾತ್ಮನ ಮಹಿಮೆಯನ್ನು ಕೊಂಡಾಡಿ ನಮ್ಮ ವಾಙ್ಮನಸ್ಸುಗಳನ್ನು ಪವಿತ್ರಗೊಳಿಸಿಕೊಳ್ಳಬಹುದೇ ಹೊರತು ಭಗವಂತನನ್ನು ಸಂಪೂರ್ಣವಾಗಿ ಸ್ತುತಿಸುವೆವೆಂಬ ಭರವಸೆ ಎಂದಿಗೂ ಇರುವದಿಲ್ಲ. ಆದ್ದರಿಂದ ಧನಿಕರನ್ನು ಧನೇಚ್ಛೆಯಿಂದ ಜನರು ಆದರಪೂರ್ವಕವಾಗಿ ಸ್ಪೃಹಾಸ್ತುತಿಯಿಂದ ಹೊಗಳುವಂತೆ, ಪರಮಾತ್ಮನ ವಿದ್ಯಮಾನ ಕಲ್ಯಾಣಗುಣಗಳನ್ನು ಹೊಗಳಿದರೆ ಸಾಧಕರು ಸಂಸಾರಬಂಧದಿಂದ ಮುಕ್ತರಾಗುವರೆಂದು ನಂಬಬೇಕು.

ಭೀಷ್ಮರು ಉತ್ತರಾಯಣನಿರೀಕ್ಷೆಯಿಂದ ಶರತಲ್ಪಗತರಾಗಿರುವಾಗ ಶ್ರೀಕೃಷ್ಣನು ಧರ್ಮರಾಯನನ್ನು ಅವರ ಬಳಿಗೆ ತತ್ತ್ವೋಪದೇಶಕ್ಕಾಗಿ ಕರೆತಂದಿದ್ದನು. ಧರ್ಮರಾಯನಿಗೆ ರಾಜಧರ್ಮ, ಆಪದ್ಧರ್ಮ, ಮೋಕ್ಷಧರ್ಮ– ಇವುಗಳೆಲ್ಲವೂ ಭೀಷ್ಮರಿಂದಲೇ ಉಪದಿಷ್ಟವಾಗಿರುತ್ತವೆ. ಭೀಷ್ಮರು ಎಂದಿಗೂ 'ಆಚಾರ್ಯರು' ಎನಿಸಿಕೊಂಡಿರುತ್ತಾರೆ. ಜೀವತ್ಪಿತೃಗಳೂ ಯಮಭೀಷ್ಮರಿಗೆ ತರ್ಪಣವನ್ನು ಕೊಡಬೇಕು–ಎಂದು ವಿಶೇಷಸ್ಮೃತಿವಚನವಿದೆ; ಅಂಥ ವಿಭೂತಿಪುರುಷರು ಭೀಷ್ಮರು! ಅವರು ದೇಹತ್ಯಾಗವನ್ನು ಮಾಡುವಾಗ ಯಾವ ಯೋಗವನ್ನು ಧಾರಣೆಮಾಡಿದರು?–ಎಂಬ ಜನಮೇಜಯನ ಪ್ರಶ್ನೆಗೆ ವೈಶಂಪಾಯನರು ಕೊಟ್ಟ ಉತ್ತರವು ರಾಜಧರ್ಮದ ನಲವತ್ತೇಳನೆಯ ಅಧ್ಯಾಯದಲ್ಲಿದೆ. ಆಗ ಅಲ್ಲಿ ವ್ಯಾಸನಾರದಾದಿಋಷಿಗಳು ಉಪಸ್ಥಿತರಾಗಿದ್ದರು. ಶ್ರೀಕೃಷ್ಣನು ಅವರ ಎದುರಿಗೇ ಇದ್ದನು. ಯಾವಾತನನ್ನು ಯೋಗಿಗಳು ದೇಹತ್ಯಾಗಕಾಲದಲ್ಲಿ

ಯತ್ನಪೂರ್ವಕವಾಗಿ ಚಿತ್ತದಲ್ಲಿಟ್ಟುಕೊಳ್ಳುವರೋ ಆ ಸಾಕ್ಷಾತ್ ಶ್ರೀಹರಿಯನ್ನೇ ಕಣ್ಣಿನಿಂದ ನೋಡುತ್ತಾ ಆ ಭೀಷ್ಮರು ಪ್ರಾಣತ್ಯಾಗವನ್ನು ಮಾಡಿದರು ! ಅವರು :

ಆರಿರಾಧಯಿಷುಃ ಕೃಷ್ಣಂ ವಾಚಂ ಜಿಗದಿಷಾಮಿ ಯಾಮ್ ।
ತಯಾ ವ್ಯಾಸಸಮಾಸಿನ್ಯಾ ಪ್ರೀಯತಾಂ ಪುರುಷೋತ್ತಮಃ ॥

ಕೃಷ್ಣನನ್ನು ಆರಾಧನೆಮಾಡುವ ಇಚ್ಛೆಯಿಂದ ಯಾವ ವಾಕ್ಯವನ್ನು ಹೇಳುತ್ತಿರುವೆನೋ, ಸಂಕ್ಷೇಪವಿಸ್ತಾರರೂಪವಾಗಿರುವ ಆ ವಾಕ್ಯದಿಂದ ಆ ಪುರುಷೋತ್ತಮನು ಸುಪ್ರೀತನಾಗಲಿ !—ಎಂದು ಪ್ರಾರಂಭಿಸಿರುತ್ತಾರೆ. ಅವರು ಮಾಡಿರುವ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವುದೇ ಒಂದು ಭಗವದಾರಾಧನೆ. ಇದನ್ನು ಭೀಷ್ಮಸ್ತವರಾಜ ಎಂಬ ಹೆಸರಿನಿಂದ ಕನ್ನಡದ ವಿವರಣೆಯ ಸಹಿತವಾಗಿ ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ಪ್ರಕಟಿಸಲಾಗಿದೆ. ಈ ಸ್ತೋತ್ರವನ್ನು ಶ್ರೀಶಂಕರಭಗವತ್ಪಾದರವರು ತಮ್ಮ ಸೂತ್ರಭಾಷ್ಯದಲ್ಲಿ ಉದಾಹರಿಸಿರುತ್ತಾರೆಂಬುದರಿಂದಲೇ ಆಧ್ಯಾತ್ಮಿಕವಾಙ್ಮಯದಲ್ಲಿ ಇದಕ್ಕಿರುವ ಹೆಚ್ಚಿನ ಸ್ಥಾನವನ್ನು ನಿರ್ಣಯಿಸಬಹುದು. ಏಕೆಂದರೆ ಸೂತ್ರಭಾಷ್ಯದಲ್ಲಿ ಉದಾಹರಿಸಿರುವ ಪ್ರಮಾಣವಾಕ್ಯಗಳು ಸರ್ವಸಮ್ಮತವಾಗಿ ವೇದಾಂತರಹಸ್ಯವನ್ನು ತಿಳಿಯುವದಕ್ಕೆ ಸಾಧನವಾಗಿರುವ ಮೂಲಗ್ರಂಥಗಳಿಗೇ ಸೇರಿರುತ್ತವೆ. ಪ್ರಕೃತ, ಈ ಸ್ತೋತ್ರದಲ್ಲಿ ಪರಮೇಶ್ವರನ ತತ್ತ್ವ, ಸಾಂಖ್ಯಯೋಗಾದಿಗಳ ಮರ್ಮ, ಭಕ್ತಿಯ ರಹಸ್ಯ—ಎಲ್ಲವೂ ಅಡಗಿರುತ್ತವೆ.

ಭಗವಂತನ ಮಹಿಮೆಯೂ ಕಲ್ಯಾಣಗುಣಗಳೂ ಸ್ಮರಣಮಾತ್ರದಿಂದ ಕಲ್ಯಾಣವನ್ನುಂಟುಮಾಡತಕ್ಕವು. ಶ್ರೀಮದ್ಭಾಗವತದಲ್ಲಿ ಸೂತರು ಹೀಗೆಂದಿರುತ್ತಾರೆ :

ಯಂ ಬ್ರಹ್ಮಾ ವರುಣೇನ್ದ್ರರುದ್ರಮರುತಃ ಸ್ತುನ್ವನ್ತಿ ದಿವ್ಯೈಃ ಸ್ತವೈಃ
ವೇದೈಃ ಸಾಙ್ಗಪದಕ್ರಮೋಪನಿಷದೈರ್ಗಾಯನ್ತಿ ಯಂ ಸಾಮಗಾಃ ।
ಧ್ಯಾನಾವಸ್ಥಿತತದ್ಗತೇನ ಮನಸಾ ಪಶ್ಯನ್ತಿ ಯಂ ಯೋಗಿನಃ
ಯಸ್ಯಾನ್ತಂ ನ ವಿದುಃ ಸುರಾಸುರಗಣಾ ದೇವಾಯ ತಸ್ಮೈ ನಮಃ ॥

ಭಾಗ. ೧೨–೧೩–೧

ಆ ಭಗವಂತನನ್ನು— ನಾಲ್ಕು ವೇದಗಳನ್ನೂ ನಾಲ್ಕು ಮುಖಗಳಿಂದ ಹೊರಗೆಡಹಿರುವ— ಬ್ರಹ್ಮನೂ ದಿವ್ಯಸ್ತೋತ್ರದಿಂದ ಕೊಂಡಾಡುತ್ತಿರುವನು. ವರುಣ, ಇಂದ್ರ, ರುದ್ರ, ಮರುದ್ದೇವತೆಗಳು—ಇಂಥ ಮಹಾಮಹಿಮರೂ ದಿವ್ಯಸ್ತೋತ್ರ

ಗಳಿಂದ ಸ್ತುತಿಸುತ್ತಿರುವರು. ಸಾಮದ ರಹಸ್ಯವನ್ನೆಲ್ಲ ಬಲ್ಲವರು ಅಂಗ, ಪದ, ಉಪನಿಷತ್ತುಗಳು— ಇವುಗಳಿಂದ ಕೂಡಿ ವೇದಗಳಿಂದ ಗಾನಮಾಡುತ್ತಿರುವರು. ಯೋಗಿಗಳು ಧ್ಯಾನದಲ್ಲಿ ನೆಲೆನಿಂತ ಸಂಸ್ಕೃತವಾದ ಮನಸ್ಸಿನಿಂದ ದರ್ಶನಮಾಡುತ್ತಿರುವರು. ಇಂಥ ಮಹಾಮಹಿಮನನ್ನು ನಮ್ಮನಮ್ಮ ಯೋಗ್ಯತೆಯಿದ್ದಷ್ಟು ಸ್ತುತಿಸುವದರಿಂದ ನಮ್ಮ ಚಿತ್ತಕ್ಕೆ ನೈರ್ಮಲ್ಯವು ದೊರಕುವದೆಂಬುದನ್ನು ಹೇಳಬೇಕೆ ?

ಭಗವಂತನಿಗೆ ಪುರಾಣಪುರುಷನೆಂಬ ಸುಪ್ರಸಿದ್ಧನಾಮವಿದೆ. ಆತನು 'ಪುರಾಪಿ ನವ ಏವ' ಹಿಂದಕ್ಕೂ ಇಂದಿಗೂ ಎಂದೆಂದಿಗೂ ಹೊಸಬನೇ—ಎಂಬುದು ಆ ಹೆಸರಿನಲ್ಲಿ ಅಡಗಿರುವ ಅಭಿಪ್ರಾಯ. ಪುರಾಣಗಳಲ್ಲಿ ವಿಧವಿಧವಾಗಿ ಆತನನ್ನು —ಬೇರೆಬೇರೆಯ ಆಖ್ಯಾನಗಳನ್ನು ನಿಮಿತ್ತವಾಗಿಟ್ಟುಕೊಂಡು— ಸ್ತುತಿಸಿರುತ್ತದೆ. ಅಂಥ ಸ್ತೋತ್ರಗಳನ್ನು ಅನೇಕರು ಸಂಗ್ರಹಿಸಿ ಪ್ರಕಾಶಪಡಿಸಿರುತ್ತಾರೆ. ಬಲ್ಲವರಿಂದ ಅರ್ಥವನ್ನು ತಿಳಿದುಕೊಂಡು ಋಷಿವಚನರೂಪವಾಗಿರುವ ಆ ಸ್ತೋತ್ರಗಳನ್ನು ಪಠಿಸಿದರೆ ಭಗವಂತನನ್ನು ಹೃದಯದಲ್ಲಿ ಸಂನಿಹಿತನನ್ನಾಗಿ ಮಾಡಿಕೊಳ್ಳುವದಕ್ಕೆ ಒಂದು ಉತ್ತಮವಾದ ಉಪಾಯವು ದೊರಕಿದಂತೆ ಆಗುತ್ತದೆ. ಈಚೆಗೆ ಕಲಿಯುಗದಲ್ಲಿ ಪುರಂದರದಾಸರು, ಕನಕದಾಸರು, ಕಬೀರದಾಸರು, ತ್ಯಾಗರಾಜರು, ಸಮರ್ಥರಾಮದಾಸರು, ತುಕಾರಾಮರು, ಮೀರಾಬಾಯಿ— ಮುಂತಾದವರು ಬೇರೆಬೇರೆಯ ದೇಶಭಾಷೆಗಳಲ್ಲಿ ಪದಪದ್ಯಗಳನ್ನು ರಚಿಸಿ ಭಗವಂತನನ್ನು ಹಾಡಿಹೊಗಳಿರುತ್ತಾರೆ. ಇವು ಎಲ್ಲೆಲ್ಲಿಯೂ ಜನಾನುರಾಗಕ್ಕೆ ಪಾತ್ರವಾಗಿವೆ. ಅವುಗಳ ಮೂಲಕವಾಗಿ ಭಗವಂತನನ್ನು ಸ್ತುತಿಸಿಯಾದರೂ ನಾವು ಕೃತಕೃತ್ಯರಾಗಬಹುದು.

ಈ ಸ್ತೋತ್ರರೂಪವಾದ ವಾಕ್ಕು ನಿಜವಾಗಿ ನಮ್ಮಲ್ಲಿ ಎಲ್ಲಿರುತ್ತದೆ? ಅದು ಹೇಗೆ ಮೇಲಕ್ಕೆ ಚಿಮ್ಮುತ್ತದೆ ?— ಎಂಬುದನ್ನು ಕುರಿತು ಆಲೋಚಿಸುವದರಿಂದ ಲಾಭವುಂಟು. ಧ್ರುವನು ಉತ್ತಾನಪಾದನ ಕಿರಿಯಹೆಂಡತಿಯು ಆಡಿದ ಬಿರುನುಡಿಯಿಂದ ದುಃಖಿತನಾಗಿ ತಾಯಿಯಾದ ಸುನೀತಿಯ ಉಪದೇಶದಂತೆ ಭಗವಂತನಿಂದ ತನಗೆ ತಂದೆಯ ತೊಡೆಯಮೇಲೆ ಕುಳಿತುಕೊಳ್ಳುವ ಸುಯೋಗವು ದೊರಕಲಿ !— ಎಂದು ಹೊರಟನು. ದಾರಿಯಲ್ಲಿ ಋಷಿಗಳ ಉಪದೇಶದಿಂದ ಭಗವಂತನನ್ನು ಒಲಿಸಿಕೊಳ್ಳುವ ಮಾರ್ಗವನ್ನು ಅರಿತುಕೊಂಡುಬಂದು ತಪಸ್ಸುಮಾಡಿದಾಗ ಶ್ರೀಮನ್ನಾರಾಯಣನು ಅವನಿಗೆ ಪ್ರಸನ್ನನಾಗಿ ಪ್ರತ್ಯಕ್ಷನಾದನು. ನಾರದರ ಉಪದೇಶದಂತೆ ತಾನು ಮಾಡಿದ ಆರಾಧನೆಯಲ್ಲಿ ಕಲ್ಪಿಸಿಕೊಂಡಿದ್ದ ಮೂರ್ತಿಯೇ ಎದುರಿಗೆ ಬಂದಿದ್ದನ್ನು ಕಂಡು ಆ ಭಗವಂತನನ್ನು ಸ್ತುತಿಸಬೇಕೆಂದು ಆ ಹುಡುಗನು ತವಕಿಸುತ್ತಿದ್ದನು.

ಸ ತಂ ವಿವಕ್ಷಂತಮತದ್ವಿದಂ ಹರಿ–
ಜ್ಞಾತ್ವಾಸ್ಯ ಸರ್ವಸ್ಯ ಚ ಹೃದ್ಯವಸ್ಥಿತಃ ।
ಕೃತಾಂಜಲಿಂ ಬ್ರಹ್ಮಮಯೇನ ಕಮ್ಬುನಾ
ಪಸ್ಪರ್ಶ ಬಾಲಂ ಕೃಪಯಾ ಕಪೋಲೇ ॥ ಭಾಗ. ೪–೯–೪

ಹೀಗೆ ಮಾತನಾಡಬೇಕೆಂದು ತವಕತವಕಪಡುತ್ತಿದ್ದ ಆ ಬಾಲಕನ ಸ್ಥಾನದಲ್ಲಿಯೂ ಪ್ರತಿಯೊಬ್ಬನ ಹೃದಯದಲ್ಲಿಯೂ ಇರುವ ಸರ್ವಾಂತರ್ಯಾಮಿಯಾದ ಶ್ರೀಹರಿಯು ಅವನ ಮನೋಗತವನ್ನು ಅರಿತು ವೇದಮಯವಾದ ಶಂಖವನ್ನು ಅವನ ಕೆನ್ನೆಗೆ ತಾಕಿಸಿದನು. ಆಗ ಧ್ರುವನು ಮಾಡಿದ ಸ್ತೋತ್ರವನ್ನು ವ್ಯಾಸರು ಭಾಗವತದಲ್ಲಿ ಈ ಶ್ಲೋಕದಲ್ಲಿಟ್ಟಿರುತ್ತಾರೆ :

ಯೋಽನ್ತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಞ್ಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥
ಭಾಗ. ೪–೯–೬

ನನ್ನೊಳಗೆ ಹೊಕ್ಕು ಪ್ರಸುಪ್ತವಾಗಿದ್ದ ನನ್ನ ವಾಕ್ಕನ್ನು–ಸಮಸ್ತ ಶಕ್ತಿಗಳಿಂದೊಡಗೂಡಿದ ಯಾವ ಭಗವಂತನು ತನ್ನ ತೇಜಸ್ಸಿನಿಂದ ಎಬ್ಬಿಸುತ್ತಿರುವನೋ, ಪಾಣಿಪಾದಶ್ರವಣತ್ವಗಾದಿಯಾಗಿ ಎಲ್ಲಾ ಇಂದ್ರಿಯಗಳನ್ನೂ ಯಾವ ಭಗವಂತನೇ ಸಂಜೀವನಗೊಳಿಸುತ್ತಿರುವನೋ, ಆ ಪುರುಷನಾದ ಭಗವಂತನೇ, ನಿನಗೆ ನಮಸ್ಕಾರ! ಇದು ಉಪನಿಷತ್ತಿನಲ್ಲಿ ಉಪದಿಷ್ಟವಾಗಿರುವ ರಹಸ್ಯೋಪದೇಶ. ಶಬ್ದಸ್ಪರ್ಶರೂಪರಸಗಂಧಗಳನ್ನು ಬೆಳಗಿ ತೋರಿಸುವ ಶ್ರೋತ್ರತ್ವಕ್ಚಕ್ಷೂರಸನಾನಾಸಿಕೆಗಳು ತಮ್ಮ ತಮ್ಮ ವಿಷಯವನ್ನು ತೋರಿಸುವ ಶಕ್ತಿಯನ್ನು ಹೇಗೆ ಪಡೆದುಕೊಂಡಿರುತ್ತವೆ? ಎಂದರೆ ಆಯಾ ಇಂದ್ರಿಯದ ವೃತ್ತಿಯನ್ನು ಎಬ್ಬಿಸಿ ಅವರಲ್ಲಿ ತನ್ನ ಚೈತನ್ಯದ ಬೆಳಕನ್ನು ತುಂಬಿ ಭಗವಂತನೇ ಅವಕ್ಕೆ ಈ ಎಲ್ಲಾ ಶಕ್ತಿಯನ್ನೂ ಕೊಟ್ಟಿರುತ್ತಾನೆ. ನಮ್ಮ ಶರೀರಕರಣಗಳನ್ನೆಲ್ಲಿ ತುಂಬಿಕೊಂಡಿರುವದರಿಂದ ಆತನು ಪುರುಷನು; ಆತನ ಮಹಿಮೆಯಿಂದಲೇ ನಾವು ಮಾತನಾಡುತ್ತಿರುವದು. ಆತನೇ ಅನುಗ್ರಹಿಸಿರುವ ವಾಗಿಂದ್ರಿಯವನ್ನು ಆ ತ ನ ಗುಣಕರ್ಮಲೀಲಾದಿಗಳನ್ನು ಸ್ತುತಿಸುವದಕ್ಕೂ ವಿನಿಯೋಗಿಸಿದರೆ ಕೃತಜ್ಞರೂ ಕೃತಕೃತ್ಯರೂ ಆದಂತಾಗುವದು.

ಭಾರತದಲ್ಲಿ ಧರ್ಮರಾಯನು ಕೇಳಿದ ಪ್ರಶ್ನೆಯನ್ನೂ ಅದಕ್ಕೆ ಭೀಷ್ಮರು ಕೊಟ್ಟಿರುವ ಉತ್ತರವನ್ನೂ ಉದಾಹರಿಸುವದು ಅವಶ್ಯ. ಯುಧಿಷ್ಠಿರನು :

**ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಮ್ ।**
**ಸ್ತುವನ್ತಃ ಕಂ ಕಮರ್ಚನ್ತಃ ಪ್ರಾಪ್ನುಯುರ್ಮಾನವಾಃ ಶುಭಮ್ ॥**
**ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ ।**
**ಕಿಂ ಜಪನ್ಮುಚ್ಯತೇ ಜನ್ತುರ್ಜನ್ಮಸಂಸಾರಬನ್ಧನಾತ್ ॥**

ಲೋಕಕ್ಕೆಲ್ಲ ಒಬ್ಬನೇ ದೇವನು ಯಾವಾತನು ? ಕೊನೆಗೆ ಎಲ್ಲರಿಗೂ ಗತಿಯಾಗಿ ರುವವನೂ ಯಾವಾತನು ? ಯಾವನನ್ನು ಸ್ತೋತ್ರಮಾಡುತ್ತಾ, ಅರ್ಚಿಸುತ್ತಾ ಇದ್ದರೆ ಮನುಷ್ಯನಿಗೆ ಶುಭಪ್ರಾಪ್ತಿಯಾದೀತು ? ಧರ್ಮಗಳೊಳಗೆಲ್ಲ ನಿನಗೆ ಪರಮಧರ್ಮವೆನಿಸಿರುವುದು ಯಾವುದು ? ಜೀವನು ಯಾವುದನ್ನು ಜಪಿಸುತ್ತಿದ್ದರೆ ಜನ್ಮಸಂಸಾರದ ಬಂಧನದಿಂದ ಮುಕ್ತನಾಗುವನು ?—ಎಂದು ಕೇಳಿದ್ದಕ್ಕೆ ಭೀಷ್ಮರು—ದೇವದೇವನಾದ ವಿಷ್ಣುವನ್ನೇ ಸಹಸ್ರನಾಮಗಳಿಂದ ಸ್ತುತಿಸುತ್ತಿದ್ದರೆ ಆತನನ್ನೇ ಅರ್ಚಿಸುತ್ತಿದ್ದರೆ, ಧ್ಯಾನಿಸುತ್ತಿದ್ದರೆ, ನಮಸ್ಕರಿಸುತ್ತಿದ್ದರೆ ಅವನಿಗಾಗಿ ಯೇ ಯಾಗವನ್ನು ಮಾಡಿದರೆ ಸದ್ಗತಿಯಾಗುವದು.

**ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ ।**
**ಯದ್ಭಕ್ತ್ಯಾ ಪುಣ್ಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥**

ಭಕ್ತಿಯಿಂದ ಮನುಷ್ಯನು ಭಗವಂತನನ್ನು ಸ್ತೋತ್ರಗಳಿಂದ ಯಾವಾಗಲೂ ಸ್ತುತಿಸಿ ಅರ್ಚಿಸಬೇಕೆಂಬುದು ಧರ್ಮಗಳೊಳಗೆಲ್ಲ ಹೆಚ್ಚಿನ ಧರ್ಮವೆಂದು ನನ್ನ ಮತವು—ಎಂದು ಹೇಳಿರುತ್ತಾರೆ. ವೈಕುಂಠದ ದ್ವಾರದಲ್ಲಿ ಯಾವಾಗಲೂ ಇದ್ದು ಕೊಂಡಿರುವ ನಿವೃತ್ತಿಧರ್ಮನಿಷ್ಠರಾದ ಸನಕಾದಿಗಳು ಭಗವಂತನನ್ನು ಸ್ತೋತ್ರ ಮಾಡುತ್ತಿರುತ್ತಾರೆ ಎಂದಮೇಲೆ ಸ್ತೋತ್ರರೂಪವಾದ ಆರಾಧನೆಯ ಮಹಿಮೆ ಯನ್ನು ಹೇಳುವದೇನಿದೆ ? ವಿಷ್ಣುಸಹಸ್ರನಾಮಸ್ತೋತ್ರದ ಫಲಶ್ರುತಿಯಲ್ಲಿ ಹೇಳಿ ರುವ ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸದೆ ಇರುವದಕ್ಕೆ ಆಗವಂತಿಲ್ಲ.

**ವೇದಾನ್ತಗೋ ಬ್ರಾಹ್ಮಣಃ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ ।**
**ವೈಶ್ಯೋ ಧನಸಮೃದ್ಧಃ ಸ್ಯಾಚ್ಛೂದ್ರಃ ಸುಖಮವಾಪ್ನುಯಾತ್ ॥**

ಬ್ರಾಹ್ಮಣನು ಸ್ವಭಾವದಿಂದಲೇ ವೇದಾಭ್ಯಾಸಪರನಾಗಿರುವನಾದ್ದರಿಂದ ಅವನಿಗೆ ಈ ಸ್ತೋತ್ರಪಠನದಿಂದ ವೇದಾಂತದ ತತ್ತ್ವವು ತಿಳಿಯುವದು ; ಕ್ಷತ್ರಿಯನಿಗೆ ಧರ್ಮಯುದ್ಧದಲ್ಲಿ ಜಯವಾಗುವದು ; ವೈಶ್ಯನಿಗೆ ಧರ್ಮವಾಣಿಜ್ಯ ದಿಂದ ಧನಸಮೃದ್ಧಿಯಾಗುವದು ; ಶೂದ್ರನಿಗೆ ಧರ್ಮಕ್ಕಾಗಿ ಮಾಡಿದ ಜನತಾ ಸೇವೆಯಿಂದ ಸುಖಜೀವನವಾಗುವದು, ಇವು ಆಯಾ ವರ್ಣದವರಿಗೆ ಆಗುವ ಫಲಗಳು.

ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಮರ್ಥಾರ್ಥೀ ಚಾರ್ಥಮಾಪ್ನು
ಯಾತ್
ಕಾಮಾನವಾಪ್ನುಯಾತ್ಕಾಮೀ ಪ್ರಜಾರ್ಥೀ ಚಾಪ್ನುಯಾತ್
ಪ್ರಜಾಮ್

ಭಕ್ತಿಮಾನ್ ಯಃ ಸದೋತ್ಥಾಯ ಶುಚಿಸ್ತದ್ಗತಮಾನಸಃ
ಸಹಸ್ರಂ ವಾಸುದೇವಸ್ಯ ನಾಮ್ನಾಮೇತತ್ ಪ್ರಕೀರ್ತಯೇತ್ ॥
ಯಶಃ ಪ್ರಾಪ್ನೋತಿ ವಿಪುಲಂ ಜ್ಞಾತಿಪ್ರಾಧಾನ್ಯಮೇವ ಚ ।
ಅಚಲಾಂ ಶ್ರಿಯಮಾಪ್ನೋತಿ ಶ್ರೇಯಃ ಪ್ರಾಪ್ನೋತ್ಯನುತ್ತಮಮ್
ನ ಭಯಂ ಕ್ವಚಿದಾಪ್ನೋತಿ ವೀರ್ಯಂ ತೇಜಶ್ಚ ವಿನ್ದತಿ ।
ಭವತ್ಯರೋಗೋ ದ್ಯುತಿಮಾನ್ ಬಲರೂಪಗುಣಾನ್ವಿತಃ ।
ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬನ್ಧನಾತ್ ।
ಭಯಾನ್ಮುಚ್ಯೇತ ಭೀತಸ್ತು ಮುಚ್ಯೇತಾಪನ್ನ ಆಪದಃ ॥
ದುರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಮ್ ।
ಸ್ತುವನ್ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ ॥

ಈ ಶ್ಲೋಕಗಳಿಗೆ ವಿವರಣೆಯೇನೂ ಬೇಕಿಲ್ಲ. ಧರ್ಮ, ಅರ್ಥ, ಕಾಮ, ಮೋಕ್ಷ–ಎಂಬ ಯಾವ ಪುರುಷಾರ್ಥವಲ್ಲಿ ಅಭಿಲಾಷೆಯಿದ್ದರೂ ಅದು ಇದರಿಂದ ಲಭಿಸುವದು ಎಂದು ಇದನ್ನು ಕೊಂಡಾಡಿದೆ. ಸ್ತೋತ್ರದಲ್ಲಿರುವ ನಾಮಗಳು ಭಗವಂತನ ಗುಣಗಳನ್ನೇ ಹೇಳುತ್ತವೆ. 'ಯಾನಿ ನಾಮಾನಿ ಗೌಣಾನಿ.... ತಾನಿ ವಕ್ಷ್ಯಾಮಿ ಭೂತಯೇ' ಎಂದು ಭಗವಂತನ ಗುಣನಾಮಗಳನ್ನೇ ಇಲ್ಲಿ ಹೇಳಿರುತ್ತೇನೆ–ಎಂದು ಭೀಷ್ಮರು ಹೇಳಿರುತ್ತಾರೆ. ನಾಲ್ಕು ವರ್ಣದವರಿಗೂ ಈ ಸ್ತೋತ್ರದಲ್ಲಿ ಅಧಿಕಾರವುಂಟೆಂದು ಭಾರತವ್ಯಾಖ್ಯಾನಕಾರರು ಹೇಳಿರುತ್ತಾರೆ.

ಸ್ತೋತ್ರರೂಪವಾದ ಭಗವದಾರಾಧನೆಯನ್ನು ವಾಗಿಂದ್ರಿಯಪಾಟವವಿರುವವರೆಲ್ಲರೂ ಅವಶ್ಯವಾಗಿ ಮಾಡಿ ಕೃತಾರ್ಥರಾಗಬೇಕು.

---

# ೨೦. ಕೀರ್ತನ

( 18—8—69 )

ಬಾಹ್ಯಪ್ರಪಂಚದ ಜ್ಞಾನಕ್ಕೂ, ಬಾಹ್ಯಜೀವನದಲ್ಲಿ ನೆಮ್ಮದಿಯಾಗಿರಬೇಕೆಂಬ ಇಚ್ಛೆಯಿಂದ ಬಾಹ್ಯಸಮಾಜಕ್ಕೂ ಹೊಂದುಗೆಯಾಗುವಂತೆ ನಮ್ಮ ಶರೀರಾದಿಗಳನ್ನು ಹೇಗೆ ಉಪಯೋಗಿಸುತ್ತೇವೆಯೋ ಅದಕ್ಕೆ ವಿಪರೀತ(ವಿರುದ್ಧ)ವಾದ ಪ್ರಕಾರದಲ್ಲಿಯೇ ಭಗವಂತನನ್ನು ಪಡೆಯಲು ಅವುಗಳನ್ನು ಉಪಯೋಗಿಸಬೇಕಾಗುವದು. ಶರೀರಾದಿಗಳ ಸದ್ಯಃಸುಖವೇ ನಮ್ಮ ಬಾಹ್ಯಜೀವನದ ಗುರಿಯಾದ್ದರಿಂದ ಅದಕ್ಕೆ ಒಪ್ಪಾಗುವಂತೆ ಅವನ್ನು ಉಪಯೋಗಿಸಬೇಕಾಗುವದು—ಎಂದರೆ ಅವುಗಳಿಗೆ ಬೇಕಾದ ಅಥವಾ ಬೇಡವಾದ ವಿಷಯಗಳನ್ನು ಅರಿತು ಅವುಗಳ ಅಳಾಗಿಯೇ ದುಡಿಯಬೇಕಾಗುತ್ತದೆ. ಆದರೆ ಅತೀಂದ್ರಿಯಪ್ರಪಂಚಕ್ಕೆ ಹೊಂದುವ ಜೀವನವನ್ನು ನಡೆಯಿಸಬೇಕಾದ ಶರೀರಾದಿಗಳನ್ನು ನಮ್ಮ ಹಿಡಿತದಲ್ಲಿಟ್ಟುಕೊಂಡು ನಡೆಯಿಸಬೇಕಾಗುವದು. ಅರ್ಚನೆ, ನಮಸ್ಕಾರ— ಇವುಗಳು ಶರೀರವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅದಕ್ಕಿಂತ ಬೇರೆಯಾಗಿರುವ ಪರಮಾತ್ಮನನ್ನು ಕಂಡುಕೊಳ್ಳುವ ಹಾದಿಯನ್ನು ತುಳಿಯುವದಕ್ಕೆ ಬೇಕಾದ ಸಾಧನಗಳು. ಸ್ತೋತ್ರವು ವಾಕ್ಪ್ರಧಾನವಾದ ಆಧ್ಯಾತ್ಮಿಕಸಾಧನ. ಇದರಂತೆಯೇ ಕೀರ್ತನೆಯೂ ವಾಕ್ಪ್ರಧಾನವಾಗಿರುತ್ತದೆ. ಈ ದಿನ ಅದನ್ನು ಕುರಿತು ವಿಚಾರಮಾಡುವದಕ್ಕೆ ಹೊರಟಿರುತ್ತೇನೆ.

ಪ್ರಾರ್ಥನೆ ಎಂಬುದು ಮನಸ್ಸಿಗೇ ಸೇರಿದ್ದಾದರೂ ಹಿರಿಯರು ಹೇಳಿಕೊಟ್ಟಿರುವ ಪ್ರಾರ್ಥನಾವಾಕ್ಯಗಳನ್ನು ನುಡಿಯುತ್ತಾ ಮನಸ್ಸಿನಲ್ಲಿ ಭಗವಂತನಿಂದ ನಮಗೆ ಬೇಕಾದ ಇಷ್ಟಾರ್ಥವನ್ನು ಬೇಡುವ ಪ್ರಕಾರವಾಗಿರುತ್ತದೆ. ಕ್ರಿಸ್ತಿಯನ್ನರು ದೇವರನ್ನು ಪ್ರಾರ್ಥಿಸುವದಕ್ಕೆ “ಪರಲೋಕದಲ್ಲಿರುವ ನಮ್ಮ ತಂದೆಯೆ, ಇಂದಿನ ಆಹಾರವನ್ನು ನಮಗೆ ದಯಪಾಲಿಸು’ ಎಂದುಮುಂತಾಗಿ ಪ್ರಾರ್ಥಿಸುತ್ತಾರೆ. ಹೀಗೆಯೇ ಮುಸಲ್ಮಾನರೂ ಪ್ರಾರ್ಥನಾಮಂತ್ರಗಳನ್ನು ಉಚ್ಚರಿಸುತ್ತಾ ಇಷ್ಟಾರ್ಥವನ್ನು ಕೇಳಿಕೊಳ್ಳುತ್ತಾರೆ. ಪ್ರತಿದಿನದ ಅರ್ಚನೆಯ ಕೊನೆಯಲ್ಲಿಯೂ ಸ್ತೋತ್ರಮಾಡಿ ತನ್ನ ಅಭೀಷ್ಟವನ್ನು ಪ್ರಾರ್ಥಿಸಬೇಕೆಂದು ನಮ್ಮ ಹಿರಿಯರೂ ಪದ್ಧತಿಯನ್ನು ಹಾಕಿಕೊಟ್ಟಿರುತ್ತಾರೆ. ಆದರೆ ಎಷ್ಟೋ ಜನರು ಉತ್ತರಪೂಜೆಯಲ್ಲಿ ‘ಮನಸಾಽಭೀಷ್ಟಪ್ರಾರ್ಥನಾಂ ಸಮರ್ಪಯಾಮಿ’ ಎಂದು ಮಂತ್ರಾಕ್ಷತೆಯನ್ನು ಅರ್ಪಿಸಿಬಿಡುವ ಆಚಾರವು ಬಂದುಬಿಟ್ಟಿರುತ್ತದೆ. ಪೂಜೆಯಕಾಲಕ್ಕೆ ನಮ್ಮ ಎದುರಿಗೇ ಭಗವಂತನು ಇರುತ್ತಾನೆಂಬ ಶ್ರದ್ಧೆಯಿದ್ದರೆ ಆಗ ನಾವು ನಮ್ಮ ಇಷ್ಟಾರ್ಥವನ್ನು ಕೇಳಿಕೊಳ್ಳದೆಇದ್ದೇವೆಯೆ ? ಆರೋಗ್ಯ,

ಧನಸಂಪತ್ತು, ವ್ಯವಹಾರದಲ್ಲಿ ಸಮೃದ್ಧಿ— ಮುಂತಾದವುಗಳು ಸಾಮಾನ್ಯರಿಗೆ ಬೇಕಾದರೆ ಮುಮುಕ್ಷುಗಳಿಗೆ ಕೂಡ ಭಗವಂತನಲ್ಲಿ ಬೇಡಿಕೊಳ್ಳತಕ್ಕದ್ದು ಇದ್ದೇ ಇರುತ್ತವೆ.

'ಅವಿನಯಮಪನಯ ವಿಷ್ಣೋ!
ದಮಯ ಮನಃ ಶಮಯ ವಿಷಯಮೃಗತೃಷ್ಣಾಮ್ ।
ಭೂತದಯಾಂ ವಿಸ್ತಾರಯ
ತಾರಯ ಸಂಸಾರಸಾಗರತಃ ।''

ವಿಷ್ಣುಭಗವಂತ, ಅವಿನಯವನ್ನು ತೊಲಗಿಸು! ಮನಸ್ಸನ್ನು ಹಿಡಿತಪಡಿಸು! ವಿಷಯದ ಆಸೆಯನ್ನು ನಾಶಗೊಳಿಸು! ಭೂತದಯೆಯನ್ನು ವಿಸ್ತರಿಸು! ಸಂಸಾರಸಾಗರದಿಂದ ಪಾರುಮಾಡಿಸು!—ಎಂದಿಂತು ಮುಮುಕ್ಷುಗಳು ಪ್ರಾರ್ಥನೆ ಮಾಡಬೇಕೆಂಬುದನ್ನು ದೊಡ್ಡವರು ತಿಳಿಯಿಸಿಕೊಟ್ಟಿರುತ್ತಾರೆ.

ಆದರೆ ಕೀರ್ತನೆಯಲ್ಲಿ ಪ್ರಾರ್ಥನೆಯ ಸಂಬಂಧವೂ ಇಲ್ಲದಿರಬಹುದು. ಕೀರ್ತನವೆಂಬ ಶಬ್ದಕ್ಕೆ ಗಟ್ಟಿಯಾಗಿ ಕೂಗಿಹೇಳುವದು—ಎಂದು ಅರ್ಥ. ಹರಿಕಥೆಯನ್ನು ಹೇಳುತ್ತಿರುವಲ್ಲಿ ದಾಸರು 'ಸರ್ವತ್ರ ಹರಿನಾಮಸಂಕೀರ್ತನೆ ಗೋವಿಂದಾ!' ಎಂದಾಗ ಶ್ರೋತೃಗಳೆಲ್ಲರೂ 'ಗೋವಿಂದ!' ಎಂದು ಒಟ್ಟಿಗೆ ಘೋಷಣೆ ಮಾಡುವದು ಕೀರ್ತನೆ. ಆದರೆ ಆಗ ಎಲ್ಲರಿಗೂ ಹೃದಯದಲ್ಲಿ ಹರಿಸ್ಮರಣೆ ಇರುತ್ತದೆಯೋ ಇಲ್ಲವೋ ಹೇಳುವದಕ್ಕೆ ಬರುವದಿಲ್ಲ. ಒಂದು ಮಗುವು— ದಾರಿಯಲ್ಲಿ ಯಾರಾದರೂ ತನ್ನ ಹತ್ತಿರಕ್ಕೆ ಬಂದಾಗ ಏನುಮಾಡುವರೋ— ಎಂಬ ಅಂಜಿಕೆಯಿಂದ 'ಅಮ್ಮಾ!' ಎಂದು ಕೂಗಿಕೊಳ್ಳುವಂತೆ ತನ್ನ ದುಃಖವನ್ನು ತೋಡಿಕೊಳ್ಳುವದಕ್ಕಾಗಿ ಮಾಡುವ ಆರ್ತನಾದವು 'ಕೀರ್ತನೆ' ಎನ್ನಿಸುವದು.

ಯಾವದಾದರೂ ಬಲವಾದ ರೋಗದಿಂದ ನರಳುತ್ತಿರುವಾಗ, ಬೆಂಕಿಯು, ಪರೋಡೆಕಾರರ, ಅಥವಾ ಯಾವದಾದರೊಂದು ದುಷ್ಟಮೃಗದಿಂದ ಭಯವಾಗಿರುವಾಗ, ಅಥವಾ ಮನೆಯೊಳಗೆ ಕಳ್ಳರುಗಳು ರಾತ್ರಿಯಲ್ಲಿ ನುಗ್ಗಿರುವಾಗ ಆದ ಭಯದಿಂದ ನಾವು "ಅಯ್ಯೊ! ಅಪ್ಪ!" ಎಂದು ಸಹಾಯಾರ್ಥವಾಗಿ ಕೂಗಿಕೊಳ್ಳುವದು ಸ್ವಾಭಾವಿಕ. ಹಾಗೆಯೇ ಆಶ್ಚರ್ಯ, ಸಂತೋಷ— ಮುಂತಾದ ಮನಸ್ಸಿನ ವೇದನೆಗಳ ಫಲವಾಗಿಯೂ ಜನರು ಗಟ್ಟಿಯಾಗಿ ಕೂಗಿಕೊಳ್ಳುವದುಂಟು. ಇದೇ ರೀತಿಯಲ್ಲಿ ಸಂಸಾರದ ತಾಪವನ್ನು ಸಹಿಸಲಾರದೆ, ಅಥವಾ ಮರಣಾದಿಗಳ ಅಂಜಿಕೆಯಿಂದ "ಭಗವಂತ!" "ನಾರಾಯಣ!", "ಗೋವಿಂದ!" —ಎಂದು ನಮ್ಮ ಮನಸ್ಸಿನ ವೇದನೆಯನ್ನು ಕೀರ್ತನೆಯಿಂದ ಭಗವಂತನಿಗೆ ಮುಟ್ಟಿಸುವ ಪ್ರಯತ್ನವನ್ನು ಮಾಡಬೇಕು. ಪ್ರಹ್ಲಾದನು ಯಾವಾಗಲೂ

ಭಗವಂತನ ನಾಮವನ್ನೇ ಭಕ್ತಿಯಿಂದ ಕೀರ್ತನವಾಡುತ್ತಿದ್ದವನ್ನು ಹಿರಣ್ಯ ಕಶಿಪುವು :

ಯಸ್ತ್ವಯಾ ಮನ್ದಭಾಗ್ಯೋಕ್ತೋ ಮದನ್ಯೋ ಜಗದೀಶ್ವರಃ ।
ಕ್ವಾಸೌ ಯದಿ ಸ ಸರ್ವತ್ರ ಕಸ್ಮಾತ್ ಸ್ತಮ್ಭೇ ನ ದೃಶ್ಯತೇ ॥

ಭಾಗ. ೭–೮–೧೩.

'ಎಲಾ ಮಂದಭಾಗ್ಯನೇ, ನೀನು ಹೇಳುವ, ನನಗಿಂತ ಬೇರೆಯಾಗಿರುವನೆಂಬ, ಆ ಜಗದೀಶ್ವರನು ಎಲ್ಲಿದ್ದಾನೆ ? ಇದ್ದರೆ ಅವನು ಈ ಕಂಬದಲ್ಲೇಕೆ ಕಾಣುವದಿಲ್ಲ ? ನಿನ್ನ ಶಿರಸ್ಸನ್ನು ಇಲ್ಲಿಯೇ ಕತ್ತರಿಸಿಬಿಡುವೆನು. ಆ ನಿನ್ನ ಶರಣ್ಯನಾದ ಹರಿ ಇದ್ದರೆ ನಿನ್ನನ್ನು ಕಾಪಾಡಲಿ!' ಎಂದು ಕತ್ತಿಯನ್ನು ಝಳಪಿಸುತ್ತ ಸಿಂಹಾಸನ ದಿಂದ ಎದ್ದುಬಂದು ಕಂಬವನ್ನು ಗುದ್ದಲು–

ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ
ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯತಾತ್ಯದ್ಭುತರೂಪಮುದ್ವಹನ್
ಸ್ತಮ್ಭೇ ಸಭಾಯಾಂ ನ ಮೃಗಂ ನ ಮಾನುಷಮ್ ॥

ಭಾಗ. ೭–೮–೧೮.

ಭಕ್ತನ ಮಾತನ್ನೂ, ತಾನು ಸರ್ವಭೂತಗಳಲ್ಲಿಯೂ ವ್ಯಾಪ್ತನಾಗಿದೇನೆಂಬುದನ್ನೂ ಸತ್ಯವಾಗಿ ಮಾಡಬೋಸುಗವೂ ಮೃಗವೂ ಅಲ್ಲದ ಮನುಷ್ಯನೂ ಅಲ್ಲದ ಅತ್ಯ ದ್ಭುತವಾದ ರೂಪವನ್ನು ತಾಳಿ ಸಭೆಯ ನಡುವೆಯಿದ್ದ ಆ ಕಂಬದಿಂದಲೇ ಹೊರಕ್ಕೆ ಬಂದ ಶ್ರೀನರಸಿಂಹನು, ಭಕ್ತರ ಕೀರ್ತನೆಗೆ ಓಗೊಟ್ಟು ಅಲ್ಲಿಯೇ ಬಂದು ಕಾದಿರುತ್ತಾನೆ.

ಆರ್ತಾ ವಿಷಣ್ಣಾಃ ಶಿಥಿಲಾಶ್ಚ ಭೀತಾ
ಘೋರೇಷು ಚ ವ್ಯಾಧಿಷು ವರ್ತಮಾನಾಃ ।
ಸಂಕೀರ್ತ್ಯ ನಾರಾಯಣಶಬ್ದಮಾತ್ರಂ
ವಿಮುಕ್ತದುಃಖಾಃ ಸುಖಿನೋ ಭವನ್ತಿ ॥

ಎಂಬ ಋಷಿವಾಕ್ಯವನ್ನು ನಾವು ಚೆನ್ನಾಗಿ ಮನಸ್ಸಿನಲ್ಲಿ ಊಡಿಸಿಕೊಳ್ಳಬೇಕು. ನಾವು ಯಾವದಾದರೂ ರೋಗದಿಂದ ನರಳುತ್ತಿರುವಾಗ ಚಿಕಿತ್ಸೆಗೆಂದು ಆಸ್ಪತ್ರೆಗೆ ಹೋದರೆ ನಮ್ಮ ಹೆಸರು, ತಂದೆತಾಯಿಗಳ ಹೆಸರು, ವಯಸ್ಸು, ಮನೆ, ಊರು ಮುಂತಾದವುಗಳ ವಿವರವನ್ನು ಕೇಳುತ್ತಾರೆ. ಭಗವಂತನು ಈ ಯಾವ ವಿವರ ವನ್ನೂ ಕೇಳುವದಿಲ್ಲ. 'ನಾರಾಯಣ ! ನಾರಾಯಣ !' ಎಂದು ಆರ್ತನಾದ

ವನ್ನು ಮಾಡಿದ ಅಜಮಿಳನ ಹತ್ತಿರಕ್ಕೆ ಓಡಿಬಂದು ಯಮದೂತರ ಭಯದಿಂದ ಅವನನ್ನು ಬಿಡಿಸಿದ ವಿಷ್ಣುದೂತರ ಕಥೆಯನ್ನು ಕೇಳಿದರೆ ಇದರಲ್ಲಿ ನಮಗೆ ಭರವಸೆಯಾಗುತ್ತದೆ. ಅಜಮಿಳನು ಶ್ರೋತ್ರಿಯಬ್ರಾಹ್ಮಣನಾದರೂ ಮಾಡಬಾರದ್ದನ್ನು ಮಾಡಿ ಅಗಮ್ಯಳಾದ ಸ್ತ್ರೀಯ ಸಂಗದಿಂದ ಪಡೆದ ಮಕ್ಕಳ ಮೋಹದ ಪಾಶದಲ್ಲಿ ಬಿದ್ದು ಸಂಕಟಪಡುತ್ತಿದ್ದನು. ಅವನಿಗೆ ಪ್ರಾಣಸಂಕಟವು ಪ್ರಾಪ್ತವಾದಾಗ ಕಾಣಿಸಿಕೊಂಡ ಯಮದೂತರ ವಿಕೃತವೇಷವನ್ನು ನೋಡಿ ತನ್ನ ಮಗನಿಗೆ ಏನು ಅಪಾಯವಾಗುವದೋ ಎಂದುಕೊಂಡು 'ನಾರಾಯಣ !' ಎಂದು ಹೆಸರಿಟ್ಟುಕೊಂಡಿದ್ದ ಮಗನನ್ನು ಹೆಸರಿಟ್ಟು ಕೂಗಿಕೊಂಡನು. ಅಷ್ಟು ಮಾತ್ರದಿಂದ ಅತ್ತ ಹೋಗುತ್ತಿದ್ದ ವಿಷ್ಣುದೂತರು ಬಂದು ಸಾಂಕೇತಿಕವಾಗಿ ಅವನು ಮಗನ ಹೆಸರನ್ನು ಕೂಗಿದರೂ 'ಅದು ನಾರಾಯಣನ ಹೆಸರು, ಆದ್ದರಿಂದ ಅವನನ್ನು ಯಮಪಾಶದಿಂದ ಬಿಗಿಯಬಾರದು!' ಎಂದು ಬಿಡಿಸಿಬಿಟ್ಟರು. ಅಷ್ಟರಿಂದಲೇ ಅವನಿಗೆ ಪಶ್ಚಾತ್ತಾಪವು ಬಂದು, 'ಎಲ, ಎಲಾ ! ಎಂಥ ಪಾಪ ಕೃತ್ಯಕ್ಕೆ ವಶನಾಗಿಬಿಟ್ಟೆನಲ್ಲ ! ಯಾವದೋ ನಿಮಿತ್ತದಿಂದ ನಾನು ನಾರಾಯಣ ಶಬ್ದವನ್ನು ಉಚ್ಚರಿಸಿದಮಾತ್ರದಿಂದಲೇ ಇಂಥ ಭಯಪರಿಹಾರವಾಗುತ್ತಿರುವಲ್ಲಿ ಮನಃಪೂರ್ವಕವಾಗಿ ಆ ಭಗವಂತನ ಧ್ಯಾನವನ್ನು ಮಾಡಿದರೆ ಇನ್ನೆಂಥ ಪುರುಷಾರ್ಥನಾಗಬೇಡ !'—ಎಂದುಕೊಂಡು ಕೂಡಲೆ ವಿರಕ್ತಿಯಿಂದ ಪವಿತ್ರಕ್ಷೇತ್ರಕ್ಕೆ ಹೋಗಿ ತಪಸ್ಸುಮಾಡಿ ಉತ್ತಮಗತಿಯನ್ನೇ ಪಡೆದನು.

ಇನ್ನು ಅರ್ಜುನನು ಎಂಥ ವೀರನಾಗಿದ್ದರೂ ಸ್ವಜನರನ್ನು ಕಂಡು ಕೃಪಾ ಪರವಶನಾಗಿ ವಿಷಾದದಿಂದ ಗಾಂಡೀವಧನುಸ್ಸನ್ನು ಕೆಳಕ್ಕಿಟ್ಟು 'ಯುದ್ಧಮಾಡಲಾರೆನು !' ಎಂದು ಕುಸಿಯುತ್ತಿದ್ದ ಕಾಲದಲ್ಲಿ—

ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ಗೀ. ೨-೭

ಎಂದು ಶರಣುಬಂದಮಾತ್ರದಿಂದ ಅವನಮೇಲೆ ಕನಿಕರದಿಂದ ಲೋಕೋಪಕಾರಕವಾದ ಸಮ್ಯಗ್ಜ್ಞಾನವನ್ನೇ ಭಗವಂತನು ಉಪದೇಶಿಸಿರುತ್ತಾನೆ.

ನಮಗೆ ಯಾವದಾದರೂ ಘೋರವಾದ ವ್ಯಾಧಿಯು ಬಂದು ನರಳಿಸುತ್ತಿರುವಾಗ ಪರವಶರಾಗಿ 'ಅಪ್ಪ !', 'ಅಮ್ಮ !' ಎಂದುಕೂಗಿಕೊಳ್ಳುವದು ಸ್ವಭಾವವಾಗಿರುತ್ತದೆ. ಆದರೆ ಲೋಕಕ್ಕೆಲ್ಲ ತಾಯಿತಂದೆಗಳ ಸ್ಥಾನದಲ್ಲಿರುವ ಆ ಭಗವಂತ

ವನ್ನು 'ನಾರಾಯಣ!' ಎಂದು ಕೂಗಿಕೊಂಡರೆ ಮನಸ್ಸಿಗೆ ಶಾಂತಿಯೂ ಧೈರ್ಯವೂ ಎಷ್ಟುಮಟ್ಟಿಗೆ ಕೂಡಿಕೊಳ್ಳುತ್ತದೆ–ಎಂಬುದನ್ನು ಅನುಭವಿಸಿನೋಡಬೇಕು.

ಪರೀಕ್ಷಿತಮಹಾರಾಜನಿಗೆ ಋಷಿಯ ಶಾಪದಿಂದ 'ಇನ್ನು ಏಳುದಿನಗಳೊಳಗಾಗಿ ತಕ್ಷಕನು ಬಂದು ಕಡಿದು ಮರಣವಾಗುವದು' ಎಂದು ಗೊತ್ತಾದಾಗ ಅವನು ಇಹಪರಲೋಕಗಳ ಚಿಂತೆಯನ್ನು ಬಿಟ್ಟು ಗಂಗಾತೀರದಲ್ಲಿ ಭಗವಂತನ ಸ್ಮರಣೆಯಿಂದಲೇ ಪ್ರಾಯೋಪವೇಶವನ್ನು ಮಾಡುವದಕ್ಕೆ ಸಿದ್ಧನಾದನು. ಅಲ್ಲಿಗೆ ಅನೇಕ ಮುನಿಗಳೂ ಬಂದು ಸೇರಿದರು. ಅಲ್ಲಿಗೆ ದಯಮಾಡಿಸಿದ ಶ್ರೀಶುಕರನ್ನು 'ಮರ್ತ್ಯನಾದವನು ಯಾವದನ್ನು ಶ್ರವಣಮಾಡಬೇಕು, ಯಾವದನ್ನು ಜಪಿಸಬೇಕು? ಅದನ್ನು ಹೇಳಿರಿ' ಎಂದು ಪರೀಕ್ಷಿತನು ಪ್ರಶ್ನಿಸಿದನು. ಅವರು–

ಶ್ರೋತವ್ಯಾದೀನಿ ರಾಜೇನ್ದ್ರ ನೃಣಾಂ ಸನ್ತಿ ಸಹಸ್ರಶಃ ।
ಅಪಶ್ಯತಾಮಾತ್ಮತತ್ತ್ವಂ ಗೃಹೇಷು ಗೃಹಮೇಧಿನಾಮ್ ॥

ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ಚ ವಾ ವಯಃ ।
ದಿವಾ ಚಾರ್ಥೇಹಯಾ ರಾಜನ್ ಕುಟುಮ್ಬಭರಣೇನ ವಾ ॥

ದೇಹಾಪತ್ಯಕಲತ್ರಾದಿಷ್ವಾತ್ಮಸೈನ್ಯೇಷ್ವಸತ್ಸ್ವಪಿ ।
ತೇಷಾಂ ಪ್ರಮತ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥

ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಽಭಯಮ್ ॥

ಭಾಗ. ೨–೧–೨ ರಿಂದ ೫

“ಎಲೈ ರಾಜನೆ, ಮನೆಗಳಲ್ಲಿರುವ ಗೃಹಸ್ಥರಿಗೆ ಕೇಳಬೇಕಾದದ್ದೇ ಮೊದಲಾದವು ಸಾವಿರಾರು ಇರುತ್ತವೆ. ರಾತ್ರಿಯಲ್ಲಿ ನಿದ್ರೆ, ಸ್ತ್ರೀಸಂಗ, ಹಗಲು ಅರ್ಥಸಂಪಾದನೆ, ಕುಟುಂಬರಕ್ಷಣೆ, ಹೆಂಡಿರುಮಕ್ಕಳು–ಮುಂತಾಗಿ ತನ್ನದೆಂಬ ಸೈನ್ಯವೇ ಇರುತ್ತದೆ. ಅವುಗಳಲ್ಲಿ ಆಸಕ್ತನಾಗಿ ಆಯುಸ್ಸನ್ನು ಕಳೆಯುತ್ತಾ ಪ್ರಮತ್ತನಾಗಿರುವವನಿಗೆ ಸಾವು ಬರುವದೆಂಬುದನ್ನು ಕಂಡಿದ್ದರೂ ಅದು ಕಾಣದೆಹೋಗುತ್ತಿರುವದು. ಆದ್ದರಿಂದ ಭರತವಂಶೋತ್ಪನ್ನನೆ, ಸರ್ವಾತ್ಮನಾದ ಈಶ್ವರನಾದ ಭಗವಂತನಾದ ಶ್ರೀಹರಿಯನ್ನೇ ಶ್ರವಣಮಾಡಬೇಕು, ಕೀರ್ತನೆಮಾಡಬೇಕು, ಅಭಯವನ್ನು ಇಚ್ಛಿಸುವವನಾದರೆ ಆತನನ್ನೇ ಸ್ಮರಣೆಮಾಬೇಕು.

ಏತನ್ನಿರ್ವಿದ್ಯಮಾನಾನಾಮಿಚ್ಛತಾಮಕುತೋಭಯಮ್ ।
ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್ ।

ಭಾಗ. ೨–೧–೧೧

“ಎಲೈ ರಾಜನೆ, ಏತಕ್ಕೂ ಅಂಜದಿರುವ, ಅಂಜಿಕೆಯನ್ನು ಹೋಗಿಸುವ ಸ್ಥಿತಿಯನ್ನು ಪಡೆಯಬೇಕೆಂದು ಬಯಸುತ್ತಿರುವ ಯೋಗಿಗಳಿಗೆ ಶ್ರೀಹರಿಯ ನಾಮಕೀರ್ತನೆಯೇ ಉಪಾಯವೆಂದು ನಿರ್ಣೀತವಾಗಿರುತ್ತದೆ”—ಎಂದು ಉತ್ತರವನ್ನು ಕೊಟ್ಟನು.

ಖಟ್ವಾಂಗನೆಂಬ ರಾಜರ್ಷಿಯು ‘ನನ್ನ ಆಯುಸ್ಸು ಇಷ್ಟೇ’ ಎಂದು ಗೊತ್ತಾಗಲು ಒಂದೇ ಮುಹೂರ್ತದ ಅವಧಿಯಲ್ಲಿ ಶ್ರೀಹರಿಯ ಸ್ಮರಣೆಯನ್ನು ಪ್ರಾರಂಭಿಸಿ ಪರಮಪುರುಷಾರ್ಥವನ್ನೇ ಹೊಂದಿಬಿಟ್ಟನು. ಇದು ವಿವೇಕಿಗಳ ಮಾರ್ಗ.

ನಾವು ಮಾಡಿಗೆತಾದೆ ಬರುವದಿಲ್ಲ! ‘ಅಹನ್ಯಹನಿ ಭೂತಾನಿ ಗಚ್ಛನ್ತೀಹ ಯಮಾಲಯಮ್। ಶೇಷಾಃ ಸ್ಥಾವರಮಿಚ್ಛನ್ತಿ ಕಿಮಾಶ್ಚರ್ಯಮತಃ ಪರಮ್ ॥’ ಎಂದು ಯುಧಿಷ್ಠಿರನು ಹೇಳಿದಂತೆ ದಿನದಿನವೂ ಜನರು ಸಾಯುತ್ತಿರುವರು. ಆದರೂ ಉಳಿದವರು ನಾವು ಚಿರಕಾಲ ಬದುಕಿರುತ್ತೇವೆಂದೇ ತಿಳಿಯುವರು! ಹೊಳೆನರಸೀಪುರದಲ್ಲಿ ಒಬ್ಬನು ಸಾಯುವ ಸಂಕಟದಲ್ಲಿ ತನ್ನ ವಕೀಲರನ್ನು ಕರೆಯಕಳುಹಿಸಿದನಂತೆ! ಅವನ ಮರಣಕಾಲದ ಇಚ್ಛೆಯೇನೋ ಇರಬೇಕೆಂದು ಅವನಲ್ಲಿಗೆ ಬಂದಾಗ ‘ನಮ್ಮ ವ್ಯವಹಾರದ ಫಲವು ಏನಾಯಿತು?’ ಎಂದು ಕೇಳಿದಾಗ ‘ನಿಮ್ಮಂತೆಯೇ ಡಿಕ್ರಿ ಆಯಿತು!’ ಎಂಬ ವಕೀಲರ ಮಾತನ್ನು ಕೇಳಿ ‘ಆಯಿತೆ?’ ಎಂದು ಸಂತೋಷದಿಂದ ಪ್ರಾಣವನ್ನು ಬಿಟ್ಟನಂತೆ! ಹೀಗಿರುತ್ತದೆ, ವಿಷಯವಾಸನೆಯ ವೇಗ! ಆದ್ದರಿಂದ ಮರಣವು ಯಾವಾಗ ಬರುವದೋ ಎಂದುಕೊಂಡು ಇಂದಿನಿಂದ ಭಗವಂತನ ಸ್ಮರಣಕೀರ್ತನಾದಿಗಳಿಗೆ ಮನಸ್ಸು ಮಾಡುವದು ಒಳ್ಳೆಯದು.

ಕೀರ್ತನೆಯು ವೈಯಕ್ತಿಕವಾಗಿಯೇ ಅಲ್ಲದೆ ಸಾಮೂಹಿಕವಾಗಿಯೂ ಅನುಷ್ಠಾನಮಾಡುವದಕ್ಕೆ ಬರುತ್ತದೆ. ಸಾಮೂಹಿಕಕೀರ್ತನೆಯ ಪೂರ್ಣ ಪ್ರಯೋಜನವು ಲಭಿಸಬೇಕಾದರೆ ತಮ್ಮ ಕೀರ್ತನೆಯಿಂದ ಜನರ ಹೃದಯವನ್ನು ಭಗವಂತನ ಕಡೆಗೇ ತಿರುಗಿಸಬಲ್ಲ ಭಕ್ತಶಿರೋಮಣಿಗಳು ದೊರೆಯಬೇಕು. ಅಂಥ ಸತ್ಸಂಗವು ದೊರಕದೆ ಇರುವಾಗಲೂ ಸೇರಿದ ಜನರಲ್ಲಿ ಭಕ್ತಿಪರವಶರಾಗಿ ಹಾಡಬಲ್ಲ ಯಾರಾದರೊಬ್ಬರನ್ನು ಆರಿಸಿಕೊಳ್ಳಬೇಕು. ಅವರನ್ನು ನಡುವೆ ನಿಲ್ಲಿಸಿಕೊಂಡು ಮಿಕ್ಕವರು ಅವರ ಸುತ್ತಲೂ ನಿಲ್ಲಬೇಕು. ಆ ಕೀರ್ತನಾರಂಭಿಗಳೇ ಭಗವಂತನ ಸ್ವರೂಪರೆಂಬ ಭಾವನೆಯಿಂದ ಎಲ್ಲರೂ ಅವರಿಗೆ ನಮಸ್ಕಾರಮಾಡಿ ಅವರು ಮಾಡುವ ನಾಮಕೀರ್ತನೆಯನ್ನು ಅನುಸರಿಸಿ ಎಲ್ಲರೂ ಕೀರ್ತನೆಮಾಡಬೇಕು. ‘ಜಯ ಜಯ ನರಹರಿ ನಾರಾಯಣ ॥ ಪಾಹಿ ವಿಭೋ ಮಾಂ ಕೃಪಾಘನ’ ಎಂಬಂಥ ಯಾವದಾದರೊಂದು ನಾಮವನ್ನು ಅವರು ರಾಗಯುಕ್ತವಾಗಿ ಹಾಡುತ್ತಲೂ ಮಿಕ್ಕವರೆಲ್ಲರೂ ಪ್ರೇಮದಿಂದ ಅವರನ್ನನುಸರಿಸಿ ಹಾಡ

ಬೇಕು. ಶ್ರೀಕೃಷ್ಣನು ರಾಸಕ್ರೀಡೆಯಲ್ಲಿ ನಿರತನಾದಾಗ ಗೋಪಿಯರ ಮಂಡಲದ ನಡುವೆಯೇ ಅಲ್ಲದೆ, ಅವರಲ್ಲಿ ಇಬ್ಬಿಬ್ಬರ ನಡುವೆಯೂ ಕೃಷ್ಣರೂಪದಿಂದ ಕಾಣಿಸಿಕೊಳ್ಳುತ್ತಿದ್ದನಂತೆ. ಅವರು ಒಬ್ಬರನ್ನೊಬ್ಬರು ನೋಡಿದರೆ ತಾವೂ ಕೃಷ್ಣರೂಪದಿಂದಲೇ ಒಬ್ಬರೊಬ್ಬರಿಗೆ ಕಾಣುತ್ತಿದ್ದರಂತೆ! ಹಾಗೆ ಕೀರ್ತನೆಯ ಧ್ವನಿಯು ಕಿವಿಗೆ ಬಿದ್ದಾಗ ಆ ಪರಮಾತ್ಮನೇ ತಮ್ಮ ಹೃದಯದೊಳಕ್ಕೆ ಪ್ರವೇಶಿಸಿದಂತೆಯೂ ಅವನ ನಾಮಕೀರ್ತನೆಯ ರೂಪದಿಂದ ತಮ್ಮ ಮುಖದಿಂದಲೂ ಆತನೇ ಹೊರಕ್ಕೆ ಬರುತ್ತಿದ್ದಂತೆಯೂ ತನ್ಮಯತೆಯುಂಟಾಗಿ ಕೀರ್ತನೆಯಿಂದ ಭಾವಪರವಶರಾಗಬೇಕು.

ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ ।
ಕೀರ್ತನಾದೇವ ಕೃಷ್ಣಸ್ಯ ಮುಕ್ತಸಙ್ಗಃ ಪರಂ ವ್ರಜೇತ್ ॥

ಭಾಗ. ೧೨-೩-೫೧

ಎಂಬ ಭಾಗವತೋಕ್ತಿಯಂತೆ ಕಲಿಯುಗದಲ್ಲಿ ಎಷ್ಟೋ ದೋಷಗಳಿದ್ದರೂ ಒಂದು ಮಹಾಗುಣವುಂಟು. ಅದೇನೆಂದರೆ : ಭಗವಂತನ ಕೀರ್ತನೆಯಿಂದಲೇ ಸರ್ವಸಂಗದಿಂದಲೂ ಮುಕ್ತನಾಗಿ ಪರಮಪದವನ್ನೇ ಹೊಂದುತ್ತಾನೆ.

## ೨೧. ನಾಮಮಹಾತ್ಮ್ಯ

(19—8—69)

ನಿನ್ನೆಯ ದಿವಸ ನಾನು ಕೀರ್ತನೆಯ ವಿಷಯದಲ್ಲಿ ಮಾತನಾಡಿದೇನೆ. ಕೀರ್ತನೆಯೆಂಬುದೊಂದು ದೊಡ್ಡವಿಷಯ. ಈ ಮಂದಿರದಲ್ಲಿ ಯಾವ ಪ್ರವಚನವೇ ಆಗಲಿ, ಅದರ ಆದಿಯಲ್ಲಿ ಮತ್ತು ಅಂತ್ಯದಲ್ಲಿ ನಾಮಕೀರ್ತನೆಯನ್ನು ತಪ್ಪದೆ ಮಾಡಿಸಿದರೆ ಬಹಳ ಒಳ್ಳೆಯದು. ಕೀರ್ತನೆಯು ರಾಗಯುಕ್ತವಾಗಿರಬೇಕಷ್ಟೆ? ಆದರೆ ಆ ರಾಗವು ಶೃಂಗಾರರಸವನ್ನು ಉದ್ಬೋಧನಮಾಡುವಂತಿರಬಾರದು. ಕೀರ್ತನೆಯು ಸಂಗೀತಕಚೇರಿಯಾಗಿ ಪರಿಣಮಿಸಬಾರದು. ನಾರದರು ಅಥವಾ ಅವರಂಥ ಮಹಾತ್ಮರ ಅನುಗ್ರಹವನ್ನು ಪಡೆದಿರುವವರು ಐದು ನಿಮಿಷ ಕೀರ್ತನೆಯನ್ನು ಮಾಡಿಸಿದರೂ ತತ್ಕಾಲಕ್ಕೆ ನಾವುಗಳು ವೈಕುಂಠದಲ್ಲಿಯೇ ಇದ್ದಂತೆ ಭಾಸವಾಗುವದು. ಮಿಕ್ಕ ವಿಷಯಗಳ ವಿಚಾರದಲ್ಲಿ ಮಾತನಾಡುವದು ಇಲ್ಲದೆಇದ್ದಿದ್ದರೆ ನಾನು ಪ್ರತಿದಿನವೂ ಕೀರ್ತನೆಯ ವಿಷಯವಾಗಿಯೆ

ಮಾತನಾಡುತ್ತಿದ್ದೆ ; ಅಂಥ ಮನಮೋಹಕ, ಭಗವದನುರಾಗಾಭಿವರ್ಧಕ ಮಂಗಲಕರ ಸಾಧನವದು ! ಆನಂದರಾಮಾಯಣದಲ್ಲಿ ಮಹಾ ಅಕ್ಷರಗಳ ಮಂತ್ರದಿಂದ ಹಿಡಿದು ಹಲವು ಅಕ್ಷರಗಳ ಮಂತ್ರಗಳನ್ನೇ ಕೀರ್ತನೆಮಾಡಬೇಕೆಂದು ವಿಧಿಸಿರುತ್ತದೆ. ಕಡಕಟ್ಟಿಯ ರಾಮಣ್ಣನವರೆಂದು ಪ್ರಸಿದ್ಧರಾಗಿದ್ದವರು ಬೆಳಗಾವಿಯಲ್ಲಿ ವರ್ಷವರ್ಷವೂ ಶ್ರೀರಾಮನವಮೀ ಉತ್ಸವವನ್ನು ಮಾಡಿಸುತ್ತಿದ್ದರು. ಅಲ್ಲಿ ರಾಮಾಯಣ ಪಾರಾಯಣದ ಜೊತೆಗೆ ನಾನಾನಾಮಮಂತ್ರಗಳನ್ನೇ ಕೀರ್ತನೆ ಮಾಡುವದಕ್ಕೆ ಉತ್ಸವದ ಸ್ಥಳದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಅಖಂಡವಾಗಿ ಸರದಿಯ ಮೇಲೆ ಭಜನೆಮಾಡುತ್ತಿರುವಂತೆ ಏರ್ಪಡಿಸುತ್ತಿದ್ದರು. ಶ್ರೋತೃಗಳು ತಂಡತಂಡವಾಗಿ ಬಂದು ಅದನ್ನು ಕೇಳಿ ಸಂತೋಷಪಡುತ್ತಿದ್ದರು. ಅಲ್ಲಿ ಪ್ರಕಟವಾಗುತ್ತಿದ್ದ ಶ್ರೀರಾಮಚಂದ್ರನ ಲೀಲೆಗಳನ್ನು ಕಂಡವರು ಇನ್ನೂ ಕೆಲವರು ಜೀವಂತರಾಗಿರುತ್ತಾರೆ.

ಕೆಲವು ವರ್ಷಗಳ ಹಿಂದೆ ಗೋಂದಾವಲಿಯ ಶ್ರೀಬ್ರಹ್ಮಚೈತನ್ಯರೂ ಇತ್ತೀಚೆಗೆ ಕಾಲವಶರಾಗಿದ್ದ ಶ್ರೀರಾಮದಾಸರೂ ತ್ರಯೋದಶಾಕ್ಷರಿಯ ರಾಮಮಂತ್ರವನ್ನು ಎಲ್ಲರಿಗೂ ಉಪದೇಶಮಾಡಿ ಆ ಮಂತ್ರದ ಜಪದಲ್ಲಿ ತನ್ಮಯರಾಗುವಂತೆ ಮಾಡುತ್ತಿದ್ದರು. ‘ಶ್ರೀರಾಮ’ ಎಂದರೆ ಲಕ್ಷ್ಮೀಸಮೇತನಾದ ರಾಮನು ; ‘ಜಯರಾಮ!’ ಎಂದರೆ ಐಹಿಕಜೀವನದಲ್ಲಿಯೂ ಪಾರತ್ರಿಕಸಾಧನೆಗಳಲ್ಲಿಯೂ ಜಯವನ್ನು ಕೊಡುವಾತನು; ‘ಜಯಜಯರಾಮ !’ ಎಂದರೆ ಎಲ್ಲೆಲ್ಲಿಯೂ ಹರಡಿರುವ ಕಾಮನ ಹಾವಳಿಯನ್ನು ತಪ್ಪಿಸಿ ಸತ್ಯಧರ್ಮಗಳಿಗೇ ಜಯವನ್ನು ಕೊಟ್ಟು ಈ ಲೋಕವನ್ನು ವೈಕುಂಠವಾಗಿ ಪರಿಣಮಿಸುವಂತೆ ಮಾಡಿಸಬಲ್ಲ ಸಮರ್ಥನು. ಆತನ ಮಹಿಮೆಯನ್ನು ಕೊಂಡಾಡುವ ಈ ಮಂತ್ರವನ್ನು ಜಪಿಸುವವರಿಗೂ ಕೀರ್ತನೆಮಾಡುವವರಿಗೂ ಲಾಭ, ಜಯ–ಎರಡೂ ಕಟ್ಟಿಟ್ಟ ಬುತ್ತಿಯಾಗುವವು ; ಪರಾಭವವೆಂಬುವದು ಎಲ್ಲಿಯೂ ಇರುವದಿಲ್ಲ. ಯಾವಾಗಲೂ ಲಕ್ಷ್ಮಿಯ ಅವತಾರಭೂತಳಾದ ಸೀತೆಯು ಶ್ರೀರಾಮನನ್ನು ಬಿಟ್ಟಿರಲಿಲ್ಲ : ಮನುಷ್ಯಾವತಾರದಲ್ಲಿ ಕೈಗೊಂಡಿದ್ದ ಕಾರ್ಯವು ನೆರವೇರುವದಕ್ಕಾಗಿ ಶ್ರೀರಾಮಚಂದ್ರನ ನಾಮವನ್ನು ಜಪಿಸುವದನ್ನು ಮಾತ್ರ ಕ್ಷಣವೂ ಬಿಡದೆ ಇರುತ್ತಿದ್ದಳು, ಆದ್ದರಿಂದ ‘ಜಯಜಯ ಶ್ರೀರಾಮ, ಜಯಹರಿ ಶ್ರೀರಾಮ !’– ಎಂದು ಅಡಿಗಡಿಗೂ ನಾಮಕೀರ್ತನೆಮಾಡುವವರಿಗೆ ಶ್ರೀಸೀತಾರಾಮನ ಪೂರ್ಣಾನುಗ್ರಹವುಂಟಾಗುವದು.

ಒಂದೇ ರವೆಯನ್ನೇ ದೋಸೆ, ಉಂಡೆ, ಉಪ್ಪಿಟ್ಟು, ಪಾಯಸ– ಮುಂತಾದ ಬಗೆಬಗೆಯ ಭಕ್ಷ್ಯಭೋಜ್ಯಾದಿಗಳಿಗೆ ಉಪಯೋಗಿಸುವಂತೆ ನಾಮವನ್ನು ಜಪಕ್ಕೂ ಕೀರ್ತನೆಗೂ ಪಾರಾಯಣಕ್ಕೂ ಉಪಯೋಗಿಸಬಹುದು. ಯಾವ ರೂಪದಲ್ಲಿಯೇ

ಒಳಸರಿ, ಮಕ್ಕಳಿಗೆ 'ಸಕ್ಕರೆ'– ಎಂಬ ಶಬ್ದವನ್ನು ಉಚ್ಚರಿಸಿದಮಾತ್ರಕ್ಕೇ ಸಕ್ಕರೆಯೆಂಬ ಪದಾರ್ಥದ ನೆನಪೇ ಬರುವಂತೆ 'ರಾಮ !' ಎಂಬ ಮಂತ್ರದಿಂದ ಸಾಕ್ಷಾದ್ರಾಮನೇ ಮನಸ್ಸಿನಲ್ಲಿ ಸ್ಮರಣೆಗೆ ಬರಬೇಕು. ವಾಚ್ಯವಾಚಕಗಳಿಗೆ ಅಭೇದವಿರುವದರಿಂದ ರಾಮನಾಮವೇ ರಾಮ– ಎಂಬುದು ಲೌಕಿಕಯುಕ್ತಿಯಿಂದಲೂ ಸಿದ್ಧವಾಗುತ್ತದೆಯಾದರೂ ಒಳಹೊಕ್ಕು ನೋಡಿದರೆ ರಾಮನಿಗೂ ರಾಮನಾಮಕ್ಕೂ ಯಾವ ಭೇದವೂ ಇಲ್ಲವೇ ಇಲ್ಲ. ಏಕೆಂದರೆ ಒಂದೇ ಪರತತ್ತ್ವವೇ ರಾಮನೆಂಬ ನಾಮವಾಗಿಯೂ ರಾಮನ ರೂಪವಾಗಿಯೂ ತೋರತೋರಿಕೊಂಡಿರುವದು. ನಾನು ಒಂದಾನೊಂದು ಪದದ ರೂಪದಲ್ಲಿ ಹಾಡಿದಂತೆ :

**ರಾಮನ ನಾಮವೆ ಎಲ್ಲವಿನು | ರಾಮನ ಬಿಟ್ಟರೆ ಜಗವಿರನು |**
**ರಾಮನಾಮಗಳ ಭೇದವನುಡುಗಿಸೆ | ರಾಮತತ್ತ್ವವೆ ಉಳಿಯುವದು ||**

**ರಾಮನಾಮವೇ ಓಂಕಾರ | ರಾಮನೆ ಬ್ರಹ್ಮವು ಸಾಕಾರ |**
**ರಾಮನೆ ನಾಮವು ನಾಮವೆ ರಾಮನು | ರಾಮತತ್ತ್ವವಿಗತಾಕಾರ ||**

ಪರಬ್ರಹ್ಮವೇ ಸಾಕಾರಬ್ರಹ್ಮವಾಗಿ ರಾಮನ ರೂಪದಿಂದ ಅವತರಿಸಿ ಎಲ್ಲಾ ಲೀಲೆಗಳನ್ನೂ ಪ್ರಕಟಿಸಿತು ; ರಾಮನಾಮವಾಗಿ ಜಗತ್ತೆಲ್ಲವನ್ನೂ ವ್ಯಾಪಿಸಿತು. ಈ ದೃಷ್ಟಿಯಿಂದ ನೋಡಿದರೆ ರಾಮನಿಗೂ ನಾಮಕ್ಕೂ ಯಾವ ಭೇದವೂ ಇರುವದಿಲ್ಲ. ಆದ್ದರಿಂದ ಏಷಣಾತ್ರಯವನ್ನು ತೊರೆದ ಪರಮಹಂಸರು ಸತತವೂ ಉಪಾಸನೆಮಾಡುತ್ತಿರುವ ವಾಚ್ಯವಾಚಕಭೇದವಿಲ್ಲದ ಓಂಕಾರವನ್ನೇ ರಾಮನು–ಎಂದು ವ್ಯಪದೇಶಭೇದದಿಂದ ವ್ಯವಹರಿಸಲಾಗಿದೆ ಎಂದರಿಯಬೇಕು.

ವೇದಾಂತಶಾಸ್ತ್ರಾದಿಗಳೆಲ್ಲವನ್ನೂ ಅರಿತುಕೊಂಡಿದ್ದರೂ ಪರಮಾರ್ಥವಾದ ಆತ್ಮತತ್ತ್ವವನ್ನು ಅರಿಯಬೇಕೆಂದು ಬಂದ ನಾರದನಿಗೆ ಭಗವಾನ್ ಸನತ್ಕುಮಾರರು 'ನೀನು ಈವರೆಗೆ ಕಲಿತಿರುವದೆಲ್ಲವೂ ನಾಮಮಾತ್ರವೇ ; ನಾಮವು ಸರ್ವವ್ಯಾಪಕವಾಗಿರುವದರಿಂದ ಅದನ್ನೇ ಬ್ರಹ್ಮವೆಂದು ಉಪಾಸನೆಮಾಡು' ಎಂದು ಉಪದೇಶಮಾಡಿ, ಒಂದಕ್ಕಿಂತ ಒಂದು ವ್ಯಾಪಕವಾದ ತತ್ತ್ವಗಳನ್ನು ಕ್ರಮಕ್ರಮದಿಂದ ಉಪದೇಶಿಸಿದ ಬಳಿಕ ಕೊನೆಯಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವ 'ಭೂಮ'ವೆಂಬ ಹೆಸರಿನಿಂದ ಪರತತ್ತ್ವವನ್ನು ಬೋಧಿಸಿದರು. ರಾಮ ಎಂಬುದನ್ನು ಹೀಗೆಯೇ ನಾಮದ ತತ್ತ್ವವಾದ ಭೂಮವೆಂದೇ ಭಾವಿಸಬೇಕು, ರಾಮನನ್ನು ಬಿಟ್ಟರೆ ಜಗತ್ತೇ ಇರುವದಿಲ್ಲ.

ರಾಮ ಎಂಬುದು ಒಂದು ಬರಿಯ ಶಬ್ದವಲ್ಲ; ಅದೊಂದು ಮಂತ್ರ ; ಮನನಮಾಡಿದವರನ್ನು ತ್ರಾಣನಮಾಡುವ ಸಂರಕ್ಷಕವದು. ರಾಮನಾಮದ

ಮಾಹಾತ್ಮ್ಯವನ್ನು ವರ್ಣಿಸುವದಕ್ಕೆ ಅರ್ಥವಾದರೂಪವಾದ ಸನ್ನಿವೇಶಗಳುಂಟು. ಒಮ್ಮೆ ಒಬ್ಬ ಕಿರಾತನು ದಾರಿಯಲ್ಲಿ ಬರುವವರನ್ನೆಲ್ಲ ತಡೆಯುವನು ಅಥವಾ ಸುಲಿಗೆ ಮಾಡಿತಂದ ಧನದಿಂದ ತನ್ನ ಕುಟುಂಬವನ್ನು ರಕ್ಷಣೆಮಾಡಿಕೊಂಡಿದ್ದನಂತೆ; ಅಲ್ಲಿಗೆ ಬಂದ ಋಷಿಗಳನ್ನೂ ಹೀಗೆಯೇ ಸುಲಿಗೆಮಾಡುವದಕ್ಕೆ ಉಪಕ್ರಮಿಸಲಾಗಿ ಅವರು 'ನಿಲ್ಲುನಿಲ್ಲು ಈ ಸುಲಿಗೆಯ ಧನದಿಂದ ಜೀವಿಸುವ ನಿನ್ನ ಮನೆಯವರು ನಿನ್ನ ಪಾಪಪುಣ್ಯಕ್ಕೆ ಭಾಗಿಗಳಾಗುವರೋ ಕೇಳಿ ಬಾ! ಆಮೇಲೆ ನಮ್ಮಲ್ಲಿರುವದನ್ನು ಕೊಟ್ಟುಬಿಡುತ್ತೇವೆ' ಎಂದರಂತೆ. ಈ ಹೊಸ ವಿಚಾರವು ಕಿರಾತನ ಮನಸ್ಸಿನಲ್ಲಿ ಕುತೂಹಲವನ್ನೆಬ್ಬಿಸಿತು. ಋಷಿಗಳನ್ನು ಮರಕ್ಕೆ ಕಟ್ಟಿಹಾಕಿ ಮನೆಗೆ ಬಂದು 'ನಾನು ಇಷ್ಟುದಿನವೂ ನಿಮ್ಮನ್ನು ಕಳ್ಳತನದಿಂದ ತಂದ ಧನಧಾನ್ಯಗಳಿಂದ ಕಾಪಾಡಿದ್ದೇನಷ್ಟೆ? ನೀವೂ ನನ್ನ ಪಾಪಕ್ಕೆ ಹೀಗೆಯೇ ಭಾಗಿಗಳಾಗುವಿರೋ!' ಎಂದು ಕೇಳಿದ್ದಕ್ಕೆ 'ನೀನು ಪಾಪವನ್ನು ಮಾಡಿ ನಮ್ಮನ್ನು ರಕ್ಷಿಸಬೇಕೆಂದೇನೂ ನಾವು ಕೇಳಿಲ್ಲ; ಆದ್ದರಿಂದ ನಿನ್ನ ಪಾಪಕ್ಕಾಗಲಿ ಪುಣ್ಯಕ್ಕಾಗಲಿ ನೀನೇ ಹೊಣೆ!' ಎಂದು ಅವರು ಉತ್ತರಕೊಟ್ಟರಂತೆ. ಆಗ ಕಿರಾತನು ಪಶ್ಚಾತ್ತಾಪದಿಂದ ಋಷಿಗಳಲ್ಲಿಗೆ ಬಂದು ನನ್ನನ್ನು ಹೇಗಾದರೂ ಈ ಪಾಪಕೂಪದಿಂದ ಉದ್ಧಾರಮಾಡಬೇಕು—ಎಂದು ಪ್ರಾರ್ಥಿಸಿಕೊಂಡನಂತೆ. ಋಷಿಗಳು 'ಹಾಗಾದರೆ ನಾವು ಇಲ್ಲಿಗೆ ಬರುವವರೆಗೆ ನಿರೀಕ್ಷಿಸಿಕೊಂಡಿರು; ಬಂದಮೇಲೆ ನಿನಗೆ ಸನ್ಮಾರ್ಗವನ್ನು ಉಪದೇಶಿಸುವೆವು' ಎಂದು ಹೇಳಿ ಹೊರಟುಹೋದರು. ಕಿರಾತನು ಅವರು ಹೋದ ದಿಕ್ಕಿನಲ್ಲಿನ್ನ ಮರದ ತೋಪನ್ನೇ ನೋಡುತ್ತಾ 'ಎಲೈ ಆರಾಮವೆ, ನಮ್ಮ ಗುರುಗಳು ಯಾವಾಗ ಬರುತ್ತಾರೆ? ಎಲೈ ಆರಾಮವೆ, ಗುರುಗಳು ಎಲ್ಲಿದ್ದಾರೆ?' ಎಂದು ಮುಂತಾಗಿ ಆರಾಮಶಬ್ದವನ್ನು ಅಡಿಗಡಿಗೂ ಉಚ್ಚರಿಸುತ್ತಾ ಕುಳಿತಲ್ಲಿಯೇ ಇದ್ದುಕೊಂಡು ಊಟತಿಂಡಿ ಯಾವದನ್ನೂ ಬಯಸದೆ ಪ್ರಾಯೋಪವೇಶವನ್ನು ಮಾಡುವವನಂತೆ ಅಚಲನಾಗಿ ಕುಳಿತಿದ್ದನಂತೆ. ಅವನ ಮೈಮೇಲೆಲ್ಲ ಹುತ್ತವು ಬೆಳೆದುಕೊಂಡರೂ ಎಚ್ಚರವಿಲ್ಲದೆ ಕುಳಿತಿದ್ದ ಅವನನ್ನು ಋಷಿಗಳು ಮತ್ತೆ ಬಂದು ಕೂಗಲಾಗಿ ಹುತ್ತವನ್ನು ಭೇದಿಸಿಕೊಂಡು ಹೊರಕ್ಕೆ ಬಂದದ್ದರಿಂದ ಅವನಿಗೆ 'ವಾಲ್ಮೀಕಿ' ಎಂಬ ಹೊಸ ನಾಮವನ್ನು ಋಷಿಗಳು ಇಟ್ಟು ರಾಮಚರಿತ್ರೆಯನ್ನು ಬೋಧಿಸಿದರಂತೆ! ಈ ಕಥೆಗೆ ಎಷ್ಟೋ ರೂಪಾಂತರಗಳಿವೆ. ಆದರೂ ಆರಾಮಶಬ್ದದಲ್ಲಿ[1] ಅಡಕವಾಗಿದ್ದ ರಾಮಶಬ್ದದ ಉಚ್ಚಾರಣೆಯಿಂದಲೇ ಅವನಿಗೆ ಸಾತ್ತ್ವ

1. ಈ ಸಂದರ್ಭದಲ್ಲಿ ಈ ಕೆಳಗಿನ ಸುಭಾಷಿತವನ್ನು ಮನನಮಾಡುವದರಿಂದ ಲಾಭವಿದೆ: 'ವನೇ ಚರಾಮೋ ವಸು ಚಾಹರಾಮಃ ನದೀಂಸ್ತರಾಮಃ ನ ಭಯಂ ಸ್ಮರಾಮಃ। ಇತೀರಯನ್ತೋಽಪಿ ವನೇ ಕಿರಾತಾ ಮುಕ್ತಿಂ ಗತಾ ರಾಮಪದಾನುಷಙ್ಗಾತ್॥'

ಕತ್ವವೂ ಭಗವಚ್ಚರಿತ್ರೆಯಲ್ಲಿ ಜಿಜ್ಞಾಸೆಯೂ ಹುಟ್ಟಿವವು ಎಂಬುವನ್ನು ಈ ಅರ್ಥವಾದವು ಸೂಚಿಸುತ್ತದೆ ಎನ್ನಬಹುದು.

ಇದಂತಿರಲಿ, ಶ್ರೀಮದ್ರಾಮಾಯಣದಲ್ಲಿರುವ ಕಥಾಂಶದಲ್ಲಿ 'ಶ್ರೀರಾಮ ಕಥೆಯನ್ನು ನಾರದರಿಂದ ಶ್ರವಣಮಾಡಿದ ಬಳಿಕ ವಾಲ್ಮೀಕರು ತಮಸಾನದಿಯಲ್ಲಿ ಸ್ನಾನಮಾಡುವದಕ್ಕೆ ಸಿದ್ಧರಾಗುತ್ತಿರುವಲ್ಲಿ ಒಬ್ಬ ವ್ಯಾಧನು ದಂಪತಿಗಳಾದ ಕ್ರೌಂಚಪಕ್ಷಿಗಳಲ್ಲಿ ಗಂಡುಹಕ್ಕಿಯನ್ನು ಹೊಡೆದದ್ದನ್ನು ಕಂಡು ಕರುಣೆಯಿಂದ ಅವನಿಗೆ ಶಾಪವನ್ನು ಕೊಟ್ಟ ವಾಕ್ಯವು ಶ್ಲೋಕರೂಪವಾಗಿ ಅವರ ಬಾಯಿಂದ ಹೊರಕ್ಕೆ ಬಂದಿತ್ತು. ವಾಲ್ಮೀಕಿಯ ಶೋಕವು ಶ್ಲೋಕವಾದದ್ದನ್ನು ಅವರ ಶಿಷ್ಯರೆಲ್ಲರೂ ಮತ್ತೆ ಮತ್ತೆ ಹಾಡಿ ಪ್ರಶಂಸಿಸಿದರು. ರಾಮಾಯಣವೆಲ್ಲವನ್ನೂ ಅದೇ ಬಗೆಯ ಶ್ಲೋಕಗಳಿಂದ ವಾಲ್ಮೀಕಿಋಷಿಗಳು ರಚಿಸಿದರು' ಎಂದಿದೆ. ರಾಮಾಯಣಕಾವ್ಯವು ರಚಿತವಾದ ನಿಮಿತ್ತವು ಹೇಗಾದರೂ ಇರಲಿ, ಆ ಕಾವ್ಯದಲ್ಲಿ ರಾಮನಾಮವು ಮತ್ತೆ ಮತ್ತೆ ಬಂದೇಬರುತ್ತದೆ ಎಂಬುದಂತೂ ನಿಶ್ಚಯ. ಶ್ರೀರಾಮನು ಶ್ರೀವಿಷ್ಣುವಿನ ಅವತಾರವೇ ; ದೇವತೆಗಳಿಗೆ ಕೊಟ್ಟ ಅಭಯವಚನ ದಂತೆ (ಬಾಲಕಾಂಡ ೧೫-೨೯ರಿಂದ೩೪) ಆತನು ಮನುಷ್ಯನಾದನು ಎಂದು ವಾಲ್ಮೀಕಿಗಳ ಬರೆದಿರುವದು ನಿಶ್ಚಯ. ಆದ್ದರಿಂದ ರಾಮಾಯಣವನ್ನು ಪಠಿಸುವ ಭಕ್ತರು ರಾಮನಾಮವನ್ನು ಎಷ್ಟುಸಲ ಪಠಿಸಿದರೂ ಅಷ್ಟುಸಲ ಶ್ರೀಮಹಾವಿಷ್ಣುವಿನ ಸ್ಮರಣೆಮಾಡಿದ ಫಲವೇ ಅವರಿಗೆ ಬರುತ್ತದೆ. ಈ ವಿಷಯಕ್ಕೆ ನಾನು ಒಂದು ಪದವನ್ನು ಹಾಡಿರುತ್ತೇನೆ. ಅದು ಹೀಗೆ ಪ್ರಾರಂಭವಾಗಿರುತ್ತದೆ :

**ರಾಮಾಯಣದ ಸಾರ | ರಾಮನಾಮವೆ ಪೂರ |**
**ಕಾಮಿತದ ದ್ವಾರ | ರಾಮನಾಮ ||**

ಒಂದು ಹಳ್ಳಿಯಲ್ಲಿ ಒಬ್ಬ ಶ್ರದ್ಧಾವಂತರಾದ ರಾಮಭಕ್ತರು ರಾಮಾಯಣವನ್ನು ಪಾರಾಯಣಮಾಡಿ ಪ್ರತಿವರ್ಷವೂ ರಾಮಪಟ್ಟಾಭಿಷೇಕವನ್ನು ಮಾಡುತ್ತಿದ್ದರು. ಅವರಿಗೆ ರಾಮಾಯಣದ ಶ್ಲೋಕಗಳಿಗೆಲ್ಲ ಸರಿಯಾಗಿ ಅರ್ಥವು ಗೊತ್ತಾಗದೆ ಇದ್ದರೂ ಅದು ರಾಮಚರಿತ್ರೆ ಎಂಬ ಶ್ರದ್ಧೆಯಂತೂ ಇದ್ದೇಇದ್ದಿತು. ಅವರು ಪಾರಾಯಣಕ್ಕೆ ಶ್ಲೋಕಗಳನ್ನು ಪಠಿಸುತ್ತಿದ್ದ ಕ್ರಮವು ಹೀಗೆ :

**ತಪಃ ಸ್ವಾಧ್ಯಾಯನಿರತಂ| ರಾಮ ! ತಪಸ್ವೀ ವಾಗ್ವಿದಾಂ ವರಮ್ | ರಾಮ !**
**ನಾರದಂ ಪರಿಪಪ್ರಚ್ಛ | ರಾಮ ! ವಾಲ್ಮೀಕಿರ್ಮುನಿಪುಂಗವಮ್ | ರಾಮ !**
**ಕೋ ನ್ವಸ್ಮಿನ್ ಸಾಂಪ್ರತಂ ಲೋಕೇ | ರಾಮ ! ಗುಣವಾನ್**
**ಕಶ್ಚ ವೀರ್ಯವಾನ್ | ರಾಮ !**
**ಧರ್ಮಜ್ಞಶ್ಚ ಕೃತಜ್ಞಶ್ಚ |ರಾಮ! ಸತ್ಯವಾಕ್ಯೋ ದೃಢವ್ರತಃ|ರಾಮ !**

ಇತ್ಯಾದಿ! ಹೀಗೆ ಒಂದೊಂದು ಶ್ಲೋಕಕ್ಕೂ ನಾಲ್ಕುನಾಲ್ಕು ರಾಮನಾಮಗಳನ್ನು ಉಚ್ಚಾರಣೆಮಾಡಿಯೇ ಅವರು ಪಾರಾಯಣವನ್ನು ಮುಗಿಸುತ್ತಿದ್ದರು! ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಬಳಿಗೆ ಒಮ್ಮೆ ಬಂದಿದ್ದ ಸಾಧುವೊಬ್ಬರು ಅಡ್ಡಡ್ಡಲಾಗಿ ಹಾಳೆಗಳನ್ನು ಜೋಡಿಸಿದ್ದ ಒಂದು ಪುಸ್ತಕವನ್ನು ಓದುವವನಂತೆ ಮಾಡುತ್ತಾ ಆನಂದಬಾಷ್ಪವನ್ನು ಸುರಿಸುತ್ತಿದ್ದರೆಂದು ಹೇಳಿದ ಕಥೆಯೊಂದನ್ನು ಕೇಳಿರುತ್ತೇನೆ. ಅದರಲ್ಲಿ ರಾಮಾಯಣದ ಕಥೆಯೇನೂ ಇರಲಿಲ್ಲ. ಒಂದೊಂದು ಹಾಳೆಯಲ್ಲಿಯೂ ಶ್ರೀರಾಮಚಂದ್ರನ ಚಿತ್ರವೊಂದು ಇರುತ್ತಿತ್ತು; ಅದನ್ನು ನಿಟ್ಟಿಸುತ್ತಾ ಆನಂದಬಾಷ್ಪವನ್ನು ಸುರಿಯಿಸುವುದೇ, ಆ ಸಾಧುಗಳ ಪಾರಾಯಣ! ಹೀಗೆ ರಾಮನಾಮ, ರಾಮರೂಪಗಳು ಎಷ್ಟೋ ಮಹಾತ್ಮರಿಗೆ ಭಾವಸಮಾಧಿಯನ್ನು ಕೊಟ್ಟಿವೆ! ರಾಮನಾಮವನ್ನು ಮತ್ತೆಮತ್ತೆ ಭಕ್ತಿಪೂರ್ವಕವಾಗಿ ಜಪಿಸುವವರಿಗೆ, ದನಗಳಿಗೆ—ರಾಗಿಯ ಹುಲ್ಲನ್ನು ಮತ್ತೆಮತ್ತೆ ಮೆಲುಕುಹಾಕಿದ ಬಳಿಕ ಅದರ ಸಿಹಿಯು ತೋರಿಕೊಳ್ಳುವಂತೆ—ರಾಮನಾಮದಿಂದ ಒಂದುಬಗೆಯ ಆನಂದವು ಮನಸ್ಸಿನಲ್ಲಿ ಉಕ್ಕುತ್ತದೆ. ಆದ್ದರಿಂದಲೇ ಗೋಂದಾವಳಿಯ ಶ್ರೀಬ್ರಹ್ಮಚೈತನ್ಯರ ಶಿಷ್ಯರಾದ ಶ್ರೀ ಬ್ರಹ್ಮಾನಂದರು :

ರಾಮ ರಾಮ ರಾಮ ಸೀತಾರಾಮ ರಾಮ ಎನ್ನಿರಿ।
ನಾಮಸ್ಮರಣೆಯ ಹೊರತು ಕಾಲವ ವ್ಯರ್ಥ ಕಳೆಯಬೇಡಿರಿ ॥

ಎಂಬ ಪಲ್ಲವಿಯ ಒಂದು ಪದದ ಮೂಲಕ ತಮ್ಮ ಶಿಷ್ಯರಿಗೆ ಉಪದೇಶಮಾಡಿರುತ್ತಾರೆ. ಇಂಥ ನಾಮಸ್ಮರಣೆಯ ರುಚಿಯು ಅನುಭವದಿಂದಲೇ ವೇದ್ಯ. ಒಮ್ಮೆ ರಾಮತೀರ್ಥರೆಂಬ ಒಬ್ಬ ಸಂನ್ಯಾಸಿಗಳು ಒಂದು ಹಳ್ಳಿಗೆ ಬಂದಿದ್ದರಂತೆ. ಅವರ ವಿಷಯವಾಗಿ ಮಾತನಾಡುತ್ತಾ ನನ್ನ ಪರಿಚಿತರೊಬ್ಬರು ಹೇಳಿದ್ದೇನೆಂದರೆ: ಆ ಮಹನೀಯರು ರಾತ್ರಿ ಏಕಾಸನವಲ್ಲಿ ಕುಳಿತು ಒಂದೇಸಮನೆ ಗಡಿಯಾರವು ಟಿಕ್ ಟಿಕ್ ಟಿಕ್ ಎನ್ನುವಂತೆ ಸಮವ್ಯವಧಾನವಾಗಿ 'ರಾಮ!' 'ರಾಮ!' ಎನ್ನುತ್ತಲೇ ಇರುತ್ತಿದ್ದರು. ಅವರು ಯಾವಾಗ ಎಷ್ಟುಹೊತ್ತು ನಿದ್ರಿಸುತ್ತಿದ್ದರೋ ತಿಳಿಯುವುದೇ ಆಗುತ್ತಿರಲಿಲ್ಲ.

ಆತ್ಮಾರಾಮಾಶ್ಚ ಮುನಯೋ ನಿರ್ಗ್ರನ್ಥಾ ಅಪ್ಯುರುಕ್ರಮೇ ।
ಕುರ್ವನ್ತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿಃ ॥

ಎಂದು ಭಾಗವತದಲ್ಲಿ (೧–೭–೧೦) ಹೇಳಿರುವಂತೆ ಆತ್ಮರತಿಯಲ್ಲಿದ್ದುಕೊಂಡು ಯಾವ ಹೃದಯಗ್ರಂಥಿಯೂ ಇಲ್ಲದ ಮುನಿಗಳುಕೂಡ ಸಗುಣಬ್ರಹ್ಮದಲ್ಲಿ ನಿರ್ಹೇತುಕವಾದ ಭಕ್ತಿಯನ್ನು ಮಾಡುವರು. ಅಂಥ ಚಿತ್ತಾಕರ್ಷಕಗುಣಗಳುಳ್ಳಾತನು, ಆ ಭಗವಂತ! ಅಂಥ ಗುಣಗಳನ್ನು ತಿಳಿಸುವ ನಾಮದಲ್ಲಿಯೂ ಹಾಗೆಯೇ ಅಹೈತುಕವಾದ ಪ್ರೇಮವುಂಟಾದರೆ ನಾವು ಧನ್ಯರು.

ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ।
ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತೈರ್ಮೃಗೈರಿವ ॥

ಅನು. ೧೬

ಎಂಬ ಅನುಸ್ಮೃತಿಯಲ್ಲಿ ಹೇಳಿರುವಂತೆ ಭಗವಂತನ ನಾಮವನ್ನು ಪರವಶರಾಗಿ ಕೀರ್ತನಮಾಡಿದರೂ, ಸಿಂಹಗರ್ಜನೆಯನ್ನು ಕೇಳಿದ ಮೃಗಗಳು ದಿಕ್ಕಾಪಾಲಾಗಿ ಓಡಿಹೋಗುವಹಾಗೆ, ಸರ್ವಪಾತಕಗಳೂ ಮನುಷ್ಯನನ್ನು ಬಿಟ್ಟು ಓಡುವವು! 'ಒಂದು ಕೀರ್ತನೆಯನ್ನು ಮಾಡಿಸಿರಿ, ಕಥೆಯೊಂದಕ್ಕೆ ಹತ್ತೇರೂಪಾಯಿ'—ಎಂದು ಧನಿಕರಲ್ಲಿ ಬೇಡುವುದಕ್ಕೆ ಬರುವ ಕೀರ್ತನಕಾರರ ವಚನವಿದಲ್ಲ. ವಿರಕ್ತಶಿಖಾಮಣಿಗಳಾದ ಶುಕರು ಪರೀಕ್ಷಿತಮಹಾರಾಜನನ್ನು ಕುರಿತು :

ಏತನ್ನಿರ್ವಿದ್ಯಮಾನಾನಾಮಿಚ್ಛತಾಮಕುತೋಭಯಮ್ ।
ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್ ॥

ಭಾಗ. ೨-೧-೧೧

'ರಾಜನೆ, ವಿರಕ್ತನಾಗಿ ಏತಕ್ಕೂ ಅಂಜದಿರುವ ಪರಮಪುರುಷಾರ್ಥವನ್ನು ಬಯಸುವವರಿಗೆ ಹರಿನಾಮಕೀರ್ತನೆಯೇ ಉಪಾಯವೆಂದು ನಿರ್ಣೀತವಾಗಿರುತ್ತದೆ'—ಎಂದು ಅಪ್ಪಣೆಕೊಡಿಸಿರುತ್ತಾರೆ. ಒಮ್ಮೆ ಹರಿಹರದಲ್ಲಿ ನನಗೆ ದೇವಸ್ಥಾನದ ಬಾಗಿಲಬಳಿ ಕುಳಿತಿದ್ದ ಒಬ್ಬ ಸಂನ್ಯಾಸಿಗಳ ದರ್ಶನವಾಯಿತು. ದೇವರ ದರ್ಶನಕ್ಕೆ ಬಂದುಹೋಗುವವರು ಎಷ್ಟೋ ಜನರಿದ್ದರೂ ಅದೇಕೋ, ಅವರನ್ನು ಯಾರೂ ಮಾತನಾಡಿಸಿರಲಿಲ್ಲ. ನನ್ನ ಬಲವಂತದ ಪ್ರಾರ್ಥನೆಗೆ ಅವರು ಅನುಮತಿ ಕೊಟ್ಟು ನನ್ನ ಮನೆಗೆ ಬಂದರು. ನಾನು ಅಕಸ್ಮಾತ್ತಾಗಿ 'ರಾಮ!' ಎಂದು ಉಚ್ಚರಿಸಿದ್ದನ್ನು ಕೇಳಿ ಅವರು 'ಯಾರೀ ರಾಮನು?' ಎಂದು ಕೇಳಿದರು. 'ರಾಮರು ಎಷ್ಟು ಮಂದಿ?' ಎಂದು ನಾನು ಕೇಳಿದ್ದಕ್ಕೆ "ಆಯಾಸಪರಿಹಾರಕ ರಾಮ, ಹರ್ಷದಾಯಕ ರಾಮ, ಉತ್ಸಾಹವರ್ಧಕ ರಾಮ, ದುಷ್ಟರಾಕ್ಷಸವಿನಾಶಕ ರಾಮ" ಎಂದು ಎಷ್ಟೋ ರಾಮರುಂಟು" ಎಂದು ಉತ್ತರವಿತ್ತರು. ಒಂದೇ ಭಗವನ್ನಾಮಕ್ಕೆ ಎಷ್ಟು ಸತ್ಫಲವುಂಟು—ಎಂಬುದು ನನಗೆ ಆಗ ಮನಸ್ಸಿಗೆ ತಾಕಿತು.

ಊಟಮಾಡುವಾಗ ಈಗಿನ ಜನರು ಎಷ್ಟೋ ವರ್ತಮಾನದ ಸುದ್ದಿಗಳ ವಿಚಾರವನ್ನು ಮಾಡುತ್ತಾ ಕಾಡುಹರಟೆಯಲ್ಲಿ ಕಾಲವನ್ನು ಕಳೆಯುತ್ತಿರುತ್ತಾರೆ. ಹಿಂದೆ ಊಟಕ್ಕೆ ಕೂತವರೆಲ್ಲರೂ ತ್ರಿಸುಪರ್ಣಾದಿಮಂತ್ರಗಳನ್ನೋ ಅಥವಾ ಭಗವನ್ನಾಮವನ್ನೋ ಜಪಿಸುತ್ತಿದ್ದು ಭೋಜನವನ್ನು ಪ್ರಾರಂಭಿಸುತ್ತಿದ್ದುದರಿಂದ ಉಂಡ ಅನ್ನವು ಭಗವತ್ಪ್ರಸಾದವಾಗುತ್ತಿತ್ತು. ನಮ್ಮ ಹಿರಿಯರು

ಮನೆಯಲ್ಲಿ "ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ । ಸಹಸ್ರನಾಮತತ್ತುಲ್ಯಂ ರಾಮನಾಮ ವರಾನನೇ ॥ ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ । ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್ ॥ ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ । ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥" ಈ ಮೂರು ಶ್ಲೋಕಗಳನ್ನು ಊಟಮಾಡುವ ನಡುವೆಯೂ ಮತ್ತೆ ಮತ್ತೆ ಹೇಳಿಕೊಳ್ಳುವಂತೆ ಮಕ್ಕಳನ್ನು ನಿಯಮಿಸಿದ್ದರು. ಈ ಅಭ್ಯಾಸದ ಸಂಸ್ಕಾರದಿಂದ ಊಟಕ್ಕೆ ಕುಳಿತೊಡನೆ ನನಗೆ ಈ ಶ್ಲೋಕಗಳ ನೆನಪು ಈಗಲೂ ಬರುತ್ತದೆ. ರಾಮನಾಮವು ಸಹಸ್ರನಾಮಕ್ಕೆ ಸಮಾನ ; ಆಪತ್ತನ್ನು ಕಳೆಯುವ, ಸರ್ವಸಂಪತ್ತುಗಳನ್ನೂ ಕೊಡುವ ಶ್ರೀರಾಮನಿಗೆ ಮತ್ತೆ ಮತ್ತೆ ನಮಸ್ಕಾರ !— ಎಂಬರ್ಥದ ಅನುಸಂಧಾನವೂ ಆಗುತ್ತದೆ. ರಾಮ, ಕೃಷ್ಣ-ಎಂಬೀ ನಾಮಗಳ ಜಪವು ತನಗೆತಾನೇ ಒಡಮೂಡುತ್ತದೆ !

ಈಗ ಅನೇಕರು ವೇದಾಂತದ ಮಾತು ಆಡುತ್ತಿದ್ದಾರೆ. ಆದರೆ ಯಾವದರಿಂದ ಪರಮಾರ್ಥವನ್ನು ಅರಿತುಕೊಳ್ಳಬಹುದೋ ಅದೇ ವೇದವು. ಭಗವನ್ನಾಮವು ವೇದವೆಂಬ ಅಭಿಪ್ರಾಯವು ಮನಸ್ಸಿನಲ್ಲಿ ಮಿಂಚಿದರೆ ನಾವು ಎಷ್ಟು ಕೃತಾರ್ಥರಾದೇವು !

— —

## ೨೨. ನಾಮಜಪ

( 20—8—69 )

ಭಗವಂತನ ನಾಮದ ಮಾಹಾತ್ಮ್ಯವನ್ನು ಕುರಿತು ಚರ್ಚಿಸಿದ್ದಾಯಿತು. ನಾಮವನ್ನು ಮಂತ್ರವಾಗಿ ಮಾಡಿಕೊಂಡು ಜಪಿಸುವ ಕ್ರಮವನ್ನು ಕುರಿತು ಹೇಳತಕ್ಕದ್ದು ಸ್ವಲ್ಪ ಇದೆ. ಭಗವಂತನಿಂದಲೇ ನಾಮರೂಪಗಳು ಪ್ರಕಟವಾಗಿರುತ್ತವೆಯಾದರೂ ನಾವು ವಿಷಯಗಳ ರೂಪವನ್ನೇ ಸ್ಮರಿಸುತ್ತಾ, ಅಥವಾ ಭಗವಂತನನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಬರಿಯ ಬೀಳುಮಾತುಗಳಿಗೆ ಬೆರಗಾಗಿಬಿಡುತ್ತಿದ್ದೇವೆ. ಈಗಿನ ಕಾಲದಲ್ಲಿ ವಿಷಯವಿಲ್ಲದೆ ಬಹಳ ಮಾತನಾಡುತ್ತಾ ಇರುವದರಿಂದ ನಾವು ಆಡುವ ಮಾತೆಲ್ಲ ಸತ್ಯವಚನವಾಗಿರುವದಿಲ್ಲ. 'ಭಗವಂತನೊಬ್ಬನನ್ನೇ ತಿಳಿದುಕೊಳ್ಳಬೇಕು, ಮಿಕ್ಕ ಮಾತುಗಳನ್ನು ಬಿಟ್ಟುಬಿಡಬೇಕು" ಎಂದು ಉಪನಿಷತ್ತುಗಳು ಉಪದೇಶಿಸುತ್ತವೆ. ಅನೃತವಾದ ವಿಷಯಗಳ ಹರಟೆಯು ಕಡಿಮೆಯಾಗಬೇಕಾದರೆ, ಅಥವಾ ಇಲ್ಲವಾಗಿಬಿಡಬೇಕಾದರೆ,

'ಮೌನ'ವು ಅವಶ್ಯ. ಮೌನದಿಂದಲೇ ಸಾತ್ತ್ವಿಕವಾದ ಭಗವಂತನ ವಿಷಯವನ್ನು ಮನನಮಾಡುತ್ತಿರುವೆವು. ಇದಕ್ಕೆ ಭಗವನ್ನಾಮಜಪವೇ ಉಪಾಯ.

ಜಪದ ನಿಜವಾದ ಸ್ವರೂಪವೇನು ? 'ಕಪಿಯನ್ನು ಕೂಡಿಸಿಕೊಂಡು ಜಪಕ್ಕೆ ಕೂತಂತೆ' ಎಂಬುದೊಂದು ಗಾದೆ. ನಮ್ಮ ಮನಸ್ಸೆಂಬುದು ಒಂದು ಕಪಿಯಿದ್ದಂತೆ. ಅದಕ್ಕೆ ಸುಮ್ಮನೆ ಇರುವದಕ್ಕೆ ಆಗುವದೇ ಇಲ್ಲ; ಯಾವದಾದರೊಂದು ವಿಷಯವನ್ನು ವಿಕಲ್ಪಿಸುತ್ತಿರುವದೇ ಅದರ ಸ್ವಭಾವ. ಅಷ್ಟರಿಂದ ಅದನ್ನು ಭಗವಂತನ ಪವಿತ್ರವಾದ ನಾಮದ ಜಪದ ಚಿಂತನೆಗೆ ತಿರುಗಿಸಬೇಕು. ಕೆಲವರು ಯಾವಾಗಲೂ ವ್ಯವಹಾರದಲ್ಲಿ ಭಗವಂತನ ನಾಮವನ್ನೇ ನುಡಿಯುತ್ತಿರುವೆವು–ಎಂದು ಸಂಕಲ್ಪಿಸಿಕೊಂಡಿರುತ್ತಾರೆ. ಅದರೆ ಅವರಿಗೆ ಭಗವನ್ನಾಮವೆಂಬುದೊಂದು ಸಂಕ್ಷೇಪಲಿಪಿ, ಅಥವಾ ಸಂಕ್ಷಿಪ್ತವಾಚಕವಿದ್ದಂತೆ. 'ಹತ್ತಿರಕ್ಕೆ ಬನ್ನಿ!' ಎಂಬುದನ್ನು ಸೂಚಿಸುವ ಕೈಸನ್ನೆಯನ್ನು ಮಾಡುತ್ತಾ 'ರಾಮ, ರಾಮ!' ಎನ್ನುವರು; 'ಬೇಡ, ಬೇಡ!' ಎಂಬರ್ಥವನ್ನು ಸೂಚಿಸುವ ಕೈಸನ್ನೆಯೊಡನೆ 'ರಾಮ, ರಾಮ!' ಎನ್ನುವರು. ಅವರ ಮುಖಚೇಷ್ಟೆ, ಅಥವಾ ಕೈಸನ್ನೆ–ಮುಂತಾದ ಸೂಚಕಗಳಿಂದ ಈಗ 'ರಾಮ' ಎಂಬ ಶಬ್ದಕ್ಕೆ ಯಾವದು ಅರ್ಥ–ಎಂಬುದನ್ನು ಶ್ರೋತೃಗಳು ನಿರ್ಣಯಿಸಿಕೊಳ್ಳಬೇಕಾಗುತ್ತದೆ. ಒಂದು ರಾಮ ಎಂಬ ಶಬ್ದಕ್ಕೇ ಅವರು ಎಲ್ಲಾ ಅರ್ಥಗಳನ್ನೂ ಇಟ್ಟುಕೊಂಡಿರುತ್ತಾರೆ, ಅಷ್ಟೆ. ನಿಜವಾಗಿ ನೋಡಿದರೆ ಅವರ ಪಾಲಿಗೆ 'ರಾಮ!' ಎಂಬುದು ಭಗವಂತನಾದ ಶ್ರೀರಾಮಚಂದ್ರನ ಹೆಸರೇ ಆಗಿರುವದಿಲ್ಲ. ವ್ಯವಹಾರದಲ್ಲಿ ಅವರಿಗೂ ಅವರ ಮಾತನ್ನು ಅರ್ಥಮಾಡಿಕೊಳ್ಳುವದಕ್ಕೆ ಪ್ರಯತ್ನಿಸುವವರಿಗೂ ವೃಥಾ ಆಯಾಸವೇ ಆಗುತ್ತಿರುವದೇ ಹೊರತು, ಅವರಿಗೆ ನಾಮಜಪದ ಫಲವೇನೂ ದೊರಕುತ್ತಿರುವದಿಲ್ಲ.

ನಾಮವು ನಿಜವಾಗಿ ಭಗವನ್ನಾಮವೇ ಆಗಬೇಕಾದರೆ ದ್ರಾಕ್ಷಿಯ ಹಣ್ಣಿನಲ್ಲೆಲ್ಲ ರಸವೇ ತುಂಬಿರುವಂತೆ, ನಾಮದೊಳಗೆಲ್ಲ ಭಗವದ್ಭಾವನೆಯೇ ತುಂಬಿಕೊಂಡಿರಬೇಕು, ಶಬ್ದವು ಉಚ್ಚೈರುಪಾಂಶುಮಾನಸಗಳೆಂಬ ಮೂರು ಆಕಾರಗಳುಳ್ಳದ್ದು. ನಾವು ಮೊದಲು ಉಚ್ಚೈರೂಪದಿಂದ ಜಪಿಸಿ, ಆಮೇಲೆ ಉಪಾಂಶು (ಪಿಸುಮಾತಿನರೂಪ)ವಾಗಿ ಅದನ್ನು ತಿರುಗಿಸಿಕೊಳ್ಳಬೇಕು. ಕಾಲಕ್ರಮದಲ್ಲಿ ಅದು ಮಾನಸಜಪವೂ ಆಗುವಂತೆ ಪ್ರಯತ್ನಿಸಬೇಕು. ಮೊದಲೇ ಮಾನಸಿಕಜಪವನ್ನು ಮಾಡುವದಕ್ಕೆ ಹೊರಟರೆ ಅದು ಮಾನಸಿಕವೇ–ಎಂದರೆ ಉಪೇಕ್ಷೆಯೇ– ಆಗಿ ಪರಿಣಮಿಸುವ ಅಪಾಯವಿದೆ. ಎಷ್ಟೋ ಜನರು ಜಪಮಾಲಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಮಣಿಗಳನ್ನು ಬೆರಳುಗಳಿಂದ

ಆಡಿಸುತ್ತಾ ಇದ್ದರೂ ಅವರ ಮನಸ್ಸು ಮತ್ತೆ ಯಾವುದೋ ಲೌಕಿಕವಿಷಯದಲ್ಲಿ ಹರಿದಾಡುತ್ತಿರುತ್ತದೆ. ನಿಜವಾದ ಜಪಮಾಡಬೇಕಾದವರು ಮಾಲೆಯ ಪ್ರತಿಯೊಂದು ಮಣಿಗೂ ಒಂದೊಂದು ನಾಮಕ್ಕೂ ಸೊತ್ತಾಗಿ ಸಂಬಂಧವಾಗುವಂತೆ ಏಕಾಗ್ರತೆಯಿರಬೇಕು. ಇಷ್ಟಾದರೂ ಒಂದು ನಾಮವನ್ನು ಉಚ್ಚಾರಣೆಮಾಡಿ ಕೈಬೆರಳು ಮಾತ್ರ ಎರಡು ಮಣಿಗಳನ್ನು ದಾಟಿ ಮುಂದಕ್ಕೆ ಓಡಿಬಿಡುವುದುಂಟು. ಪ್ರಮಾದದಿಂದ ಹಾಗಾಗದಂತೆ. ಇದಕ್ಕಾಗಿ ಲೆಕ್ಕಮಾಡುವಾಗಲಂತೆ ೧೦೮ (ನೂರೆಂಟು)ನ್ನು ನೂರು ಎಂದು ಲೆಕ್ಕಕ್ಕೆ ತೆಗೆದುಕೊಂಡು ಮಾಲಿಕೆಯಲ್ಲಿ ಮಣಿಗಳನ್ನು ಪೋಣಿಸಿರುವುದು ವಾಡಿಕೆ.

ಮಣಿಯನ್ನು ಮುಟ್ಟುವಾಗಲೂ ಒಂದೊಂದು ನಾಮವನ್ನೇ ಮುಟ್ಟುತ್ತೇನೆ—ಎಂಬ ಸ್ಪಷ್ಟಭಾವನೆಯನ್ನು ತಂದುಕೊಳ್ಳಬೇಕು. ಧ್ಯಾನಕಾಲದಲ್ಲಿ ನಾವೆತ್ತಿ ಅಥವಾ ನಾಮರೂಪಾದಿಗಳನ್ನು ಎಣಿಸಿಕೊಳ್ಳುವಾಗ ಲಕ್ಷ್ಯವಿಟ್ಟು ಒಂದೊಂದು ರೂಪಾದಿಯನ್ನೂ ಮುಟ್ಟಿಮುಟ್ಟಿ ದೃಷ್ಟಿಯಿಟ್ಟು ನೋಡಿಕೊಳ್ಳುವ ಎಚ್ಚರಿಕೆಯನ್ನು ಹೇಗೆ ಲೌಕಿಕರು ತೆಗೆದುಕೊಳ್ಳುತ್ತಿರುವರೋ ಅಷ್ಟೇ ಎಚ್ಚರಿಕೆಯಿಂದ ಮಣಿಗಳನ್ನು ಮುಟ್ಟಿ ಎಣಿಸಬೇಕು. ನಾವು ನಿನ್ನೆಯದಿನ ಹೇಳಿದಂತೆ ಹಳ್ಳಿಯಲ್ಲಿ ರಾಮತೀರ್ಥರೆಂಬ ಸಂನ್ಯಾಸಿಗಳು 'ರಾಮ', 'ರಾಮ!' ಎಂದು ಮೆಲ್ಲಮೆಲ್ಲಗೆ ಕ್ರಮವರಿತು ಜಪಿಸುತ್ತಿದ್ದ ಹಾಗೆಯೇ ಎಣಿಸುತ್ತಿರಬೇಕು. ಈ ಆದರಸತ್ಕಾರಪೂರ್ವಕವಾಗಿ ಮಾಡಿದ ಜಪದಿಂದ ಮನಸ್ಸಿನಮೇಲೆ ಸತ್ಪರಿಣಾಮವಾಗುವದು.

ತಾಂತ್ರಿಕರು ಜಪವನ್ನು ಮಾಡುವದಕ್ಕೆ ಅಂಗನ್ಯಾಸ, ಕರನ್ಯಾಸ—ಎಂಬ ಕ್ರಮವೊಂದನ್ನು ಏರ್ಪಡಿಸಿಕೊಂಡಿರುತ್ತಾರೆ. ಉದಾಹರಣೆಗೆ 'ಶ್ರೀರಾಮಾಯ ನಮಃ' ಎಂಬ ಮಂತ್ರವನ್ನು ನಾವು ಜಪಿಸುವದಾಗಿದ್ದರೆ 'ಶ್ರೀ' ಎಂಬಕ್ಷರವನ್ನು ಎರಡು ಕೈಗಳ ಅಂಗುಷ್ಠ(ಹೆಬ್ಬೆರಳು)ಗಳಲ್ಲಿ ನ್ಯಾಸಮಾಡುತ್ತಾರೆ; ಎಂದರೆ ಆ ಬೆರಳುಗಳಿಗೂ ಶ್ರೀಕಾರಕ್ಕೂ ತಾದಾತ್ಮ್ಯಭಾವನೆಯನ್ನು ತಂದುಕೊಳ್ಳುತ್ತಾರೆ. ಇದರಂತೆ 'ರಾ' ಎಂಬಕ್ಷರವನ್ನು ತರ್ಜನೀ (ತೋರುಬೆರಳು)ಗಳಲ್ಲಿ ನ್ಯಾಸ ಮಾಡುತ್ತಾರೆ. 'ಮಾ' ಎಂಬಕ್ಷರವನ್ನು ಮಧ್ಯಮಾ (ನಡುಬೆರಳು)ಗಳಲ್ಲಿ ನ್ಯಾಸಮಾಡುತ್ತಾರೆ; 'ಯ' ಎಂಬಕ್ಷರವನ್ನು ಅನಾಮಿಕೆ (ನಾಲ್ಕನೆಯ ಬೆರಳು)ಗಳಲ್ಲಿ ನ್ಯಾಸಮಾಡುತ್ತಾರೆ; 'ನ' ಎಂಬುದನ್ನು ಕನಿಷ್ಠಿಕೆ (ಕಿರುಬೆರಳು)ಗಳಲ್ಲಿ ನ್ಯಾಸಮಾಡುತ್ತಾರೆ; ಉಳಿದಿರುವ 'ಮಃ' ಎಂಬುದನ್ನು ಕರತಲಕರಪೃಷ್ಠ (ಅಂಗೈಮುಂಗೈ)ಗಳಲ್ಲಿ ನ್ಯಾಸಮಾಡುತ್ತಾರೆ. ಇದು ಕರನ್ಯಾಸವಾಯಿತು. ಮತ್ತೆ ಇದೇ ಅಕ್ಷರಗಳನ್ನು ಯಥಾಸಂಖ್ಯವಾಗಿ ಹೃದಯ, ಶಿರಸ್ಸು, ಶಿಖೆ,

ಕವಚ, ನೇತ್ರತ್ರಯ- ಈ ಶರೀರಭಾಗಗಳಲ್ಲಿ ನ್ಯಾಸಮಾಡುವದು. ಇದು ಅಂಗನ್ಯಾಸವು. ಈ ಕ್ರಮವನ್ನು ಮಂತ್ರವನ್ನು ಪುರಶ್ಚರಣೆಮಾಡಿರುವ ಗುರುಗಳಿಂದ ತಿಳಿದುಕೊಂಡು ಅದರಂತೆ ಸಾಧಕರು ಮಾಡಿಕೊಳ್ಳಬೇಕು. ಹೀಗೆ ಮಾಡಿದರೆ ಉಪ್ಪಿನಕಾಯಿಗೆ ಉಪ್ಪು, ಮೆಣಸು- ಮುಂತಾದ ವ್ಯಂಜನಗಳು ಕಾಲಕ್ರಮದಲ್ಲಿ ಊಡಿಕೊಳ್ಳುವಂತೆ ನಮ್ಮ ಶರೀರದಲ್ಲೆಲ್ಲ ಮಂತ್ರವು ಊಡಿಕೊಂಡು ಸಂಪೂರ್ಣಶರೀರವು ಮಂತ್ರಮಯವಾಗಿಬಿಡುವದು.

ಹೀಗೆ ಮಂತ್ರಾಕ್ಷರಗಳ ಭಾವನೆ, ಶರೀರದ ಮಂತ್ರೀಕರಣ, ಜಪಮಾಲಿಕೆಯ ಮಣಿನಾಮತಾದಾತ್ಮ್ಯಭಾವನೆ-ಇವು ಅಳವಟ್ಟರೆ ಮನಃಪೂರ್ವಕವಾಗಿ ಮಾಡಿದ ಒಂದು ಮಾಲಿಕೆಯ ಜಪಕ್ಕೂ ಹೆಚ್ಚಿನ ಬೆಲೆಯುಂಟು. ಮನಸ್ಸಿನ ಭಾವನೆಯಿಲ್ಲದೆ ಹತ್ತುಸಾವಿರಜಪಮಾಡಿದರೂ ಅದು ನಿಜವಾದ ಜಪವಾಗುವದಿಲ್ಲ. ಶ್ರದ್ಧೆಯಿಂದ ಮಾಡಿದ ಜಪದಿಂದಲೇ ಮನಸ್ಸಿನಲ್ಲಿ ಸಂಸ್ಕಾರವು ನಿಂತುಕೊಳ್ಳುವದು. ಇದು ನಾನು ಉಪನ್ಯಾಸಕ್ಕಾಗಿ ಕಲ್ಪಿಸಿಕೊಂಡ ಹೊಸಕ್ರಮವೇನೂ ಅಲ್ಲ. ಅತೀಂದ್ರಿಯವಾದ ಮನಸ್ಸನ್ನು ಸ್ಥಿರಗೊಳಿಸಿಕೊಂಡು ಅದರಮೇಲೆ ದಿವ್ಯಸಂಸ್ಕಾರವುಂಟಾಗುವದಕ್ಕೆ ಮಾಡಬೇಕಾದ ಈ ಕ್ರಮವನ್ನು ವ್ಯಾಸವಸಿಷ್ಠನಾರದಾದಿಋಷಿಗಳು ಹೇಳಿರುವದೇ ನನ್ನ ಮುಖದ ದ್ವಾರದಿಂದ ಬಂದಿದೆ. ಇದರಲ್ಲಿ ನನ್ನದಾಗಿರುವದು ಯಾವದೂ ಇಲ್ಲ. ಆ ಮಹಾತ್ಮರು ಹೇಳಿರುವದನ್ನು ಯಥಾಶಕ್ತಿಯಾಗಿ ಅರಿತುಕೊಂಡು ನಿಮ್ಮಗಳ ಮುಂದೆ ಇಟ್ಟಿರುತ್ತೇನೆ, ಅಷ್ಟೆ. ನಮ್ಮ ಆಲೋಚನೆಗಳು ಸುಮ್ಮನೆ ಹೊರತೋರಿಕೊಂಡು ಲಯವಾಗಿಬಿಡುವದಿಲ್ಲ. ಅವು ಚಿತ್ತಾಕಾಶದಲ್ಲಿಯೂ ಭೌತಿಕಾಕಾಶದಲ್ಲಿಯೂ ಅವ್ಯಕ್ತರೂಪದಿಂದ ಸಂಸ್ಕಾರರೂಪದಿಂದ ನಿಂತುಬಿಟ್ಟಿರುವವೆಂದೂ ಸಾವಿರಾರುವರ್ಷಗಳ ಹಿಂದೆ ಯಾರಾದರೂ ಪ್ರಧಾನಪುರುಷರು ಮಾಡಿದ್ದ ಆಲೋಚನೆಗಳನ್ನು ಕೂಡ ಈಗ ಮತ್ತೆ ಪ್ರಕಟಗೊಳಿಸುವ ಯಂತ್ರಗಳನ್ನು ಭೌತಿಕವಿಜ್ಞಾನಶಾಸ್ತ್ರಜ್ಞರು ಏರ್ಪಡಿಸಿರುತ್ತಾರೆಂದೂ ಕೇಳಿರುತ್ತೇನೆ. ಹೀಗಿರುವದರಿಂದ ನಮ್ಮ ಮನಸ್ಸಿನಲ್ಲಿ ಆಗುವ ಸಂಸ್ಕಾರಗಳ ವಿಷಯದಲ್ಲಿ ನಾವು ಎಷ್ಟು ಎಚ್ಚರಿಕೆಯಿಂದ ಇರಬೇಕಾಯಿತು ! ನಾಮಜಪದ ಸಂಸ್ಕಾರವು ಅತೀಂದ್ರಿಯವಾಗಿರುವದರಿಂದ ಅದರ ತತ್ತ್ವವನ್ನು ಅರಿತು ನಿಶ್ಚಯಿಸಿಕೊಳ್ಳುವದು ಪ್ರಾಕೃತರಿಗೆ ಎಂದಿಗೂ ಸಾಧ್ಯವಿಲ್ಲ.

ಹೊರಗೆ ನಮಗೆ ಕೇಳಬರುವ ನಾಮರೂಪವಾದ ಶಬ್ದರೂಪಕ್ಕೆ "ವೈಖರೀ" ಎಂದು ಹೆಸರು. ಅದು ಮೂಲದಲ್ಲಿ ಆತ್ಮರೂಪವಾಗಿಯೇ ಇರುವಾಗ ಅದಕ್ಕೆ "**ಪರಾ**" ಎಂದು ಹೆಸರು. ಅದು ಇನ್ನಷ್ಟು ಮೇಲಕ್ಕೆದ್ದಾಗ 'ಮಧ್ಯಮಾ' ಎನಿಸುವದು. ಆಮೇಲೆ ವಿಷಯವಿಷಯಿರೂಪವಾಗಿ ವಿಂಗಡಿಸಿಕೊಳ್ಳುವದು, ವಿಷಯಿಯಾದ ಸಾಕ್ಷಿರೂಪವನ್ನು 'ಪಶ್ಯನ್ತೀ' ಎನ್ನುವರು. ಈಗ ಆ ಶಬ್ದವೇ

ವೈಖರಿಯವಾಗಿ ಕಾಣಿಸಿಕೊಳ್ಳುತ್ತಿರುವದು. ನಾವು ಇಲ್ಲಿ ಕೊಟ್ಟಿರುವ ವಿವರಣೆಯು ಪದಾರ್ಥಶಬ್ದದ ವ್ಯಕ್ತೀಭಾವದ ಪ್ರಕಾರವನ್ನು ಸ್ಪಷ್ಟವಾಗಿ ತಿಳಿಯಿಸುವದಕ್ಕೆ ಸಹಾಯಕವಾದ ಸಾಧನವೆಂದು ಭಾವಿಸಬೇಕು. ಹೆಚ್ಚಿನ ವಿವರವನ್ನು ಬಲ್ಲವರಿಂದ ತಿಳಿದುಕೊಳ್ಳಬೇಕಾಗಿದೆ.

ನಾಮಶಬ್ದವು ಪ್ರಾಣಕ್ರಿಯೆಯಿಂದಲೇ ಹೊರಕ್ಕೆ ಪ್ರಕಟವಾಗುತ್ತಿರುವದರಿಂದ ಆ ಪ್ರಾಣವೇ ನಾಮ ವ್ಯಕ್ತರೂಪವೆಂದು ಭಾವಿಸಬಹುದು. ಪ್ರಾಣವು ಉಚ್ಛ್ವಾಸನಿಶ್ವಾಸಗಳಿಂದ ಸಾಮಾನ್ಯವಾಗಿ ಹೊರಗೆ ತೋರಿಕೊಳ್ಳುವದರಿಂದ ಅದನ್ನು ಪ್ರಾಣದ ಸ್ಥೂಲರೂಪವೆಂದು ಭಾವಿಸಬಹುದು. ಉಸಿರಿನ ಸಾಕ್ಷಿಗಳಿಂದ ಹೊರಕ್ಕೆ [illegible] ಬರುವ ನಾಮವನ್ನು ಒಂದಿಸಿಕೊಂಡು ಅದು ಉಚ್ಛ್ವಾಸವಾದಾಗ ಒಳಕ್ಕೆ ಹೋದಂತೆಯೂ ನಿಶ್ವಾಸವಾದಾಗ ಹೊರಕ್ಕೆ ತೋರಿಕೊಂಡಂತೆಯೂ ಭಾವಿಸಿದರೆ—ಶಬ್ದದ ಉಚ್ಚಾರಣೆಯೇ ಇಲ್ಲದಿದ್ದಾಗಲೂ ಪ್ರಾಣಾಪಾನಗಳನ್ನೇ ನಾಮದ ರೂಪಗಳೆಂದು ಭಾವಿಸಿಕೊಂಡರೆ —ನಾವು ಉಸಿರುಬಿಡುವಾಗಲೂ ಉಸಿರುತೆಗೆದುಕೊಳ್ಳುವಾಗಲೂ ನಾಮಜಪವು ಆಗುತ್ತಿರುತ್ತದೆ ಎಂಬ ಭಾವನೆಯನ್ನು ಅಳವಡಿಸಿಕೊಳ್ಳಬಹುದು. ಈ ದೃಷ್ಟಿಯಿಂದ ನೋಡುವಾಗ ಜೀವನಿಗೆ ಎಷ್ಟುಸಲ ಉಚ್ಛ್ವಾಸನಿಃಶ್ವಾಸಗಳಾಗುವವೋ ಅಷ್ಟುಸಾರಿ ನಾಮಜಪವಾಯಿತೆಂಬ ಭಾವನೆಯನ್ನು ತಂದುಕೊಳ್ಳಬಹುದು. ಇದು ನಾಮಜಪದ ಸೂಕ್ಷ್ಮರೂಪದ ಭಾವನೆ.

ಇನ್ನೂ ಒಳಹೊಕ್ಕು ನೋಡಿದರೆ ಪ್ರಾಣವು ಮನಸ್ಸಿನ ಅಧೀನವಾಗಿರುತ್ತದೆ. ಮನಃಸ್ಪಂದವಿಲ್ಲದೆ ಪ್ರಾಣಸ್ಪಂದವು ಇರುವಂತೆಯೇ ಇಲ್ಲ. ಆದ್ದರಿಂದ ಸ್ವಾಭಾವಿಕವಾಗಿ ಪ್ರಾಣಾಪಾನಗಳು ಆಡುತ್ತಿರುವಾಗ ಆ ಪ್ರಾಣವೃತ್ತಿಗಳು ಮನೋವೃತ್ತಿಗಳ ಉತ್ಪತ್ತಿಪ್ರಲಯಗಳ ಅಧೀನವೆಂದು ಭಾವಿಸುವದಕ್ಕೆ ಬರುತ್ತದೆ. ಬಹಳ ಸೂಕ್ಷ್ಮದೃಷ್ಟಿಯುಳ್ಳವರು ಪ್ರಾಣವೃತ್ತಿಯ ಕಡೆಗೆ ಲಕ್ಷ್ಯವಿಡದೆ ಮನೋವೃತ್ತಿಯನ್ನೇ ನಿಟ್ಟಿಸಿ ನಿರೀಕ್ಷಿಸುತ್ತಿದ್ದರೆ ಒಂದೊಂದು ವೃತ್ತಿಯೂ ಒಂದೊಂದು ನಾಮವೆಂಬ ಭಾವನೆಯನ್ನು ಮಾಡಿಕೊಳ್ಳುವದಕ್ಕೆ ಬರುತ್ತದೆ. ಆಗ ನಾವು ಸಾಕ್ಷಿರೂಪದ ಪಶ್ಯಂತಿಯಾದ ನಾಮವನ್ನು ಜಪಿಸಿದಂತೆ ಆಗುವದು. ಮನೋವೃತ್ತಿಯು ನಾಮದ ಹೊರಹೊದಿಕೆಮಾತ್ರವೇ ಆಗಿ ಉಳಿಯುವದು. ಇನ್ನು ಅನುಭವಬಲದಿಂದ ನೋಡುವದಾದರೆ ಮನೋವೃತ್ತಿಯೆಂಬುದು ಸಾಕ್ಷಿಯಾದ ಆತ್ಮಚೈತನ್ಯಕ್ಕಿಂತ ಬೇರೆಯಾಗಿಲ್ಲವೇ ಇಲ್ಲ. ಆದ್ದರಿಂದ ಆಗ ರಾಮನೆಂಬ ಶಬ್ದ, ರಾಮನೆಂಬ ರೂಪ—ಈ ಎರಡೂ ಆತ್ಮಸ್ವರೂಪದಲ್ಲಿಯೇ ವಿಲಯವಾಗಿ ಬಿಡುವದು.

ಈವರೆಗೆ ನಾನು ನಾದದ ಸೂಕ್ಷ್ಮತರರೂಪವನ್ನು ವರ್ಣಿಸಿರುವದು ಸಾಮಾನ್ಯಶ್ರೋತೃಗಳಿಗೆ ಬರಿಯ ಕಥೆಯಾಗಿದ್ದೀತೇ ಹೊರತು, ಅದು ಅನುಭವಕ್ಕೆ ಬರುವದು ಅಷ್ಟು ಸುಲಭವಲ್ಲ. ಆದರೂ ಇದರ ರಹಸ್ಯವು ಗಹನವಾದುದೆಂದೂ ಅದು ಯಾವದೋ ಒಂದು ಅಲ್ಪಸಾಧನೆಯೆಂದು ಕಡೆಗಣಿಸುವದು ನಮ್ಮ ಶ್ರೇಯಸ್ಸಿಗೆ ನಾವೇ ಅಡ್ಡಿಮಾಡಿಕೊಂಡಂತೆ ಆಗುವದೆಂದೂ ಈ ವರ್ಣನೆಯಿಂದ ಮನಸ್ಸಿಗೆ ತಾಕಿದರೆ ಅಷ್ಟೇ ಈ ದಿನದ ವಿಚಾರಕ್ಕೆ ಪ್ರಯೋಜನವೆಂದು ನಾನು ಭಾವಿಸುತ್ತೇನೆ.

## ೨೩. ಸಾಕಾರಸಗುಣೋಪಾಸನೆ

( 21—8—69 )

ಅತೀಂದ್ರಿಯವಾದ ಧರ್ಮಾದಿತತ್ತ್ವಗಳ ಅರಿವಿಗೆ ಪರಾಗ್ದೃಷ್ಟಿಯನ್ನು ಬಿಟ್ಟು ಪ್ರತ್ಯಗ್ದೃಷ್ಟಿಯನ್ನೇ ಅಳವಡಿಸಿಕೊಳ್ಳಬೇಕಾಗುತ್ತದೆ. ಇಂದ್ರಿಯಗೋಚರವಾದ ವಸ್ತುಗಳ ವಿಚಾರದಲ್ಲಿ ಅವುಗಳ ಪರಮಾರ್ಥವನ್ನು ಕಂಡುಹಿಡಿಯುವಷ್ಟು ಆಳವಾಗಿ ಪ್ರಯತ್ನವನ್ನು ಮಾಡಬೇಕಾದದ್ದೇನೂ ಇರುವದಿಲ್ಲ. ಮಾವಿನಕಾಯಿನ ತಿರುಳನ್ನು ತಿಂದು ಒಳಗಿನ ವಾಟೆಯನ್ನು ಬಿಸಾಡುವಂತೆ, ಇಂದ್ರಿಯಕ್ಕೆ ಗೋಚರವಾಗುವಷ್ಟುಮಟ್ಟಿಗೆ ಅವುಗಳ ಸ್ವರೂಪಸ್ವಭಾವಪ್ರವೃತ್ತಿಗಳನ್ನು ನಿರೀಕ್ಷಣಪರೀಕ್ಷಣಾದಿಗಳಿಂದ ಕಂಡುಹಿಡಿದು ಸಾಮಾನ್ಯನಿಯಮಗಳನ್ನು ನಿರ್ಣಯಿಸಿ ಸಿದ್ಧಾಂತಕ್ಕೆ ಬಂದುಬಿಡಬಹುದು. ಸರ್ವದೃಶ್ಯಗಳ ಪರಮಾರ್ಥವೇನೆಂಬುದನ್ನು ಕಂಡುಕೊಳ್ಳಬೇಕೆಂದು ಪ್ರಯತ್ನಿಸಬೇಕೆನ್ನುವ ಪ್ರಕ್ರಿಯೆಯು ಇದಲ್ಲ. ಇಂದ್ರಿಯಗೋಚರವಾಗುವ ವಿಶೇಷಗಳು ಬಾಹ್ಯದೃಷ್ಟಿಯಿಂದ ಎಷ್ಟೇ ಅಮೂಲ್ಯವಾಗಿರಲಿ, ತೆಂಗಿನಕಾಯಿಯ ಸಿಪ್ಪೆ, ಕರಟ– ಇವೆಲ್ಲವನ್ನೂ ಕೈಬಿಟ್ಟು ಒಳಗಿನ ತಿರುಳನ್ನೇ ತಿನ್ನಬೇಕೆನ್ನುವವರಂತೆ ಅಧ್ಯಾತ್ಮವಿದ್ಯಾರಸಿಕರು ಬಾಹ್ಯವಿಶೇಷಗಳನ್ನು ಬದಿಗೊತ್ತಿ ಒಳಕ್ಕೇ ಹೋಗಬೇಕಾಗುವದು. ಆದ್ದರಿಂದ ಅಧ್ಯಾತ್ಮದೃಷ್ಟಿಯನ್ನು ಅವಲಂಬಿಸಿಕೊಂಡು ಶರೀರಪ್ರಧಾನವಾದ ಮತ್ತು ವಾಕ್ಪ್ರಧಾನವಾದ ಸಾಧನೆಗಳನ್ನು ಮಾಡಿದ ಮೇಲೂ ಮನಃಪ್ರಧಾನವಾದ ಉಪಾಸನೆಯ ರೂಪದ ಸಾಧನವನ್ನು ಆಶ್ರಯಿಸಬೇಕಾಗುವದು.

16

ಶರೀರಪ್ರಧಾನವಾದ ಅರ್ಚನೆಯಲ್ಲಿಯೂ ವಾಕ್ಪ್ರಧಾನವಾದ ಸ್ತೋತ್ರಾದಿಗಳಲ್ಲಿಯೂ ಮನಸ್ಸು ಸೇರಿಕೊಂಡೇ ಇರುತ್ತದೆ. ಭಾಗವತದಲ್ಲಿ ಹೇಳಿರುವಂತೆ ಭಗವಂತನಿಗೆ ಅರ್ಪಿಸಿದ ಧೂಪದೀಪ ಮುಂತಾದ ದ್ರವ್ಯಗಳನ್ನು ಆತನ ಪ್ರಸಾದವೆಂದು ಸ್ವೀಕರಿಸುವಾಗ ಅವುಗಳಲ್ಲಿ "ತನ್ಮಯ" ಎಂಬ ಭಾವಾರೋಪವು ಇಲ್ಲಿ ಸಾಗುತ್ತದೆ. ಆಗಲೇ ಅದು ನಿಜವಾದ ಅರ್ಚನೆಯಾಗುತ್ತದೆ. ಹೀಗೆಯೇ ಜಪ, ಸ್ತೋತ್ರ, ಕೀರ್ತನೆ—ಮುಂತಾದ ವಾಕ್ಪ್ರಧಾನವಾದ ಸಾಧನಗಳಲ್ಲಿಯೂ ಮನಸ್ಸನ್ನು ಇಟ್ಟುಕೊಂಡು ಮಾಡಿದಾಗಲೇ ಅವು ನಿಜವಾದ ಸಾಧನೆಗಳಾಗುವವು. ಹೀಗಿರುವಲ್ಲಿ ಮನಃಪ್ರಧಾನವಾದ ಉಪಾಸನೆಗೆ ಮನಸ್ಸು ಬೇಕೇಬೇಕೆಂಬುದನ್ನು ಹೇಳಬೇಕಾದದ್ದೇನಿದೆ !

ಈ ವಿಧ ಮನಃಪ್ರಧಾನವಾದ ಉಪಾಸನೆಯನ್ನು ವಿಚಾರಕ್ಕೆ ತೆಗೆದುಕೊಂಡಿರುತ್ತೇನೆ. ಇದನ್ನು ವಿಷ್ಣುಪುರಾಣ, ಭಾಗವತ—ಮುಂತಾದ ಪುರಾಣಗಳಲ್ಲಿಯೂ ಶಾಂಡಿಲ್ಯಸಂಹಿತೆಯೇ ಮುಂತಾದ ತಂತ್ರಗ್ರಂಥಗಳಲ್ಲಿಯೂ ವಿಸ್ತರಿಸಿರುತ್ತದೆ. ಭಗವಂತನ ಮಾನಸಪೂಜೆಯನ್ನು ಮಾಡುವಾಗ—ನಮಗೆ ಅತ್ಯಂತ ಪ್ರಿಯರಾದವರು ಅಪರೂಪವಾಗಿ ಬಂದರೆ ಅವರನ್ನು ಆದರಿಸುವಾಗ ಮೈಮೇಲಿ ಸ್ಮೃತಿಕೂಡ ಇಲ್ಲದೆ ಅವರ ಸತ್ಕಾರದಲ್ಲಿಯೇ ನಾವು ನಿರತರಾಗಿರುವೆವೆಂಬುದು ನಮ್ಮೆಲ್ಲರ ಅನುಭವದಲ್ಲಿಯೂ ಇದೆಯಲ್ಲವೆ? ಭಗವಂತನ ಅರ್ಚನೆಯಲ್ಲಿಯೂ ಹಾಗೆಯೇ ನಮ್ಮ ಮನಸ್ಸು ಭಗವನ್ಮಯವಾಗಿಬಿಟ್ಟಿರಬೇಕು. ಶ್ರೀಕೃಷ್ಣನು ಹಸ್ತಿನಾವತಿಗೆ ರಾಜದೂತನಾಗಿ ಬಂದಾಗ ದುರ್ಯೋಧನನು ಅವನನ್ನು ಹೇಗಾದರೂ ಮಾಡಿ ತನ್ನ ವಶಕ್ಕೆ ತಂದುಕೊಳ್ಳಬೇಕೆಂದು ಎಷ್ಟೋ ರಾಜೋಪಚಾರಗಳನ್ನು ದಾರಿಯುದ್ದಕ್ಕೂ ಏರ್ಪಡಿಸಿದ್ದನು ; ಹಾಗಿದ್ದರೂ ಆ ಭಗವಂತನು ಆ ದಾರಿಯನ್ನು ಬಿಟ್ಟೇಬಿಟ್ಟು ಬಡವನಾದ ವಿದುರನ ಮನೆಗೆ ಬಂದನಂತೆ. ವಿದುರನು ತಾನು ಮಾಡುವ ಉಪಚಾರದಲ್ಲಿ ನಿರತನಾಗಿಬಿಟ್ಟಿದ್ದರಿಂದ ಬಾಳೆಯ ಹಣ್ಣಿನ ಸಿಪ್ಪೆಯನ್ನೇ ಶ್ರೀಕೃಷ್ಣನಿಗೆ ಕೊಡುತ್ತಾ ಹಣ್ಣನ್ನು ಅತ್ತ ಎಸೆಯುತ್ತಿದ್ದನೆಂದು ಕೆಲವರು ಹೇಳಿರುತ್ತಾರೆ. ಪೂರ್ವಾಶ್ರಮದಲ್ಲಿ ಒಬ್ಬ ಮಹಾತ್ಮರು ನಮ್ಮ ಮನೆಗೆ ಬರುತ್ತೇನೆಂದು ಹೇಳಿ, ಆ ದಿನವೇ ರೈಲಿಗೆ ಹೋಗುವದೆಂದು ಗೊತ್ತುಮಾಡಿಕೊಂಡಿದ್ದರು. ಕಾಲ ವಿಲಂಬವಾಗಬಾರದೆಂದು ನಾನು ವೇಗವಾಗಿ ಪೇಟೆಯುದ್ದಕ್ಕೂ ಓಡಿಬಂದು ಮನೆಯ ಬಾಗಿಲಲ್ಲಿ ಅವರನ್ನು ಪಾದಪ್ರಕ್ಷಾಲನಕ್ಕಾಗಿ ನಿರೀಕ್ಷಿಸುತ್ತಿದ್ದಾಗ ನನ್ನ ಮನಸ್ಸಿನ ಗಲಿಬಿಲಿಯನ್ನು ಕಂಡು ಅವರು "ಚಿಂತೆಯಿಲ್ಲ, ರೈಲಿಗೆ ನಾಳೆ ಹೊರಡೋಣ ; ನೀವು ಸಾವಕಾಶವಾಗಿ ಓಡಾಡಿರಿ !" ಎಂದು ಸಮಾಧಾನಪಡಿಸಿದ್ದು ಈಗಲೂ ನೆನಪಿಗೆ ಬರುತ್ತಿದೆ. ಭಗವಂತನ ಮಾನಸಾರ್ಚನೆಯನ್ನು ಮಾಡುವಾಗ ಆತನು ನಮ್ಮಲ್ಲಿಗೆ ತಾನಾಗಿ

ಬಂದು ಸನ್ನಿಹಿತನಾಗಿದ್ದಾನೆಂದೂ ನಮ್ಮ ಸೇವೆಯನ್ನು ಆದರದಿಂದ ಸ್ವೀಕರಿಸು ತ್ತಿದ್ದಾನೆಂದೂ ಭಾವಿಸಿ ನಾವು ದೊಡ್ಡವರಿಗೆ ಮಾಡುವ ಅರ್ಘ್ಯಪಾದ್ಯಸ್ನಾನ ವಸ್ತ್ರಗನ್ಧಪುಷ್ಪಫಲಾದಿಗಳನ್ನು ಹೇಗೆ ಆದರದಿಂದ ಸಮರ್ಪಿಸುವೆವೋ ಹಾಗೆ ಯೇ ಮಾಡಬೇಕು.

ಭಗವಂತನು ಸ್ವತಃ ನಿರಾಕಾರನೂ ನಿರ್ಗುಣನೂ ಆಗಿದ್ದರೂ ಭಕ್ತರಿಗಾಗಿ ಬೇರೆಬೇರೆಯ ಆಕಾರಗಳನ್ನು ಧರಿಸಿಬಂದು ತನ್ನ ಕಲ್ಯಾಣಗುಣಗಳನ್ನು ಪ್ರಕಟ ಮಾಡಿ ಲೋಕಕ್ಕೆ ಅನುಗ್ರಹಮಾಡುತ್ತಿರುತ್ತಾನೆ. ಈ ವಿಷಯವನ್ನು ಶ್ರೀ ಶಂಕರಭಗವತ್ಪಾದರವರು ತಮ್ಮ ಸೂತ್ರಭಾಷ್ಯದಲ್ಲಿ ಹೀಗೆಂದು ವಿವರಿಸಿರುತ್ತಾರೆ:

(೧) 'ಸ್ಯಾತ್ ಪರಮೇಶ್ವರಸ್ಯಾಪಿ ಇಚ್ಛಾವಶಾತ್ ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಮ್ । 'ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ । ಸರ್ವಭೂತ ಗುಣೈರ್ಯುಕ್ತಂ ನೈವಂ ಮಾಂ ಜ್ಞಾತುಮರ್ಹಸಿ' ಇತಿ ಸ್ಮರಣಾತ್। ಅಪಿ ಚ ಯತ್ರ ತು ನಿರಸ್ತಸರ್ವವಿಶೇಷಂ ಪಾರಮೇಶ್ವರಂ ರೂಪಮ್ ಉಪದಿಶ್ಯತೇ, ಭವತಿ ತತ್ರ ಶಾಸ್ತ್ರಮ್ 'ಅಶಬ್ದಮ-ಸ್ಪರ್ಶಮರೂಪಮವ್ಯಯಮ್' ಇತ್ಯಾದಿ; ಸರ್ವಕಾರಣತ್ವಾತ್ತು ವಿಕಾರಧರ್ಮೈರಪಿ ಕೈಶ್ಚಿದ್ ವಿಶಿಷ್ಟಃ ಪರಮೇಶ್ವರ ಉಪಾಸ್ಯ-ತ್ವೇನ ನಿರ್ದಿಶ್ಯತೇ 'ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವರಸಃ' ಇತ್ಯಾದಿನಾ । ತಥಾ ಹಿರಣ್ಯಶ್ಮಶ್ರುತ್ವಾದಿನಿರ್ದೇ-ಶೋಽಪಿ ಭವಿಷ್ಯತಿ ॥" ಸೂ. ಭಾ. ೧-೧-೨೦, ಪು. ೩೫

ಇದರ ಅಭಿಪ್ರಾಯವೇನೆಂದರೆ : ಪರಮೇಶ್ವರನಿಗೂ ಅವನ ಇಚ್ಛೆಯಂತೆ ಮಾಯಾಮಯವಾದ ರೂಪವು ಸಾಧಕರ ಅನುಗ್ರಹಕ್ಕಾಗಿ ಇರಬಹುದು. 'ಎಲೈ ನಾರದನೆ, ನನ್ನನ್ನು ಈ ರೂಪದಿಂದ ಕಾಣುತ್ತಿರುವೆಯಷ್ಟೆ? ಇದು ನಾನು ಸೃಷ್ಟಿಸಿರುವ ಮಾಯೆಯು; ನಾನು ಸರ್ವಭೂತಗಳ ಗುಣಗಳಿಂದ ಕೂಡಿ ಈ ಆಕಾರದಿಂದಲೇ ಕೂಡಿರುವೆನೆಂದೇ ಭಾವಿಸಿಕೊಳ್ಳದಿರು' ಎಂದು (ಶ್ರೀಮನ್ನಾರಾ ಯಣನು ಹೇಳಿದನೆಂದು ಭಾರತ)ಸ್ಮೃತಿಯಿದೆ. ಇದಲ್ಲದೆ ಯಾವ ವಿಶೇಷವೂ ಇಲ್ಲದ ಪರಮೇಶ್ವರನ ರೂಪವನ್ನು ಎಲ್ಲಿ ಉಪದೇಶಮಾಡಬೇಕಾಗಿದೆಯೋ ಅಲ್ಲಿ 'ಶಬ್ದವಿಲ್ಲದ್ದು, ಸ್ಪರ್ಶವಿಲ್ಲದ್ದು, ರೂಪವಿಲ್ಲದ್ದು, ಅವ್ಯಯವಾದದ್ದು' ಎಂದು ಮುಂತಾಗಿ ಶಾಸ್ತ್ರವು ಹೇಳುತ್ತದೆ; ಆದರೆ ಪರಮೇಶ್ವರನು ಎಲ್ಲಕ್ಕೂ ಕಾರಣ ನಾಗಿರುವದರಿಂದ ಕಾರ್ಯಪ್ರಪಂಚದ ಕೆಲವು ಧರ್ಮಗಳಿಂದಲೂ ಕೂಡಿರುವ ನೆಂದು ಉಪಾಸನೆಗಾಗಿ 'ಅವನು ಸರ್ವಕರ್ಮಗಳುಳ್ಳವನು, ಸರ್ವಕಾಮಗಳು

ಸ್ಪರ್ಶನು, ಸರ್ವಗಂಧಗಳುಳ್ಳವನು, ಸರ್ವರಸಗಳುಳ್ಳವನು' ಎಂದು ಮುಂತಾಗಿ ಶಾಸ್ತ್ರದಲ್ಲಿ ನಿರ್ದೇಶಮಾಡಿರುತ್ತದೆ.

ಈ ರೀತಿಯಿಂದ ನೋಡಿದರೆ ಭಗವಂತನು ನಿರಾಕಾರನಾಗಿರುವಂತೆ ವ್ಯವಹಾರದಲ್ಲಿ ಸಾಕಾರನಾಗಿಯೂ ಇರುತ್ತಾನೆ; ನಿರ್ಗುಣನಾಗಿರುವಂತೆ ಸಗುಣನೂ ಆಗಿರುತ್ತಾನೆ. ಸಾಕಾರವಸ್ತುಗಳನ್ನೂ ಸಗುಣವಸ್ತುಗಳನ್ನೂ ನೋಡಿ ನೋಡಿ ಅಭ್ಯಾಸವಾಗಿರುವ ನಮ್ಮ ಮನಸ್ಸಿಗೆ ಭಗವಂತನ ಆಕಾರವನ್ನೂ ಗುಣಗಳನ್ನೂ ಉಪಾಸನೆಮಾಡುವುದೇ ಸುಲಭವಾಗಿರುತ್ತದೆ, ಸಪ್ರಯೋಜನವೂ ಆಗಿರುತ್ತದೆ.

ಭಾಗವತಪುರಾಣದಲ್ಲಿ ಶ್ರೀಕೃಷ್ಣಭಗವಂತನು ಉದ್ಧವನನ್ನು ಕುರಿತು ಧ್ಯಾನಸಾಧನೆಯ ಕ್ರಮವನ್ನು ವಿವರಿಸಿ ಹೇಳುತ್ತಾ ಹೀಗೆಂದಿರುತ್ತಾನೆ: 'ಸಮಕಾಯಶಿರೋಗ್ರೀವನಾಗಿ ಸಮವಾದ ಸುಖಾಸನದಲ್ಲಿ ಕುಳಿತು ಕೈಗಳನ್ನು ತೊಡೆಯಮೇಲೆ ಇಟ್ಟುಕೊಂಡು ತನ್ನ ನಾಸಾಗ್ರವನ್ನೇ ನೋಡುತ್ತಾ ಪ್ರಾಣಾಯಾಮವನ್ನು ಮಾಡಿ ತನ್ನೊಳಗಿರುವ ಹೃತ್ಪುಂಡರೀಕವು ಅಧೋಮುಖವಾಗಿರುವುದನ್ನು ಅಷ್ಟದಳಗಳಿಂದ ಕರ್ಣಿಕೆಯಸಹಿತ ಮೇಲಕ್ಕೆತ್ತಿ ಕರ್ಣಿಕೆಯಲ್ಲಿ ಸೂರ್ಯಮಂಡಲ, ಸೋಮಮಂಡಲ, ಅಗ್ನಿಮಂಡಲಗಳನ್ನು ನ್ಯಾಸಮಾಡಿಕೊಳ್ಳಬೇಕು. ಆ ಅಗ್ನಿಯ ನಡುವೆ ನನ್ನ ಧ್ಯಾನಮಂಗಳವಾದ ರೂಪವನ್ನು ಸ್ಮರಿಸಬೇಕು. ಪ್ರಶಾಂತವಾಗಿ ಸುಮುಖವಾಗಿರುವ ನನ್ನ ದೀರ್ಘವಾದ ಸುಂದರವಾದ ಕತ್ತು, ಉತ್ತಮವಾದ ಕೆನ್ನೆ, ಶುಭ್ರವಾದ ಮಸುನಗೆ, ಸ್ವರ್ಣಾಂಬರವನ್ನುಟ್ಟು ಮೇಘಶ್ಯಾಮನಾಗಿ ಲಕ್ಷ್ಮೀನಿಕೇತನನಾದ ನನ್ನ ರೂಪವನ್ನು ಸ್ಮರಿಸಬೇಕು. ಶಂಖಚಕ್ರಗದಾಪದ್ಮಗಳನ್ನೂ ವನಮಾಲೆಯನ್ನೂ ಧರಿಸಿರುವಂತೆ ಭಾವನೆಮಾಡಬೇಕು. ಕಾಲುಗೆಜ್ಜೆಗಳುಳ್ಳ, ಹೊಳೆಯುವ ಪಾದಗಳು, ಕೌಸ್ತುಭದ ಕಾಂತಿ, ಪ್ರಕಾಶಮಯವಾದ ಕಿರೀಟ, ಕಡಗ, ಉಡಿದಾರ, ತೋಳುಬಳೆ—ಇವುಗಳಿಂದ ಕೂಡಿರುವ ಸರ್ವಾಂಗಸುಂದರವಾದ ಸುಪ್ರಸನ್ನವಾದ ನನ್ನ ಸುಕುಮಾರರೂಪವನ್ನು ಧ್ಯಾನಿಸಬೇಕು. ಇಂದ್ರಿಯಗಳನ್ನು ಇಂದ್ರಿಯಾರ್ಥಗಳಿಂದ ಹಿಂದಕ್ಕೆ ಜಗ್ಗಿ ಮನಸ್ಸಿನಲ್ಲಿಟ್ಟುಕೊಂಡು, ಆ ಮನಸ್ಸನ್ನು ಬುದ್ಧಿಯ ಸಹಾಯದಿಂದ ನನ್ನಲ್ಲಿಯೇ ನೆಲೆನಿಲ್ಲಿಸಿಕೊಳ್ಳಬೇಕು. ಮಿಕ್ಕ ಯಾವ ಅವಯವವನ್ನೂ ನೋಡದೆ ಮುಖ್ಯವಾಗಿ ಸುಸ್ಮಿತವಾದ ನನ್ನ ಮುಖವನ್ನೇ ಭಾವಿಸಬೇಕು. ಅಲ್ಲಿ ನೆಲೆನಿಂತ ಚಿತ್ತವನ್ನು ಹಿಂದಕ್ಕೆಳೆದುಕೊಂಡು ಆಕಾಶದಲ್ಲಿ ಧಾರಣೆ ಮಾಡಬೇಕು. ಆಮೇಲೆ ಅದನ್ನು ಬಿಟ್ಟು ನನ್ನಲ್ಲಿಯೇ ನಿಲ್ಲಿಸಿಕೊಂಡು ಮತ್ತೇನನ್ನೂ ಚಿಂತಿಸದೆ ಇರಬೇಕು. ಹೀಗೆ ಮನಸ್ಸನ್ನು ಸಮಾಧಾನಗೊಳಿಸಿದ

ಸಾಧಕನು ನನ್ನನ್ನೇ ತನ್ನ ಆತ್ಮನಲ್ಲಿ ಕಂಡುಕೊಳ್ಳುತ್ತಾನೆ" (ಭಾಗ. ೧೧-೧೪-೩೬ ರಿಂದ ೪೫).

ಈಗ ವೇದಾಂತಿಗಳೆಂದು ಕರೆಸಿಕೊಳ್ಳುತ್ತಿರುವ ಕೆಲವರು ಸಗುಣಸಾಕಾರೋಪಾಸನೆಯನ್ನು ತಿರಸ್ಕರಿಸುತ್ತಾರೆ. ಆದರೆ ಈ ವಿಷಯದಲ್ಲಿ ಶ್ರುತಿಸ್ಮೃತಿಗಳನ್ನು ಕಡೆಗಣಿಸಿ ಅವರ ಮತಕ್ಕೆ ಗೌರವವನ್ನು ಕೊಡುವದು ಯುಕ್ತವಲ್ಲ. ಶ್ರೀಶಂಕರಾಚಾರ್ಯರವರು ಈ ವಿಷಯದಲ್ಲಿ ಯಾವ ಅಭಿಪ್ರಾಯವನ್ನು ಕೊಟ್ಟಿರುತ್ತಾರೆಂಬುದನ್ನು ಆಗಲೆ ಅವರ ವಾಕ್ಯಗಳಿಂದಲೇ ಉದಾಹರಿಸಿರುತ್ತೇನೆ. ಆ ಆಚಾರ್ಯವರೇಣ್ಯರು ತಮ್ಮ ಗೀತಾಭಾಷ್ಯದ ಪ್ರಾರಂಭದಲ್ಲಿ ಬರೆದಿರುವದೇನೆಂದರೆ:-

> ಸ ಚ ಭಗವಾನ್ ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜೋಭಿಃ ಸದಾ ಸಂಪನ್ನಃ ತ್ರಿಗುಣಾತ್ಮಿಕಾಂ ವೈಷ್ಣವೀಂ ಸ್ವಾಂ ಮಾಯಾಂ ಮೂಲಪ್ರಕೃತಿಂ ವಶೀಕೃತ್ಯ ಅಜೋಽವ್ಯಯೋ ಭೂತಾನಾಮೀಶ್ವರೋ ನಿತ್ಯಶುದ್ಧಬುದ್ಧಮುಕ್ತಸ್ವಭಾವೋಽಪಿ ಸನ್ ಸ್ವಮಾಯಯಾ ದೇಹವಾನಿವ ಜಾತ ಇವ ಚ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ ॥

"ಆ ಭಗವಂತನು ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು-ಎಂಬ ಗುಣಗಳಿಂದ ಯಾವಾಗಲೂ ಕೂಡಿರುತ್ತಿದ್ದರೂ ತ್ರಿಗುಣಾತ್ಮಕವಾದ ತನ್ನ ಮಾಯೆಯಾದ ಮೂಲಪ್ರಕೃತಿಯನ್ನು ವಶಕ್ಕೆ ತೆಗೆದುಕೊಂಡು, ತಾನು ಸ್ವರೂಪದಿಂದ ಅಜನೂ ಅವ್ಯಯನೂ ಭೂತಗಳ ಈಶ್ವರನೂ ನಿತ್ಯಶುದ್ಧಬುದ್ಧಮುಕ್ತಸ್ವಭಾವದವನೂ ಆಗಿದ್ದರೂ ದೇಹವುಳ್ಳವನಂತೆಯೂ ಹುಟ್ಟಿದವನಂತೆಯೂ ಲೋಕಾನುಗ್ರಹವನ್ನು ಮಾಡುತ್ತಿರುವವನಾಗಿ ಕಾಣಿಸಿಕೊಂಡಿರುತ್ತಾನೆ."

ಇದನ್ನು ಮನಸ್ಸಿಗೆ ಹತ್ತಿಸಿಕೊಳ್ಳಲಾರದವರು 'ಶಂಕರರಿಗೆ ಬುದ್ಧಿಯೇ ಪ್ರಧಾನ, ಭಕ್ತಿಗೆ ಅವರಲ್ಲಿ ಬೆಲೆಯಿಲ್ಲ' ಎನ್ನುತ್ತಿರುವರು! ಇದಿರಲಿ. ಹೀಗೆ ನಿರ್ಗುಣನಾಗಿದ್ದರೂ ಸಗುಣನಾಗಿನಿರಾಕಾರನಾಗಿದ್ದರೂ ಸಾಕಾರನಾಗಿ ಲೋಕಕ್ಕೆ ಅನುಗ್ರಹವನ್ನು ಮಾಡುತ್ತಿರುವ ಭಗವಂತನನ್ನು ಉಪಾಸನೆಮಾಡದೆ ಸಗುಣಸಾಕಾರೋಪಾಸನೆಗಳನ್ನು ನಿಂದಿಸಿದರೆ ಶಾಸ್ತ್ರನಿಂದೆಯನ್ನೂ ಗುರುದ್ರೋಹವನ್ನೂ ಮಾಡಿದಂತೆ ಆಗುತ್ತದೆ, ಸ್ವಾರ್ಥದಿಂದಲೂ ಚ್ಯುತರಾಗುವೆವು. ಶ್ರೀಭಾಗವತದಲ್ಲಿ :

> ಆತ್ಮಾರಾಮಾಶ್ಚ ಮುನಯೋ ನಿರ್ಗ್ರನ್ಥಾ ಅಪ್ಯುರುಕ್ರಮೇ ।
> ಕುರ್ವನ್ತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿಃ ॥
>
> ಭಾಗ. ೧-೭-೧೦

ಎಂದು ಶುಕರು ಹೇಳುತ್ತಾರೆ. ಬಾಹ್ಯದೃಷ್ಟಿಯನ್ನು ತೊರೆದು ಸದಾ ಆತ್ಮಾರಾಮರಾಗಿ, ಯಾವ ಹೃದಯಗ್ರಂಥಿಯೂ ಇಲ್ಲದವರಾದರೂ ಮುನಿಗಳು ಮೂರು ಲೋಕಗಳನ್ನು ವ್ಯಾಪಿಸಿಕೊಂಡಿರುವ ಭಗವಂತನಲ್ಲಿ ಯಾವ ಹೇತುವನ್ನೂ ಬಯಸದೆ ಭಕ್ತಿಯನ್ನು ಮಾಡುತ್ತಿರುವರು. ಏಕೆಂದರೆ ಶ್ರೀಹರಿಯ ಗುಣಗಳು ಅಂಥವು! – ಎಂದು ಆ ವಾಕ್ಯಕ್ಕೆ ಅರ್ಥ. ಆತ್ಮಾರಾಮರಾದ ಮಹಾಮುನಿಯಾದ ಶುಕಮುನಿ ಕೂಡ ಭಗವಂತನ ಗುಣಗಳನ್ನು ಕೊಂಡಾಡುತ್ತಾ ನಲಿದಾಡುತ್ತಿರುವರು. ಹೀಗಿರುವಾಗ ತ್ರಿಗುಣಗಳ ಕೋಟಲೆಗೆ ಸಿಕ್ಕಿರುವ ಸಾಮಾನ್ಯರಾದ ನಾವು ಭಕ್ತಿಯನ್ನು ತಿರಸ್ಕರಿಸಿದರೆ ನಮಗೆ ನಾವೇ ಕೇಡುಬಗೆದು ಕೊಂಡಂತೆ ಆಗದೆ ?

ಶ್ರೀರಾಮಭಕ್ತನಾದ ಕಬೀರನ ವಿಷಯಕ್ಕೆ ಒಂದು ಕಥೆಯುಂಟು : ಶ್ರೀರಾಮಚಂದ್ರನ ಸಾಕಾರರೂಪವನ್ನು ಸಾಕ್ಷಾತ್ಕಾರಪಡಿಸಿಕೊಂಡು ಅವನೊಡನೆ ಸಂಭಾಷಣಾನಂದವನ್ನು ಅನುಭವಿಸುತ್ತಿರುವಾಗ ಒಮ್ಮೆ ಅವನು 'ರಾಮಚಂದ್ರ, ನಾನೂ ನೀನೂ ಕಣ್ಣಾಮುಚ್ಚಾಲೆ ಆಡೋಣವೆ?' ಎಂದು ಕೇಳಿದನು. ಶ್ರೀರಾಮನು 'ಅದು ಏತಕ್ಕೆ ? ಹೀಗೆಯೇ ಸಂತೋಷದಿಂದ ಸಲ್ಲಾಪಮಾಡುತ್ತಿರೋಣ' ಎಂದನು. ಆದರೆ ಕಬೀರನ ಒತ್ತಾಯದಿಂದ ಆ ಆಟಕ್ಕೆ ಭಗವಂತನು ಒಪ್ಪಿದನು. ಕಬೀರನು ತನ್ನ ಯೋಗಸಿದ್ಧಿಯಿಂದ ಒಂದು ಭ್ರಮರವಾಗಿ ಶ್ರೀರಾಮನ ಎದುರಲ್ಲಿದ್ದ ಒಂದು ಹೂವಿನೊಳಕ್ಕೆ ಹೊಕ್ಕು ಅವಿತುಕೊಂಡನು. ಆಗ ಶ್ರೀರಾಮನು ಅವನನ್ನು ಹುಡುಕಿದವನಂತೆ ಸ್ವಲ್ಪಹೊತ್ತು ನಟಿಸಿ 'ಎಲಾ ಕಬೀರ, ಇಲ್ಲಿದ್ದೀಯಾ?' ಎಂದು ಅವನನ್ನು ಹೂವಿನಿಂದ ಈಚೆಗೆ ತೆಗೆದನು. 'ಇನ್ನು ನೀನು ಅವಿತುಕೋ ! ನಾನು ಹುಡುಕುತ್ತೇನೆ' ಎಂದು ಕಬೀರನು ಹೇಳಲು 'ಬೇಡ, ಬೇಡ ' ನಿನಗೆ ನನ್ನನ್ನು ಹುಡುಕುವುದು ಕಷ್ಟವಾದೀತು !' ಎಂದು ಶ್ರೀರಾಮನು ಹೇಳಿದರೂ ಕೇಳದೆ 'ಆಟವು ಪೂರ್ತಿಯಾಗುವುದಕ್ಕಾಗಿ ನೀನು ಅವಿತುಕೊಳ್ಳಬೇಕು !' ಎಂದು ಕಬೀರನು ಆಗ್ರಹಪೂರ್ವಕವಾಗಿ ಕೇಳಿಕೊಂಡದ್ದರಿಂದ 'ಆಗಲಿ !' ಎಂದು ಶ್ರೀರಾಮಚಂದ್ರನು ಸರ್ವರಿಗೂ ಆತ್ಮನಾಗಿರುವ ನಿರ್ಗುಣರೂಪದಿಂದ ಕಬೀರನಲ್ಲಿ ಒಂದಾಗಿಬಿಟ್ಟನು. ಕಬೀರನು ಎಲ್ಲೆಲ್ಲಿ ಎಷ್ಟೆಷ್ಟು ಹುಡುಕಿದರೂ ರಾಮನು ಸಿಕ್ಕದೆ ಇರಲು, ಅವನು ಅಳುವುದಕ್ಕೆ ಮೊದಲುಮಾಡಿಬಿಟ್ಟನು. 'ನಾನು ಮೊದಲೇ ಹೇಳಿರಲಿಲ್ಲವೆ, ನನ್ನ ನಿಜರೂಪದಿಂದ ನನ್ನನ್ನು ಹುಡುಕಿ ಕಂಡುಹಿಡಿಯುವುದು ಕಷ್ಟವೆಂದು?' ಎಂದು ಶ್ರೀರಾಮನು ಪ್ರತ್ಯಕ್ಷವಾಗಿ ತೋರಿಕೊಂಡು ಅವನನ್ನು ಸಮಾಧಾನಗೊಳಿಸಿದನಂತೆ !

ಇದರಿಂದ ನಾವು ತಿಳಿದುಕೊಳ್ಳಬೇಕಾದದ್ದು ಏನೆಂದರೆ, ನಮ್ಮ ಮನಸ್ಸು ಗುಣಮಯವಾಗಿ, ನಮ್ಮ ಇಂದ್ರಿಯಗಳು ತೋರಿಸುವ ಆಕಾರಗಳತ್ತಲೇ

ತಿರುಗುತ್ತಿರುವವರಿಗೆ ನಮಗೆ ಸಗುಣಸಾಕಾರೋಪಾಸನೆಯೇ ಸುಲಭಸಾಧ್ಯ. ಅವುಗಳ ಮೂಲಕವೇ ನಾವು ಪರಮಾತ್ಮನ ಪರಮಾರ್ಥರೂಪವನ್ನು ಕಾಣುವ ಹಂತಕ್ಕೆ ಏರಬಹುದಾಗುವದು.

## ೨೪. ನಿರಾಕಾರನಿರ್ಗುಣೋಪಾಸನೆ

( 22—8—69 )

ಭಗವಂತನ ಆರಾಧನೆಯಿಂದ ಇಹಪರಸುಖಗಳು ಪ್ರಾಪ್ತವಾಗುತ್ತವೆ : ಅತೀಂದ್ರಿಯವಾದ ಫಲಗಳಿಗೂ ಅವುಗಳ ಸಾಧನಗಳಿಗೂ ಯಾವ ಸಂಬಂಧವಿದೆ-ಎಂಬುದನ್ನು ಶಾಸ್ತ್ರಮಾತ್ರದಿಂದ ಅರಿತುಕೊಳ್ಳಬೇಕು ; ಶ್ರದ್ಧೆಯಿಂದ ಉಪಾಸನೆ ಮಾಡಿದರೆ ಫಲವಾಗುತ್ತದೆ. ಅವುಗಳ ಫಲಗಳು ಪರೋಕ್ಷವಾಗಿದ್ದರೆ ಹಾಗೆ ಫಲಪ್ರಾಪ್ತಿಯಾಗುವದೆಂಬುದನ್ನು ನಂಬಬೇಕಾಗುತ್ತದೆ. ಶ್ರುತಿಸ್ಮೃತಿ ಪುರಾಣಗಳಲ್ಲಿ ಹೇಳಿರುವ ಸಾಧನಗಳಿಗೆ ಪ್ರತ್ಯಕ್ಷಫಲಗಳೂ ಆಗುವದುಂಟು ; ಆದರೆ ಅವನ್ನೆಲ್ಲ ಮತ್ತೊಬ್ಬರಿಗೆ ತೋರಿಸುವದಕ್ಕೆ ಆಗುವದಿಲ್ಲ. ಲೋಕದಲ್ಲಿ ಕೂಡ ಒಬ್ಬನಿಗೆ ಮತ್ತೊಬ್ಬನು ಕೆನ್ನೆಗೆ ಒಂದೇಟನ್ನು ಹಾಕಿದರೆ ಕೆನ್ನೆ ಕೆಂಪಗೆ ಆದದ್ದೂ ಊದಿಕೊಂಡದ್ದೂ ಕಾಣಿಸುತ್ತದೆ ; ಆದರೆ ಆವನಿಗೆ ಆದ ನೋವನ್ನು ಅವನೇ ಅನುಭವಿಸಬೇಕೇ ಹೊರತು ಇನ್ನೊಬ್ಬರಿಗೆ ತೋರಿಸುವದಕ್ಕೆ ಬರುವದಿಲ್ಲ.

ಬೇರೆಬೇರೆಯ ವರ್ಣಾಶ್ರಮದವರು ಅವರವರ ವರ್ಣಕ್ಕೂ ಆಶ್ರಮಕ್ಕೂ ವಿಹಿತವಾಗಿರುವ ಕರ್ಮದಿಂದ ಪರಮೇಶ್ವರನನ್ನು ಆರಾಧಿಸಿದರೆ ಸಂಸಿದ್ಧಿಯುಂಟಾಗುತ್ತದೆ. ಆ ಸಂಸಿದ್ಧಿಯ ಸ್ವರೂಪವನ್ನಾಗಲಿ, ಅದರಿಂದ ಪರಮ ಪುರುಷಾರ್ಥವು ದೊರಕುವ ಪ್ರಕಾರವನ್ನಾಗಲಿ ಪ್ರತ್ಯಕ್ಷಪ್ರಧಾನರಾದವರಿಗೆ ತೋರಿಸುವದಕ್ಕೆ ಆಗುವದಿಲ್ಲ. ಇದಲ್ಲದೆ ಎಲ್ಲರಿಗೂ ಒಂದೇಬಗೆಯ ಸಾಧನವೇ ಇರಬೇಕೆಂದು ನಿರ್ಬಂಧಿಸುವದಕ್ಕೂ ಆಗುವದಿಲ್ಲ. ಸ್ಥೂಲವಾದ ಅರ್ಚನಾದಿಗಳನ್ನು ಮಾಡುವವರೂ ಎಲ್ಲರೂ ಒಂದೇ ಕಡೆಯಲ್ಲಿ ಒಂದೇ ವಿಧವಾದ ಆರಾಧನೆಯನ್ನು ಮಾಡುವದಕ್ಕೆ ಆಗುವದಿಲ್ಲ. ಈಗಿನ ಕಾಲಕ್ಕೆ "ದೇವಸ್ಥಾನಗಳಿಗೆ ಎಲ್ಲರಿಗೂ ಪ್ರವೇಶದ ಹಕ್ಕು ಇರಬೇಕು"-ಎಂದು ಕಾನೂನುಮಾಡಿಸಿರುತ್ತಾರೆ ; ಅದಕ್ಕೆ ಮನುಷ್ಯರೆಲ್ಲರೂ ಸಮಾನರು ಎಂಬ ವಾದವನ್ನು ತರ್ಕದಿಂದ ಸ್ಥಾಪಿಸುವದಕ್ಕೂ ಅನೇಕರು ಸಿದ್ಧರಾಗಿರುತ್ತಾರೆ. ಕಾನೂನಿನ ಸಹಾಯವನ್ನು ಕೋರದೆ

ಒಂದೇ ಸಂಗಡದ ಜನರು ಒಂದೇ ದೇವಾಲಯದಲ್ಲಿ ದೇವರ ಆರಾಧನೆಗೆ ಸೇರುವದಕ್ಕೆ ಯಾವ ಅಡ್ಡಿಯೂ ಇಲ್ಲ: ಆದರೂ ಆದಾಗ ಸಂಗಡದವರೇ ಎಲ್ಲರೂ ಏಕ ಕಾಲದಲ್ಲಿ ಆರಾಧಿಸುವದಕ್ಕೆ ಆಗುವದೇನು ? ಇಲ್ಲ. ಜಪವನ್ನು ಮಾಡುವವರಿಗೆ ನಿಃಶಬ್ದವಾಗಿರುವ ಸ್ಥಳವು ಬೇಕು ; ಕೀರ್ತನೆಮಾಡುವವರು ಗದ್ದಲಿಸಿಲ್ಲದಂತೆ ಕೀರ್ತನೆಯನ್ನು ಮಾಡುವದಕ್ಕೆ ಆಗುವದೇಇಲ್ಲ. ಆದ್ದರಿಂದ ಕೀರ್ತನೆಯವರಿಗೆ ಒಂದುಕಾಲ, ಜಪಾದಿಗಳನ್ನು ಮಾಡುವವರಿಗೆ ಒಂದು ಕಾಲ-ಎಂದು ನಿಯಮ ವಾಗಬೇಕೇಬೇಕು. ಈ ನಿಯಮಕ್ಕೆ ಆರಾಧಕರು ಒಪ್ಪಿದಮೇಲಂತೂ ಅದೇ ಸ್ಥಳದಲ್ಲಿ ಅನೇಕರಿದ್ದರೂ ಏಕಕಾಲಕ್ಕೆ ಉಪಸ್ಥಾನವನ್ನು ಮಾಡುವದು ಆಗುವದೇಇಲ್ಲ.

ಇನ್ನೊಂದು ವಿಷಯ. ಅರ್ಚನೆ, ಮಾನಸಪೂಜೆ, ಕೀರ್ತನೆ, ಜಪ- ಇವೆಲ್ಲವೂ ಭಗವಂತನ ಸ್ಥೂಲರೂಪದ ಆರಾಧನೆಗೇ ಸಂಬಂಧಿಸಿದವಾದರೂ ಎಲ್ಲವೂ ಎಲ್ಲರಿಗೂ ಸುಲಭಸಾಧ್ಯವಾಗಿರುವದಿಲ್ಲ. ಮಾನಸಪೂಜೆಯನ್ನಾಗಲಿ ಜಪವನ್ನಾಗಲಿ ಮಾಡುವದಕ್ಕೆ ಹೊರಟರೆ ಕೆಲವರಿಗೆ ಸಾಧ್ಯವಾಗುವದೇಇಲ್ಲ. ಮಾನಸಪೂಜೆಯ ಕಾಲಕ್ಕೆ ಮನಸ್ಸು ವಿಕ್ಷೇಪವಾಗಿ ಎತ್ತೆತ್ತಲೋ ಹರಿದಾಡ ಬಹುದು ; ಜಪವನ್ನು ಮಾಡುವವರಿಗೆ ಅವರಲ್ಲಿಯೂ ಉಪಾಂಶು, ಅಥವಾ ಮಾನಸ-ಜಪವನ್ನು ಮಾಡುವದಕ್ಕೆ ಹೊರಟಾಗ ಕೆಲವರಿಗೆ ತೂಕಡಿಕೆ ಬಂದು ಬಿಡಬಹುದು. ಆದ್ದರಿಂದ ಅವರಿಗೆ ಬಾಹ್ಯಮೂರ್ತಿಯ ಪೂಜೆಯೋ, ಪ್ರದಕ್ಷಿಣ ನಮಸ್ಕಾರಾದಿಗಳೋ, ಪ್ರಯೋಜನಕರವಾಗಬಹುದು. ಇದೂ ಅಲ್ಲದೆ ಬಹು ಜನರು ಭಗವಂತನ ಅಭ್ಯರ್ಚನೆಮಾಡುವಾಗ ಒಂದೇ ವಿಧವಾದ ಮನಃಸ್ಥಿತಿ ಯುಳ್ಳವರು ಒಕ್ಕಡೆಗೆ ಸೇರಿದರೆ ಸಾತ್ತ್ವಿಕಭಾವನೆಯ ವಾತಾವರಣವು ಹರಡಿ ಕೊಂಡು ಸಾಧನಕ್ಕೆ ಪ್ರೋತ್ಸಾಹವು ದೊರಕುತ್ತದೆ.

ಹೀಗೆ ಅವರವರ ಮನಃಸ್ಥಿತಿಯ ಅಂತಸ್ತನ್ನು ಅನುಸರಿಸಿ ಬೇರೆಬೇರೆಯ ಪ್ರಕಾರದ ಆರಾಧನಾದಿಗಳು ಬೇಕಾಗುತ್ತವೆ. ಇದೇ ಅಧಿಕಾರಭೇದವೆಂಬುದು. ಶ್ರುತಿಸ್ಮೃತಿಪುರಾಣಗಳಲ್ಲಿ ಬೇರೆಬೇರೆಯ ಹಂತದ ಅಧಿಕಾರಿಗಳಿಗೆ ತಕ್ಕಂತೆ ಬೇರೆ ಬೇರೆಯ ಆರಾಧನಾಪ್ರಕಾರಗಳನ್ನು ವಿಧಿಸಿರುತ್ತದೆ. ಈ ಕಾರಣದಿಂದಲೇ ನಾನು ಶರೀರಪ್ರಧಾನವಾದ, ವಾಕ್ಪ್ರಧಾನವಾದ ಮತ್ತು ಮನಃಪ್ರಧಾನವಾದ ಬೇರೆ ಬೇರೆಯ ಪ್ರಕಾರದ ಸಾಧನಗಳನ್ನು ಕ್ರಮವರಿತು ಹೇಳಿರುತ್ತೇನೆ. ಕೊನೆಯಲ್ಲಿ ಸಗುಣಸಾಕಾರನಾದ ಪರಮೇಶ್ವರನ ಆರಾಧನೆಯನ್ನು ಹೇಳಿರುವದಕ್ಕೆ ಇದೇ ಕಾರಣ. ಸ್ಥೂಲವಾದ ಸಾಧನದಿಂದ ಪ್ರಾರಂಭಿಸಿ ಸೂಕ್ಷ್ಮಸೂಕ್ಷ್ಮತರಸಾಧನ ಗಳಿಗೆ ಕೈಹಾಕಬೇಕು. ಸಾಕಾರಸಗುಣಬ್ರಹ್ಮದ ಉಪಾಸನೆಯು ಗೃಹಸ್ಥರಿಗೆ ಲಭಿಸುವ ಸೂಕ್ಷ್ಮತಮವಾದ ಸಾಧನವು.

ಈ ದಿವಸ ನಿರ್ಗುಣಬ್ರಹ್ಮದ ಉಪಾಸನೆಯ ಪ್ರಕಾರವನ್ನು ಹೇಳುವದಕ್ಕೆ ಪ್ರಾರಂಭಿಸುವೆನು. ಇದು ಸಂನ್ಯಾಸಿಗಳಿಗೆ ವಿಹಿತವಾದದ್ದು. ಮುಮುಕ್ಷುಗಳಾದವರೂ ಕಾರಣಾಂತರದಿಂದ ಕರ್ಮಸಂನ್ಯಾಸವನ್ನು ಮಾಡದೆ ಇರುವವರೂ ಕೆಲವರು ಇರಬಹುದು. ಆದರೆ ಮುಕ್ತಾಲುವರೂ ಡುವೀಸಪಾಲಿಸ ಜನ ಗೃಹಸ್ಥರು ನಿರ್ಗುಣೋಪಾಸನೆಗೆ ಅಧಿಕಾರಿಗಳಾಗಿರುವದಿಲ್ಲ. ಈ ಮಾತನ್ನು ಕೇಳಿದ ಗೃಹಸ್ಥರು ಇಷ್ಟುಮಾತ್ರದಿಂದ ಮನಸ್ಸಿನಲ್ಲಿ ಅಸಮಾಧಾನವನ್ನು ಮಾಡಿಕೊಳ್ಳಬೇಕಾದದ್ದಿಲ್ಲ. ಸತ್ಯವು ಕಹಿಯಾದರೂ ಸತ್ಯವೇ ಅಷ್ಟೆ? ಯಾರು ತ್ರೈಗುಣ್ಯದ ಮನಸ್ಸಿನಿಂದ ಪ್ರಭಾವಿತರಾಗಿರುತ್ತಾರೋ, ಅವರಿಗೆ ನಿರ್ಗುಣವಾದ ಬ್ರಹ್ಮದ ಸ್ವರೂಪವು ಮನಸ್ಸಿಗೆ ಹತ್ತಲಾರದು. ಇನ್ನೊಂದು ಮಾತು. ಗೃಹಸ್ಥರಾಗಿದ್ದರೆ ನಿರ್ಗುಣೋಪಾಸನೆಗೆ ಅಧಿಕಾರವಿರುವದಿಲ್ಲ– ಎಂಬ ನಿಮಿತ್ತದಿಂದ ತುರೀಯಾಶ್ರಮವನ್ನು ಸ್ವೀಕರಿಸಿದರೆ ಅಷ್ಟುಮಾತ್ರದಿಂದಲೇ ನಿರ್ಗುಣೋಪಾಸನೆಗೆ ಅಧಿಕಾರವು ಬರಲಾರದು. ಭಿಕ್ಷಾವೃತ್ತಿಯಿಂದ ಸುಲಭವಾಗಿ ಜೀವನವಾಗಬಹುದೆಂಬ ಸೋಮಾರಿತನದ ಮನಸ್ಸಿನವನೂ, ಗೃಹಸ್ಥರು ತನಗೆ ಗೌರವವನ್ನು ಕೊಟ್ಟಾರೆಂಬ ಆಶೆಯಿಂದ ಕಾವಿಯನ್ನು ತೊಡುವ ಅಹಂಕಾರಿಯೂ ವೇಷಮಾತ್ರದಿಂದ ನಿಜವಾದ ಸಂನ್ಯಾಸಿಯೆನಿಸಲಾರನು. ಅಂಥ ರಾವಣಸಂನ್ಯಾಸಿಗಳು ಈಗಲೂ ಅಲ್ಲಲ್ಲಿ ಇರುತ್ತಾರೆ. ಸಂನ್ಯಾಸಕ್ಕೂ ವೈರಾಗ್ಯಕ್ಕೂ ನಿಕಟವಾದ ಸಂಬಂಧವಿದೆ. **"ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್"** (ಜಾ) "ಎಂದು ವೈರಾಗ್ಯವುಂಟಾಗುವದೋ ಆವನು ಯಾವ ಆಶ್ರಮದಲ್ಲಿಯೇ ಇರಲಿ, ಅಂದೇ ಪರಿವ್ರಾಜಕನಾಗಬೇಕು"–ಎಂದು ಶ್ರುತಿಯಿದೆ.

ಸಂನ್ಯಾಸಿಗಳಲ್ಲಿಯೂ ಎಲ್ಲರಿಗೂ ನೇರಾಗಿ ನಿರ್ಗುಣಜ್ಞಾನಕ್ಕೆ ಅಧಿಕಾರವಿರುವದಿಲ್ಲ. ಅಂಥವರು ನಿರ್ಗುಣೋಪಾಸನೆಯನ್ನು ಮಾಡಿ ಕಾಲಾಂತರದಲ್ಲಿ ಬ್ರಹ್ಮಲೋಕವನ್ನು ಪಡೆದು ಅಲ್ಲಿ ಅಧಿಕಾರವು ಲಭಿಸಿದರೆ ಜ್ಞಾನಪ್ರಾಪ್ತಿಯಾಗಿ ಮುಖ್ಯಮುಕ್ತಿಯನ್ನು ಪಡೆದುಕೊಳ್ಳಬಹುದು. ಕರ್ಮಕ್ಕೆ ಅಧಿಕಾರಿಗಳಲ್ಲದವರೂ ಮಧ್ಯಮಾಧಿಕಾರಿಗಳಾಗಿ ಉಪಾಸನೆಯನ್ನು ಮಾಡುತ್ತಿರುವವರೂ ಓಂಕಾರವನ್ನು ಉಪಾಸನೆಮಾಡುತ್ತಿರಬೇಕು. ಸಕಲವೇದಗಳನ್ನೂ ವ್ಯಾಹೃತಿಗಳಲ್ಲಿಯೂ ವ್ಯಾಹೃತಿಗಳನ್ನು ಓಂಕಾರದಲ್ಲಿಯೂ ಪ್ರವೇಶಮಾಡಿಕೊಂಡು ವೇದಸಾರವಾದ ಓಂಕಾರವನ್ನು ಜಪಿಸುತ್ತಾ ತನ್ನಿಷ್ಠನಾಗಿ ಉಪಾಸನೆಮಾಡುವವನಿಗೆ **ಬ್ರಹ್ಮಸಂಸ್ಥ**ನೆಂದು ಹೆಸರು. ಓಂಕಾರೋಪಾಸನೆಯನ್ನು ಮಾಡುವ ಸಂನ್ಯಾಸಿಗೆ ಕಾಲಾಂತರದಲ್ಲಿ ಬ್ರಹ್ಮಲೋಕಪ್ರಾಪ್ತಿಯೂ ಬ್ರಹ್ಮಸಾಯುಜ್ಯವೂ ದೊರಕುವದು. ಅದಕ್ಕೂ ಅನಧಿಕಾರಿಗಳಾದ ಸಂನ್ಯಾಸಿಗಳು ಓಂಕಾರಜಪವನ್ನು ನಿಯತಸಂಖ್ಯೆಯಿಂದ ತ್ರಿಕಾಲದಲ್ಲಿಯೂ ತಪ್ಪದೆ ಮಾಡುತ್ತಿರಬೇಕು. ಉತ್ತರದೇಶದಲ್ಲಿ

ಸಂನ್ಯಾಸಿಗಳಲ್ಲಿ ಪೂಜ್ಯಬುದ್ಧಿಯುಳ್ಳ ಆಸ್ತಿಕರು "ಭಂಡಾರ"ವೆಂಬ ಹೆಸರಿನಿಂದ ಭೂರಿಭೋಜನವನ್ನು ಮಾಡಿಸುತ್ತಾರೆ! ಇಂಥ ಕೇವಲಭೋಜನಪ್ರಿಯರಾಗಿ ಕಾವಿಯನ್ನುಟ್ಟವರು ವೇಷಸಂನ್ಯಾಸಿಗಳಾದಾರೇ ಹೊರತು ಎಂದಿಗೂ ನಿಜವಾದ ಸಂನ್ಯಾಸಿಗಳೆನಿಸರು.

ಗೀತೆಯ ಎಂಟನೆಯ ಅಧ್ಯಾಯದಲ್ಲಿ ನಿರ್ಗುಣಬ್ರಹ್ಮದ ಉಪಾಸನೆಯ ಪ್ರಕಾರವನ್ನು ವರ್ಣಿಸಿರುತ್ತದೆ. ನಿರ್ಗುಣಬ್ರಹ್ಮಕ್ಕೆ ಯಾವ ಧರ್ಮಗಳೂ ಇಲ್ಲದೆ ಇದ್ದರೂ ಅದು ನಿತ್ಯವಾಗಿ ಕೂಟಸ್ಥವಾಗಿರುವದರಿಂದ ಅದನ್ನು ಶ್ರುತಿಯಲ್ಲಿ "ಅಕ್ಷರ"ವೆಂದು ಕರೆದಿರುತ್ತದೆ. ಅಕ್ಷರವೆಂಬುದು ಪರಬ್ರಹ್ಮವೇ. ಮನುಷ್ಯರಲ್ಲಿ ಜೀವಭಾವದಿಂದ ಇರುತ್ತದೆಯಲ್ಲ, ಆ ಸ್ವಾಭಾವಿಕ ಆತ್ಮನಿಗೆ ಅಧ್ಯಾತ್ಮವೆಂದು ವೆಂದು ಹೆಸರು. ಸಾಧಕರು ಉಪಾಸನೆಯಿಂದ ಕಾಲಾಂತರದಲ್ಲಿ ತಲುಪುವ ಹಿರಣ್ಯಗರ್ಭನಿಗೆ ಅಧಿದೈವತಪುರುಷನೆಂದು ಹೆಸರು. ಅಧಿಕಾರಿಯಾದ ಸಂನ್ಯಾಸಿಯು ಯಾವಜ್ಜೀವವೂ ಪ್ರಣವವನ್ನು ಪ್ರತಿಮೆಯಂತೆ ಪ್ರತೀಕರೂಪವಾಗಿಯೋ ಅಥವಾ ಪರಮಾತ್ಮನ ವಾಚಕವಾಗಿಯೋ ಉಪಾಸನೆಮಾಡುತ್ತಿರುವನು. ಓಂಕಾರವಾಚ್ಯವಾದ ಬ್ರಹ್ಮವನ್ನು ನಿರಂತರವಾಗಿ ಆದರಸತ್ಕಾರಗಳಿಂದ ಉಪಾಸನೆಮಾಡುತ್ತಿದ್ದು ಮರಣಕಾಲದಲ್ಲಿ ಮನಸ್ಸನ್ನು ಹೃದಯದಲ್ಲಿಟ್ಟುಕೊಂಡು ಮೂರ್ಧಪ್ರದೇಶದಲ್ಲಿ ಪ್ರಾಣಧಾರಣೆಯನ್ನು ಮಾಡಿ ಓಂಕಾರವನ್ನು ಜಪಿಸುತ್ತಲೂ ತದ್ವಾಚ್ಯನಾದ ಬ್ರಹ್ಮವನ್ನು ಸ್ಮರಿಸುತ್ತಲೂ ದೇಹತ್ಯಾಗವನ್ನು ಮಾಡಿದವನು ಶುಕ್ಲಗತಿ ಎಂಬ ದೇವಯಾನಮಾರ್ಗದಿಂದ ಹೋಗಿ ಬ್ರಹ್ಮವನ್ನೇ ಸೇರುತ್ತಾನೆ; ಅವನು ಕರ್ಮಿಗಳಂತೆ ಮತ್ತೆ ಸಂಸಾರಕ್ಕೆ ತೆರಳುವದಿಲ್ಲ– ಎಂದು ಅಲ್ಲಿ ಹೇಳಿರುತ್ತದೆ.

ಅಧಿಕಾರಿಗಳಾದ ಸಂನ್ಯಾಸಿಗಳು ಓಂಕಾರಜಪ, ಓಂಕಾರವಾಚ್ಯವಾದ ಬ್ರಹ್ಮದ ಉಪಾಸನೆ–ಇವುಗಳಿಂದ ಬ್ರಹ್ಮಲೋಕವನ್ನು ಪಡೆಯುವರು. ಸುಮ್ಮನೆ ಓಂಕಾರವನ್ನು ಜಪಿಸುವವರಿಂದಾಗಲಿ ಕರ್ಮತ್ಯಾಗವನ್ನು ಮಾಡಿ ಬ್ರಹ್ಮೋಪಾಸನೆಯ ನೆಪದಿಂದ ಸಂನ್ಯಾಸಿಗಳ ವೇಷವನ್ನು ಧರಿಸಿದವರಾಗಲಿ ಯಾವ ಉತ್ತಮಗತಿಯನ್ನೂ ಕಾಣಲಾರದೆ ಕರ್ಮ, ಬ್ರಹ್ಮ– ಎಂಬೀ ಎರಡರಿಂದಲೂ ಭ್ರಷ್ಟರಾಗುವರು. ಆದ್ದರಿಂದ ತಮ್ಮತಮ್ಮ ಅಧಿಕಾರದಂತೆ ಸಾಧಕರು ಸಗುಣಬ್ರಹ್ಮವನ್ನೋ ನಿರ್ಗುಣಬ್ರಹ್ಮವನ್ನೋ ಉಪಾಸನೆಮಾಡಿ ಕೃತಕೃತ್ಯರಾಗಬೇಕು.

———

# ೨೫. ಸಂನ್ಯಾಸವೂ ಯೋಗವೂ

( 23—3—69 )

ವಿರಕ್ತರಾದ ಸಂನ್ಯಾಸಿಗಳು ಮಾಡಬಹುದಾದ ನಿರ್ಗುಣಬ್ರಹ್ಮದ ಉಪಾಸನಾಕ್ರಮವನ್ನು ಕುರಿತು ವಿಚಾರಮಾಡಿದ್ದಾಯಿತು. ಈಗ ನಿರ್ಗುಣಬ್ರಹ್ಮದ ಸದ್ಯೋಮುಕ್ತಿಪ್ರದವಾದ ಧ್ಯಾನಯೋಗವನ್ನು ಕುರಿತು ಚರ್ಚಿಸಬೇಕಾಗಿರುತ್ತದೆ. ಗೀತೆಯ ಆರನೆಯ ಅಧ್ಯಾಯದಲ್ಲಿ ಧ್ಯಾನಯೋಗವನ್ನು ಹೇಳುತ್ತದೆ. ಅದಕ್ಕೆ ಪೀಠಿಕೆಯಾಗಿ ಭಗವಂತನು ಹೇಳಿರುವದನ್ನು ನೆನಪಿನಲ್ಲಿಟ್ಟುಕೊಳ್ಳುವದು ಅತ್ಯವಶ್ಯ.

ಶ್ರೀಭಗವಾನುವಾಚ—

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥
ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಣ್ಡವ ।
ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೬—೧, ೨

ಸಂನ್ಯಾಸಿಗಳು ಎಲ್ಲಾ ಕರ್ಮವನ್ನೂ ಬಿಟ್ಟು ಬ್ರಹ್ಮತತ್ತ್ವವಿಚಾರವನ್ನು ಮಾಡುತ್ತಿರುತ್ತಾರೆ. ಯೋಗಿಗಳಾದವರು ಕರ್ಮತ್ಯಾಗವನ್ನು ಮಾಡಿ ಬ್ರಹ್ಮಧ್ಯಾನವನ್ನು ಮಾಡುತ್ತಿರುತ್ತಾರೆ. ಸಂನ್ಯಾಸಿಗಳು ಮಾಡುವ ತತ್ತ್ವವಿಚಾರದ ಪ್ರಕಾರವು ಎಲ್ಲರಿಗೂ ದಕ್ಕುವದಿಲ್ಲ; ಆದರೆ ಗೃಹಸ್ಥರು ಮಾಡತಕ್ಕ ಜಪಹೋಮಾದಿಗಳನ್ನು ಬಿಡುವದು ಯಾರಿಗಾದರೂ ಸಾಧ್ಯ. ಆದ್ದರಿಂದ ಅಗ್ನಿಯನ್ನು ಉದ್ವಾಸನೆಮಾಡಿ ಕಾವಿಬಟ್ಟೆಯನ್ನುಟ್ಟರೆ ಸಂನ್ಯಾಸಿಗಳಾದೆವು—ಎಂದು ಸಾಮಾನ್ಯರು ಭಾವಿಸಿಕೊಳ್ಳುವ ಸಂಭವವಿದೆ. ಯೋಗಿಗಳು ಮಾಡುವ ಧ್ಯಾನವನ್ನು ಅನುಸರಿಸುವದು ಎಲ್ಲರಿಗೂ ಸಾಧ್ಯವಿಲ್ಲ; ಆದರೆ ಬಾಹ್ಯಕ್ರಿಯೆಗಳನ್ನು ಬಿಡುವದು ಸುಲಭ. ಆದ್ದರಿಂದ ಭಗವಂತನು ಅರ್ಜುನನಿಗೆ ಸಂನ್ಯಾಸದ ಮತ್ತು ಧ್ಯಾನಯೋಗದ ತಿರುಳನ್ನು ಉಪದೇಶಿಸಬೇಕೆಂಬ ಇಚ್ಛೆಯಿಂದ ಹೇಳುತ್ತಿದ್ದಾನೆ. 'ಅರ್ಜುನ, ನಿತ್ಯಕರ್ಮವನ್ನು ಮಾಡುತ್ತಿದ್ದರೂ ಕರ್ಮಫಲತ್ಯಾಗವನ್ನು ಮಾಡಿದ್ದರೆ ಅವನೇ ನಿಜವಾದ ಸಂನ್ಯಾಸಿ; ಸಂಕಲ್ಪವನ್ನು ಬಿಟ್ಟಿದ್ದರೆ ಅವನೇ ನಿಜವಾದ ಯೋಗಿ. ಕರ್ಮಯೋಗದಲ್ಲಿ ಈ ಎರಡು ಗುಣಗಳೂ ಕೂಡಿಕೊಂಡಿರುವದರಿಂದ ಕರ್ಮಯೋಗಿಯು ಸಂನ್ಯಾಸಿಯೂ ಯೋಗಿಯೂ ಆಗಿರುತ್ತಾನೆ'. ಭಗವಂತನ ಈ ಪೀಠಿಕೆಯಿಂದ ತಿಳಿದುಕೊಳ್ಳಬೇಕಾದದ್ದೇನೆಂ

ವರೆ : ಕರ್ಮಯೋಗವನ್ನು ಸರಿಯಾಗಿ ಮಾಡಿದವನು ನಿಜವಾದ ತ್ಯಾಗಯೋಗಕ್ಕೂ ನಿಜವಾದ ಸಂನ್ಯಾಸಕ್ಕೂ ಅಧಿಕಾರಿಯಾಗುತ್ತಾನೆ.

ಅರ್ಜುನನು ಗೀತೋಪದೇಶದ ಕೊನೆಯಲ್ಲಿ ಭಗವಂತನನ್ನು ಕುರಿತು "ಸಂನ್ಯಾಸದ ಮತ್ತು ತ್ಯಾಗದ ತತ್ತ್ವವನ್ನು ನಾನು ಅರಿತುಕೊಳ್ಳಬೇಕು. ಅದನ್ನು ಹೇಳು" ಎಂದು ಮತ್ತೆ ಪ್ರಶ್ನೆಯನ್ನು ಹಾಕಿರುತ್ತಾನೆ. ಇದಕ್ಕೆ ಭಗವಂತನು ಕೊಟ್ಟ ಉತ್ತರವಿದು :

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ |
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ||

ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ |
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ||

ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ |
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ||

ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ |
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್

ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ |
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ||

ಗೀ. ೧೮-೨ ರಿಂದ ೬

ಈ ಶ್ಲೋಕಗಳಲ್ಲಿ ಭಗವಂತನು ಅಧಿಕಾರಿಗಳಾದವರು ನಿತ್ಯಕರ್ಮವನ್ನು ಬಿಡಬಾರದು ; ಸಂಗವನ್ನೂ ಫಲಾಭಿಸಂಧಿಯನ್ನೂ ಬಿಟ್ಟು ಮಾಡುತ್ತಿದ್ದರೆ ಚಿತ್ತವು ಪವಿತ್ರವಾಗುವದು ಎಂದು ಬಾಯಿಬಿಟ್ಟು ಹೇಳಿರುತ್ತಾನೆ.

ನನ್ನನ್ನು ಒಬ್ಬರು ಕರ್ಮನಿಷ್ಠರು ಒಮ್ಮೆ 'ಈ ಕರ್ಮದಿಂದ ನನ್ನನ್ನು ಹೇಗಾದರೂ ಬಿಡುಗಡೆಮಾಡಿಸಿರಿ; ನಮ್ಮವರು ಭಿಕ್ಷಕ್ಕೇನೋ ಏರ್ಪಾಡುಮಾಡುವದಕ್ಕೆ ಒಪ್ಪಿರುತ್ತಾರೆ' ಎಂದು ಕೇಳಿಕೊಂಡರು. ಬ್ರಾಹ್ಮಣನಾದವನು ಕರ್ಮಮಾಡುವ ಕ್ಲೇಶದಿಂದ ಬಿಡುಗಡೆಯಾಗುವದಕ್ಕೆ ಶಾಸ್ತ್ರವು ಮಾಡಿಕೊಟ್ಟಿರುವ ಉಪಾಯವೇ ಸಂನ್ಯಾಸ–ಎಂದು ಅವರ ಮತವಿತ್ತೆಂಬುದು ಸ್ಪಷ್ಟವಾಗಿದೆ! ಇಲ್ಲಿ ಭಗವಂತನು ಹೇಳಿರುವದೇನೆಂದರೆ :

ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ ತ್ಯಜೇತ್ |
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ || ಗೀ. ೧೮-೮

ಕರ್ಮವನ್ನು ಮಾಡುವವು ದುಃಖಕರ, ಶರೀರಕ್ಕೆ ಕ್ಲೇಶ-ಎಂಬ ಒಂದೇ ಕಾರಣ ದಿಂದ ಯಾವನು ನಿತ್ಯಕರ್ಮವನ್ನು ಬಿಡುತ್ತಾನೋ ಅವನು ಮಾಡುವದು ರಾಜಸತ್ಯಾಗ; ಅವನಿಗೆ ತ್ಯಾಗದ ಫಲವು ದೊರಕುವದೇಇಲ್ಲ. ಅದ್ದರಿಂದ ಯಾವನು ಕರ್ಮಸಂಗ, ಫಲಸಂಗ, ಭೋಗಸಂಗ-ಇವನ್ನೆಲ್ಲ ಬಿಟ್ಟುಬಿಡು ತ್ತಾನೋ ಅವನು ನಿಜವಾದ ಸಂನ್ಯಾಸಿ.

ಅಂತೂ ಯಾವನಿಗೆ ಯಾವ ಸಂಕಲ್ಪವೂ ಇಲ್ಲವೋ ಕರ್ಮಫಲದ ಆಶೆಯೂ ಇಲ್ಲವೋ-ಅವನೇ ಯೋಗಿ, ಅವನೇ ಸಂನ್ಯಾಸಿ; ವಿಷಯಗಳ ಸಂಕಲ್ಪವನ್ನು ಮಾಡುತ್ತಿರುವವನು ಹೊರಗೆ ನೋಡುವವರಿಗೆ ವಿಷಯಗಳನ್ನು ಬಿಟ್ಟಂತೆ ಕಂಡ ಮಾತ್ರದಿಂದ ಸಂನ್ಯಾಸಿಯಾದಾನೆ ?

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥** ಗೀ, ೨-೫೯

ಜ್ಞಾನಬಲದಿಂದ ಸಂನ್ಯಾಸಿಯಾದವನು ವಿಷಯಗಳನ್ನು ಬಿಟ್ಟುಬಿಟ್ಟಿರುತ್ತಾನೆ : ಅಜ್ಞರಾದ ಮೂರ್ಖರೂ ಬಿಟ್ಟುಬಿಟ್ಟಿರುತ್ತಾರೆ. ಆದರೆ ಸಾಮಾನ್ಯರಿಗೆ ವಿಷಯದ ರಾಗವು ಹೋಗಿರುವದಿಲ್ಲ. ಏಕಾದಶಿಯದಿನ ಉಪವಾಸವಿರಬೇಕೆಂದು ಶಾಸ್ತ್ರದಲ್ಲಿ ವಿಧಿಸಿರುತ್ತದೆ. ಆದರೆ ಎಷ್ಟೋ ಜನರಿಗೆ ಆಹಾರವನ್ನು ಸಂಪೂರ್ಣವಾಗಿ ಬಿಡು ವದಕ್ಕೆ ಆಗುವದಿಲ್ಲ. ಅಂಥವರಿಗೆ ನಕ್ತ, ಹವಿಷ್ಯಾನ್ನ, ಅನೌದನ- ಮುಂತಾದ ಮೆಟ್ಟಿಲುಮೆಟ್ಟಿಲುಗಳ ಕ್ರಮದಿಂದ ಕೇವಲ ವಾಯ್ವಾಹಾರರೂಪವಾದ ನಿರಶನದ ವರೆಗೂ ಉಪವಾಸದ ಕ್ರಮಗಳಲ್ಲಿ ಯೋಗ್ಯತೆಗೆ ಶಕ್ಯವಾದಷ್ಟುಮಟ್ಟಿಗೆ ಆಹಾರ ತ್ಯಾಗವನ್ನು ಮಾಡಿದರೆ ಸಾಕು-ಎಂದು ಅನುಕಲ್ಪವನ್ನು ಶಾಸ್ತ್ರದಲ್ಲಿ ಹೇಳಿರುತ್ತಾರೆ. ನಿರಾಹಾವೆಂದರೆ ಕೇವಲ ಅನ್ನವನ್ನು ಬಿಡುವದಲ್ಲ. ವಿಷಯಗಳನ್ನು ಅವುಗಳ ಲ್ಲಿರುವ ರಾಗಸಮೇತವಾಗಿ ಬಿಡುವದಕ್ಕೆ ಪ್ರಯತ್ನಿಸಬೇಕು. ಇಂದ್ರಿಯಗಳು ಇಂದ್ರಿಯಾರ್ಥಗಳಲ್ಲಿ ರಾಗದ್ವೇಷವಿಲ್ಲದೆ ಇರುವದೇಇಲ್ಲ. ವಿಷಯಗಳಲ್ಲಿರುವ ರಾಗವು ಪರಮಾತ್ಮದರ್ಶನವಾದಮೇಲೆಯೇ ಸಂಪೂರ್ಣವಾಗಿ ತೊಲಗುವದು. ಅಲ್ಲಿಯವರೆಗೆ ರಾಗದ್ವೇಷಗಳನ್ನು ಗೆಲ್ಲುವ ಉಪಾಯವನ್ನು ಯುಕ್ತವಾದ ಸಾಧನೆ ಗಳಿಂದ ಕಂಡುಕೊಳ್ಳುತ್ತಿರಬೇಕು.

ಶ್ರುತಿಯಲ್ಲಿ ಹೀಗೆಂದಿದೆ :

**ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ ॥**
ಛಾಂ. ೭-೨೬-೨

ಪಂಚೇಂದ್ರಿಯಗಳಿಗೂ ಸಾತ್ತ್ವಿಕವಿಷಯಗಳನ್ನು ಕೊಡುತ್ತಿದ್ದರೆ ಅಂತಃಕರಣವು ಶುದ್ಧವಾಗುತ್ತದೆ. ಅದರಲ್ಲಿರುವ ಮಲವಿಕ್ಷೇಪಗಳೆಂಬ ದೋಷಗಳು ತೊಲಗುತ್ತವೆ.

ಆಗಲೆ ಪರಮಾತ್ಮನ ಅನುಸಂಧಾನವು ನಮಗೆ ದೊರೆಯದು. ಸಾಮಾನ್ಯ ಜನರಿಗೆ ಭೋಗಗಳ ಆಶೆಯು ಬಿಡುವುದಿಲ್ಲ: ಸುಭಾಷಿತಕಾರರು ಹೇಳಿರುವಂತೆ ಆಗ ಭೋಗಗಳನ್ನು ನಾವು ಭೋಗಿಸುವುದೆನ್ನುವುದಕ್ಕೆ ಬದಲಾಗಿ ಭೋಗಗಳೇ ನಮ್ಮನ್ನು ಭುಂಜಿಸುತ್ತಿರುವವು ((ಭೋಗಾ ನ ಭುಕ್ತಾ ವಯಮೇವ ಭುಕ್ತಾಃ). ಹೀಗೆ ಬಾಲ್ಯದಿಂದ ಜನರಿಗೆ ಆಹಾರಶುದ್ಧಿಯು ಅಭ್ಯಸ್ತವಾದರೋ ಆಗ ವಿಷಯಸಂಸ್ಕಾರದ ದೋಷವಿಲ್ಲದ ಸತ್ತ್ವಶುದ್ಧಿ ಲಭಿಸುವುದು: ಆಮೇಲೆ ತತ್ತ್ವಾನುಸಂಧಾನವು ಲಭಿಸುವುದು. ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ (ಛಾಂ. ೭-೨೬-೨) ಎಂಬ ಶ್ರುತಿಯಂತೆ ಆಗ ಹೃದಯಕ್ಕೆ ಗಂಟುಬಿದ್ದಿರುವ ಅವಿದ್ಯಾದಿದೋಷಗಳೆಲ್ಲವೂ ಬಿಚ್ಚಿಕೊಳ್ಳುವವು.

ಹೀಗೆ ಕರ್ಮಯೋಗದಿಂದ ಗೌಣಸಂನ್ಯಾಸವನ್ನೂ ಗೌಣಯೋಗವನ್ನೂ ಜನರು ಸಾಧಿಸಿಕೊಳ್ಳುವರೋ ಅವರೇ ಪರಮಾರ್ಥಸಂನ್ಯಾಸಕ್ಕೂ ಪರಮಾರ್ಥವಾದ ಯೋಗಕ್ಕೂ ಅರ್ಹರಾಗುವರು.

## ೨೬. ಧ್ಯಾನಯೋಗಕ್ಕೆ ಸಿದ್ಧತೆ

( 24—6—69 )

ಜ್ಞಾನಸಾಧನವಾದ ನಿರ್ಗುಣಧ್ಯಾನವನ್ನು ಕುರಿತು ಮಾತನಾಡುವ ಮುಂಚೆ ಧ್ಯಾನಕ್ಕೆ ಬೇಕಾದ ಸಿದ್ಧತೆಯನ್ನು ಕುರಿತು ಆಲೋಚಿಸುವದು ಆವಶ್ಯ ವಾಗಿರುತ್ತದೆ.

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ॥
ಬನ್ಧುರಾತ್ಮಾಽಽತ್ಮನಸ್ತಸ್ಯ ಯೇನಾಽಽತ್ಮೈವಾಽಽತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾಽಽತ್ಮೈವ ಶತ್ರುವತ್ ॥

ಗೀ. ೬-೫, ೬

ತಾಯಿಯಾದವಳು 'ಮಗುವನ್ನು ಆಡಿಕೊಂಡು ಇರು, ವಿದ್ಯಾಶಾಲೆಗೆ ಹೋಗ ಬೇಡ' ಎಂದರೆ ತತ್ಕಾಲಕ್ಕೆ ಪ್ರಿಯವಾಗಿ ಕಂಡರೂ ದೊಡ್ಡವನಾದಮೇಲೆ 'ನನಗೆ ಬುದ್ಧಿ ಹೇಳದೆ ತಾಯಿಯೇ ನನ್ನ ಜೀವನವನ್ನು ಹಾಳುಮಾಡಿದಳು'– ಎಂದು ಅವಳನ್ನು ಶಪಿಸುತ್ತಾನೆ, ಆದರಂತೆ ನಾವು ನಮ್ಮನ್ನು ಸಾಧನಾನುಷ್ಠಾನದಿಂದ

ಸ್ವಾಧೀನಕ್ಕೆ ತಂದುಕೊಂಡರೆ, ಮುಂದೆ ನಮಗೇ ಒಳ್ಳೆಯದಾಗುವದು ; ನಮಗೆ ನಾವೇ ಉಪಕಾರವಮಾಡಿಕೊಂಡಂತೆ ಆಗುತ್ತದೆ. ಹಾಗಿಲ್ಲದೆ ಶರೀರೇಂದ್ರಿಯಗಳ ಸದ್ಯಃಸುಖವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ವೇಚ್ಛಾವಿಹಾರಕ್ಕೆ ಬಿಟ್ಟುಬಿಟ್ಟರೆ ನಮ್ಮ ಶ್ರೇಯಸ್ಸಿಗೆ ನಾವೇ ಅಡ್ಡಿಯಾಗಿ ನಮಗೆ ನಾವೇ ಶತ್ರುಗಳಾಗುವೆವು.

ಯಾವನು ಕರ್ಮಯೋಗದ ಅನುಷ್ಠಾನದಿಂದ ಧ್ಯಾನಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಂಡಿರುವನೋ ಅವನೇ ಕರ್ಮಸಂನ್ಯಾಸಕ್ಕೆ ಅಧಿಕಾರಿಯಾಗುವನು ; ಮುಂದೆ ಅವನೇ ಧ್ಯಾನಮಾಡುವದಕ್ಕೆ ತಕ್ಕವನಾಗುತ್ತಾನೆ. ಧ್ಯಾನವನ್ನು ಪ್ರಾರಂಭಿಸುವ ಮುಂಚೆ ಬಾಹ್ಯಸಾಧನಗಳು ಕೆಲವು ಅವಶ್ಯವಾಗಿ ಇರುತ್ತವೆ.

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥**
**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥**
**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥**

ಗೀ. ೬–೧೧, ೧೨, ೧೩

ಕರ್ಮಾನುಷ್ಠಾನವನ್ನು ಮಾಡಿದವರಿಗೆ ಶರೀರವನ್ನು ಸ್ಥಿರಸುಖಾಸನದಲ್ಲಿ ಇಟ್ಟುಕೊಂಡಿದ್ದರೂ ಜಪಾದಿಗಳಿಂದ ಏಕಾಗ್ರತೆಯನ್ನು ಸಂಪಾದಿಸಿಕೊಳ್ಳುವದೂ ಸ್ವಲ್ಪಮಟ್ಟಿಗೆ ಅಳವಟ್ಟಿರುತ್ತದೆ. ಆದರೆ ಅಧಿಕಾರಿಯಾದ ಸಂನ್ಯಾಸಿಗೆ ಮುಖ್ಯವಾಗಿ ಧ್ಯಾನಯೋಗವೇ ಮಾಡಬೇಕಾಗಿರುವ ನಿತ್ಯಕರ್ಮವಾಗಿರುತ್ತದೆ. ಸ್ವಭಾವದಿಂದಲಾಗಲಿ ಪ್ರಯತ್ನದಿಂದಲಾಗಲಿ ಶುಚಿಯಾಗಿರುವ ಸ್ಥಳದಲ್ಲಿ ಸ್ಥಿರವಾಗಿ ಆಸನವನ್ನು ಹಾಕಿಕೊಂಡು ಹೆಚ್ಚು ಎತ್ತರವೂ ಹೆಚ್ಚು ತಗ್ಗೂ ಅಲ್ಲದ ಸ್ಥಳದಲ್ಲಿ ಕುಳಿತು ಶರೀರ, ಕತ್ತು, ತಲೆ–ಇವುಗಳು ಒಂದೇ ನೇರಾಗಿ ನೆಟ್ಟಗಿರುವಂತೆ ಮಾಡಿಕೊಂಡು ಸ್ಥಿರವಾಗಿ ಕುಳಿತುಕೊಂಡು ದಿಕ್ಕುದಿಕ್ಕುಗಳಿಗೆ ದೃಷ್ಟಿಯು ಚದರದಂತೆ ಮೂಗಿನ ತುದಿಯನ್ನು ನೋಡುವವನ ಹಾಗೆ ದೃಷ್ಟಿಯನ್ನು ಮಾಡಿಕೊಂಡು ಧ್ಯಾನಮಾಡಬೇಕು. ಚಿತ್ತವು ಚದರದೆ, ಇಂದ್ರಿಯಗಳು ವಿಕ್ಷೇಪವಿಲ್ಲದೆ, ಮನಸ್ಸನ್ನು ಏಕಾಗ್ರತೆಯಲ್ಲಿಟ್ಟುಕೊಂಡರೆ ಶರೀರದ ಭಾನವೇ ತಪ್ಪಿಹೋಗುತ್ತದೆ.

ಶರೀರವು ನೆಟ್ಟಗೆ ಇರುವದರಿಂದ ಮನಸ್ಸು ಏಕಾಗ್ರತೆಯನ್ನು ಪಡೆಯುತ್ತದೆ ಎಂಬುದಕ್ಕೆ ಈಗಿನ ಶಾರೀರಶಾಸ್ತ್ರಜ್ಞರ ಅಭಿಪ್ರಾಯದ ಬೆಂಬಲವೂ

ಇದೆ. ಬೆನ್ನುಹುರಿಯು ಉಂಗುರಗಳಂತಿರುವ ಬೆನ್ನೆಲುಬಿನ ಖಂಡಗಳ ಸಂದಿಯಲ್ಲಿ ಹಾದು ನಡುನೆತ್ತಿಯವರೆಗೂ ಹೋಗುತ್ತದೆ. ಆ ನರದ ಹೊರವಲ್ಲಿ ನರವೇ ಮಿಕ್ಕ ನರಗಳ ಮೂಲವಾಗಿರುತ್ತದೆಯಂತೆ. ಈ ಶರೀರರಚನೆಯ ಕ್ರಮವು ನಮ್ಮ ಬುದ್ಧಿಗೆ ತಿಳಿದಿದ್ದೋ ಇಲ್ಲದ್ದೋ ಹೇಳುವದಕ್ಕಾಗುವದಿಲ್ಲ; ಆದರೂ ಸುಷುಮ್ನಾನಾಡಿಯೆಂಬ ಒಂದು ನಾಡಿಯು ಮೂಲಾಧಾರದಿಂದ ಹಿಡಿದು ಶಿರಸ್ಸಿನ ನಡುವೆ ಹಾದು ನಡುನೆತ್ತಿಯಲ್ಲಿ ಕೂದಲುಗಳ ಜೈತಲೆಯಂತೆ ವಿಭಾಗವಾಗಿರುವ ಸ್ಥಾನಕ್ಕೆ ಹೋಗಿರುವದೆಂದೂ ಯೋಗಿಗಳಾದ ಉಪಾಸಕರ ಮನಸ್ಸೂ ಪ್ರಾಣವೂ ಆ ಬ್ರಹ್ಮರಂಧ್ರದ ಮಾರ್ಗವಾಗಿ ಬ್ರಹ್ಮಲೋಕಕ್ಕೆ ಹೋಗುವವೆಂದೂ ಹೇಳುವ ನಂಬಿಕೆಯು ಬಹುಕಾಲದಿಂದಲೂ ನಮ್ಮವರಲ್ಲಿದ್ದು ಕೊಂಡಿರುತ್ತದೆ.

ಈ ಸಂದರ್ಭದಲ್ಲಿ ನನಗೆ ಪೂರ್ವಾಶ್ರಮಕಾಲದಲ್ಲಿ ಒಂದಾನೊಂದು ಅನುಭವವು ಅನಿರೀಕ್ಷಿತವಾಗಿ ಆದದ್ದರ ನೆನಪಾಗುತ್ತದೆ. ಆ ದಿನ ಸಾಯಂಕಾಲದಲ್ಲಿ ನಾನು ಒಬ್ಬ ಸಾಧುಗಳ ಅಪ್ಪಣೆಯಂತೆ ಮಾರನೆಯದಿನ ಬೊಂಬಾಯಿಗೆ ಹೋಗುವದಕ್ಕೆ ಸಿದ್ಧನಾಗುತ್ತಿದ್ದೆ. ಮುಂಜಾವದಲ್ಲಿ ಎದ್ದು ಸ್ನಾನವನ್ನು ಮಾಡಿ ಸ್ಥಿರಸುಖಾಸನದಲ್ಲಿ ಕುಳಿತುಕೊಂಡು ನನ್ನ ಹೃದಯದಿಂದ ನಡುನೆತ್ತಿಯವರೆಗೂ ಒಂದು ದೀಪದ ಶಿಖೆಯು ಮೆಲ್ಲಮೆಲ್ಲಗೆ ಮೇಲಕ್ಕೇರಿದಂತೆ ನಾನೇ ಭಾವನೆಮಾಡುವದಕ್ಕೆ ಹತ್ತಿದೆನು. ಹಣತೆಯ ದೀಪದ ಕುಡಿಯ ತಾಖವು ಮೇಲ್ಗಡೆಯಲ್ಲಿ ಯಾವದಾದರೊಂದು ಬಟ್ಟೆ ಇದ್ದರೆ ಅದಕ್ಕೆ ತಗಲಿಕೊಂಡು ಕೆಲವು ವೇಳೆ ಬಟ್ಟೆಯೂ ಹತ್ತಿಕೊಂಡು ಉರಿದದ್ದನ್ನು ನಿಮ್ಮಲ್ಲಿ ಕೆಲವರು ನೋಡಿರಬಹುದು. ಅದರಂತೆ ಹೃದಯದಿಂದ ಎದ್ದ ದೀಪದ ಕುಡಿಯು ಮೇಲು ಮೇಲಕ್ಕೆ ವ್ಯಾಪಿಸಿದಂತೆ ಭಾವನೆಯು ದೃಢವಾದಂತೆಲ್ಲ ನನಗೆ ದೇಹಭಾನವು ತಪ್ಪಿಬಿಟ್ಟಿತು; ಒಂದು ಅನಿರೀಕ್ಷಿತವಾದ ಸುಖವಿಶೇಷವು ಕಾಣಿಸಿಕೊಂಡಿತು! ಆ ಅನುಭವವನ್ನು ಈಚೆಗೆ ನಾನು ಒಬ್ಬ ಯೋಗಸಾಧಕರಲ್ಲಿ ಹೇಳಲಾಗಿ ಸಮಾಧಿಯನ್ನು ಪಡೆಯಲು ಆ ಬಗೆಯ ಸಾಧನದ ಅನುಷ್ಠಾನವೂ ಉಂಟೆಂದು ಅವರು ಹೇಳಿದರು!

ಈ ವೈಯಕ್ತಿಕಾನುಭವದ ಮಾತಂತಿರಲಿ, ಸಮವಾಗಿ ಶರೀರವನ್ನಿಟ್ಟು ಕೊಂಡು ಧ್ಯಾನಿಸಿದರೆ ಚಿತ್ತದ ವಿಕ್ಷೇಪವು ತಪ್ಪಿ, ಮನಸ್ಸು ಏಕಾಗ್ರವಾಗುವದೆಂಬುದೂ ಒಂದು ವಿಲಕ್ಷಣವಾದ ಸಮಾಧಾನಸ್ಥಿತಿಯು ಅನುಭವಕ್ಕೆ ಬರುವದೆಂಬುದೂ ನಿಶ್ಚಯ.

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್ ಚಕ್ಷುಶ್ಚೈವಾನ್ತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರಚಾರಿಣೌ ॥
ಯತೇನ್ದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥

ಗೀ. ೫—೨೭, ೨೮.

ಹೊರಗಿನ ವಿಷಯಗಳನ್ನು ಹೊರಗೇ ಬಿಟ್ಟು, ಚಕ್ಷುರಿಂದ್ರಿಯದ ವೃತ್ತಿಯನ್ನು ನೆಲೆನಿಲ್ಲಿಸಿಕೊಂಡು ಪ್ರಾಣಾಯಾಮದಿಂದ ಮನಸ್ಸನ್ನು ಸ್ವಾಧೀನಕ್ಕೆ ತಂದು ಕೊಂಡು, ಇಂದ್ರಿಯ-ಮನೋಬುದ್ಧಿಗಳನ್ನು ಬಿಗಿಹಿಡಿದುಕೊಂಡು ಇಚ್ಛಾಭಯ ಕ್ರೋಧಗಳಿಲ್ಲದೆ ಧ್ಯಾನಕ್ಕೆ ಕೂರಬೇಕು.

ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಞ್ಚಿದಪಿ ಚಿನ್ತಯೇತ್ ॥
ಯತೋ ಯತೋ ನಿಶ್ಚರತಿ ಮನಶ್ಚಞ್ಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥

ಗೀ. ೬—೨೫, ೨೬.

ವಿಷಯಧ್ಯಾನವನ್ನು ಕೈಬಿಟ್ಟು ಇಂದ್ರಿಯಗಳನ್ನೆಲ್ಲ ಮನಸ್ಸಿನಿಂದಲೇ ಹಿಡಿದು ಕೊಂಡು ಮೆಲ್ಲಮೆಲ್ಲಗೆ ಇಂದ್ರಿಯಮನೋವ್ಯಾಪಾರಗಳನ್ನು ಬಿಟ್ಟು ಆತ್ಮನಲ್ಲಿಯೇ ಮನಸ್ಸನ್ನಿಟ್ಟು ಮತ್ತೇನನ್ನೂ ಚಿಂತಿಸದೆ, ಎತ್ತೆತ್ತ ಮನಸ್ಸು ಚಲಿಸಿದರೂ ಅತ್ತತ್ತ ಲಿಂದ ಹಿಡಿದೆಳೆದುಕೊಂಡು ತನ್ನ ವಶಕ್ಕೆ ತಂದುಕೊಳ್ಳಬೇಕು. ಪಾತಂಜಲ ಯೋಗದಲ್ಲಿ ಆಸನಪ್ರಾಣಾಯಾಮಪ್ರತ್ಯಾಹಾರಗಳನ್ನು ಹೇಳಿರುವದು ನಿಜ; ಆದರೆ ಅಲ್ಲಿ ಚಿತ್ತವೃತ್ತಿಗಳನ್ನು ತಡೆಗಟ್ಟುವದೇ ಉದ್ದೇಶ; ಮತ್ತು ಮನಸ್ಸನ್ನು ಬೇರೆ ಬೇರೆಯ ಪ್ರದೇಶದಲ್ಲಿ ಧಾರಣೆಮಾಡಬೇಕಾಗುವದು. ಇಲ್ಲಿ ಹಾಗಲ್ಲ. ಅಂತಃ ಕರಣವು ಹೊರಕ್ಕೆ ಚಲಿಸಿದಾಗ ಅದು ಬೇರೆಬೇರೆಯ ಇಂದ್ರಿಯವ್ಯಾಪಾರಗಳನ್ನು ಮಾಡುತ್ತದೆ. ಆದ್ದರಿಂದ ಎಲ್ಲಾ ಇಂದ್ರಿಯವೃತ್ತಿಗಳನ್ನೂ ಎಳೆದುಕೊಂಡು ಮನಸ್ಸಿನಲ್ಲಿ ಲಯಮಾಡಿಕೊಂಡು ಮನಸ್ಸನ್ನು ಆತ್ಮನಲ್ಲಿಯೇ ನಿಲ್ಲಿಸಿಕೊಳ್ಳಬೇಕು; ಮತ್ತೇನನ್ನೂ ಚಿಂತಿಸದೆ ಇರಬೇಕು. ಹೀಗೆ ಮಾಡಿದರೆ ಧ್ಯಾನಪಾಟವದಿಂದ ಮನಸ್ಸು ಕರಗಿ ಆತ್ಮನಲ್ಲಿಯೇ ಲಯವಾಗಿಬಿಡುವದು. ಆಗ ವಿಲಕ್ಷಣವಾದ ಆತ್ಮಾನಂದವು ಉಂಟಾಗುತ್ತದೆ.

ಮನಸ್ಸು ತನ್ನ ಚಾಂಚಲ್ಯದಿಂದ ಸಾಧಕನನ್ನು ಕಂಡಕಡೆಗೆ ಎಳೆದಾಡುತ್ತಿರು ತ್ತದೆ. ಚಿಕ್ಕಹುಡುಗರ ಕೈಯಲ್ಲಿ ಹಗ್ಗವನ್ನು ಕಟ್ಟಿದ ಒಂದು ಕರುವನ್ನು ಹಿಡಿದುಕೊಳ್ಳುವದಕ್ಕೆ ಕೊಟ್ಟರೆ ಅದು ಅವರನ್ನೇ ಎಳೆದುಕೊಂಡುಹೋಗಿಬಿಡು

ಹಂತೆ, ಮನಸ್ಸು ನಮ್ಮನ್ನು ಕಂಡಕಡೆಗೆ ಎಳೆಯುತ್ತಿರುವದು. ಆದರೆ ಪ್ರಯತ್ನ ಪೂರ್ವಕವಾಗಿ ಮತ್ತೆಮತ್ತೆ ಅಭ್ಯಾಸವನ್ನು ಮಾಡುವದರಿಂದ ಅದು ಸ್ವಾಧೀನ ವಾಗುವದು. ಮನಸ್ಸು ಏನೇನನ್ನು ಚಿಂತಿಸುವದೋ ಅದೇ ತಾನೂ ಆಗಿ ಬಿಡುತ್ತದೆ! ಹೀಗೆಯೇ ಅಂತಸ್ಸಾಕ್ಷಿಯನ್ನು ಅಳವಡಿಸಿಕೊಂಡು ಆತ್ಮನಲ್ಲಿಯೇ ನೆಲೆನಿಂತರೆ ತಾನೂ ಆತ್ಮನೇ ಆಗಿಬಿಡುತ್ತದೆ.

## ೨೭. ಯೋಗದ ಫಲವೂ ಭಕ್ತಿಯೂ

( 25—8—69 )

ಪರಮಾತ್ಮನನ್ನು ಎಡೆಬಿಡದೆ ಚಿಂತಿಸುತ್ತಿದ್ದರೆ ಅವನನ್ನೇ ಸೇರಿ, ಅವನೇ ಆಗಿಬಿಡುತ್ತಾನೆ.

ಯುಞ್ಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ |
ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ ||ಗೀ.೬-೨೮

ಯಾವಾಗಲೂ ಯೋಗಾಭ್ಯಾಸವನ್ನೇ ಮಾಡುತ್ತಾ ಇದ್ದರೆ, ಪಾಪಪುಣ್ಯಗಳ ಸಂಬಂಧವೆಲ್ಲ ನೀಗಿ ಸುಲಭವಾಗಿ ಯೋಗಿಗೆ ಬ್ರಹ್ಮಸಂಸ್ಪರ್ಶವು ದೊರಕುವದು —ಎಂದು ಭಗವಂತನು ಹೇಳಿರುತ್ತಾನೆ. ಬ್ರಹ್ಮವು ಸರ್ವಗತವಾಗಿರುವಾಗ 'ಬ್ರಹ್ಮವನ್ನು ಮುಟ್ಟುವದು' —ಎಂದರೇನು ? ನಮ್ಮ ಮನಸ್ಸು ಏನೇನನ್ನು ಚಿಂತಿಸುವದೋ ಆದದರ ಸ್ಪರ್ಶವು ಅದಕ್ಕೆ ಆದಂತಾಗುತ್ತದೆ. ಆಗ ಅದು ಆಯಾ ವಿಷಯವೇ ಆಗಿಬಿಟ್ಟಿರುತ್ತದೆ. ಹಾಗಿದ್ದರೂ ನಾವು 'ಪ್ರತ್ಯಾಹಾರ','ಧಾರಣಾ', 'ಧ್ಯಾನ', 'ಸಮಾಧಿ'—ಎಂಬ ಮಾತುಗಳನ್ನು ಆಡುತ್ತಲೇ ಇರುವೆವು. ಅವುಗಳ ಅರ್ಥವು ಮಾತ್ರ ನಮ್ಮ ಮನಸ್ಸಿಗೆ ಹತ್ತುವದಿಲ್ಲ. ನಾವೆಲ್ಲರೂ ಬ್ರಹ್ಮದಲ್ಲಿಯೇ ಇದ್ದುಕೊಂಡಿರುತ್ತಿದ್ದರೂ ಸಾಧನದಿಂದ ಬ್ರಹ್ಮವನ್ನು ಮುಟ್ಟಬೇಕಾಗಿರುತ್ತದೆ. ಇದನ್ನು 'ಬ್ರಹ್ಮಸಂಸ್ಪರ್ಶ' ಎನ್ನುವದಕ್ಕೆ ಬದಲು 'ಹೊರಗಿನ ವಿಷಯಗಳ ಸ್ಪರ್ಶವಿಲ್ಲದೆ ಇರುವದು'ಎಂದೇ ಕರೆಯುವದು ಯುಕ್ತ. ಆದ್ದರಿಂದಲೇ ವೇದಾಂತ ಸಂಪ್ರದಾಯವನ್ನು ಬಲ್ಲ ಶ್ರೀಗೌಡಪಾದಾಚಾರ್ಯರು :

ಅಸ್ಪರ್ಶಯೋಗೋ ವೈ ನಾಮ ದುರ್ದರ್ಶಃ ಸರ್ವಯೋಗಿಭಿಃ |
ಯೋಗಿನೋ ಬಿಭ್ಯತಿ ಹ್ಯಸ್ಮಾದಭಯೇ ಭಯದರ್ಶಿನಃ ||

ಗೌ. ಕಾ. ೩-೩೯.

"ಈ ಯೋಗವು 'ಅಸ್ಪರ್ಶಯೋಗ'ವೆಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಪರಮಾರ್ಥತತ್ತ್ವಕ್ಕೆ ಯಾವ ಬಾಹ್ಯವಸ್ತುವಿನ ಸೋಂಕೂ ಇರುವದೇ ಇಲ್ಲ. ಎರಡನೆಯವರ ಸಂಬಂಧವೇ ಇಲ್ಲವಾದ್ದರಿಂದ ಇದು ಅಭಯವೇ ಆಗಿದ್ದರೂ ಇದನ್ನು ಮುಟ್ಟಿದರೆ ಆತ್ಮನಾಶವೇ ಆಗುವದೆಂದು ಸಾಮಾನ್ಯಯೋಗಿಗಳು ಇದಕ್ಕೆ ಅಂಜುತ್ತಿರುವರು. ಆತ್ಮನೇ ಪರಮಾರ್ಥಸತ್ಯವೆಂದು ಅರಿತುಕೊಳ್ಳದವರಿಗೆಲ್ಲ ಇದನ್ನು ಕಾಣುವದು ಕಷ್ಟ"ಎಂದು ಪರಮಾರ್ಥವಾದ ಆತ್ಮತತ್ತ್ವವನ್ನು ಹೊಗಳಿರುತ್ತಾರೆ. ಹೀಗಿದ್ದರೂ ಮನಸ್ಸೆಂಬ ಉಪಾಧಿಯಿರುವವರೆಗೂ ನಾವು ಆ ಪರಮಾರ್ಥಾತ್ಮತತ್ತ್ವಕ್ಕೆ ದೂರರಾಗಿರುತ್ತೇವೆ; ನಾವು ಧ್ಯಾನಯೋಗದಿಂದ ಒಳಕ್ಕೆಹೋಗಿ ಆ ಬ್ರಹ್ಮವನ್ನು ಮುಟ್ಟಬೇಕಾಗಿದೆ– ಎಂಬುದೇ ಸಾಧಕರ ದೃಷ್ಟಿ. ಆ ದೃಷ್ಟಿಯಿಂದ ಭಗವಂತನ ಯೋಗವನ್ನು ಸತತವಾಗಿ ಮಾಡುತ್ತಿದ್ದರೆ ಸುಲಭವಾಗಿ 'ಬ್ರಹ್ಮಸಂಸ್ಪರ್ಶ'ವನ್ನು ಪಡೆದುಕೊಳ್ಳುವನು– ಎಂದಿರುತ್ತಾರೆ.

ಜನರು ಯೋಗದ ಮಾತನ್ನು ಕೇಳಿದಾಗ ನಾವೂ ಏಕೆ ಅದನ್ನು ಮಾಡಬಾರದು?–ಎಂದುಕೊಳ್ಳುತ್ತಾರೆ. ಕೈಯಿಂದ ಕಾಸನ್ನು ಖರ್ಚುಮಾಡುವದಕ್ಕೆ ಮನಸ್ಸುಬಾರದಿದ್ದರೂ ಬದರಿ ಮುಂತಾದ ದೂರದ ತೀರ್ಥಯಾತ್ರೆಗೆ ಹೋಗಿ ಬಂದವರನ್ನು ಪ್ರಯಾಣಮಾರ್ಗದ ವಿಷಯವಾಗಿ ಪ್ರಶ್ನೆಮಾಡುವವರಂತೆ, ಬಾಹ್ಯವಿಷಯಗಳ ಆಶೆಯು ಹೋಗದೆಇದ್ದರೂ 'ಮನಸ್ಸು ವಶವಾಗುವದು ಹೇಗೆ?', 'ಪರಮಾತ್ಮದರ್ಶನಕ್ಕೆ ಉಪಾಯವೇನು?'ಎಂದು ಸಾಮಾನ್ಯರು ಕೇಳುತ್ತಿರುವರು. ಮಳೆಗಾಲದಲ್ಲಿ ತೋಡಿದ ಗುಂಡಿಗಳನ್ನೇ 'ಬಾವಿ' ಎಂದು ಕರೆಯುವವರಹಾಗೆ– ಸ್ವಲ್ಪಹೊತ್ತು ಯಾವ ಕರ್ಮವನ್ನೂ ಮಾಡದೆ ಯಾವದಾದರೊಂದು ಅಧ್ಯಾತ್ಮಸಾಧನವನ್ನು ಮಾಡುವದಕ್ಕೆ ಪ್ರಯತ್ನಿಸಿದಾಗ 'ಇದೇ ಧ್ಯಾನಯೋಗ' ಎಂದುಕೊಳ್ಳುತ್ತಾರೆ!

ಧ್ಯಾನಯೋಗವೆಂಬುದು ಬಹಳ ಕಷ್ಟಸಾಧ್ಯ. ಭಗವಂತನು ಕರ್ಮಯೋಗವನ್ನು ಉಪದೇಶಿಸುವಾಗ 'ಅದನ್ನೇ ಮಾಡು' ಎಂದು ಉಪದೇಶಿಸಿದಂತೆ ಧ್ಯಾನಯೋಗವನ್ನು ಉಪದೇಶಿಸುವಾಗಲೂ ಅದನ್ನೇ ಹೊಗಳಿರುತ್ತಾನೆ. ಯೋಗಾಭ್ಯಾಸದ ಫಲವನ್ನು ವರ್ಣಿಸುವಾಗ:–

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥** ಗೀ. ೬–೨೯

ಯೋಗಿಯಾದವನು ಸರ್ವಭೂತಗಳಲ್ಲಿಯೂ ಒಬ್ಬನೇ ಪರಮಾತ್ಮನನ್ನೂ, ಆ ಪರಮಾತ್ಮನಲ್ಲಿ ಸರ್ವಭೂತಗಳನ್ನೂ ಕಂಡುಕೊಳ್ಳುತ್ತಾನೆ–ಎಂದಿರುತ್ತಾನೆ.

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ ಯೋಗೀ ಭವಾರ್ಜುನ ॥
ಗೀ. ೬–೪೬

'ತಪಸ್ವಿಗಳಿಗಿಂತಲೂ ಯೋಗಿಯು ಹೆಚ್ಚಿನವನು, ಶಾಸ್ತ್ರಜ್ಞಾನಿಗಳಿಗಿಂತಲೂ ಯೋಗಿಯು ಹೆಚ್ಚಿನವನು ; ಕರ್ಮಿಗಳಿಗಿಂತಲೂ ಯೋಗಿಯು ಹೆಚ್ಚಿನವನು. ಅದ್ದರಿಂದ ಅರ್ಜುನ, ನೀನು ಯೋಗಿಯಾಗು!' –ಎಂದು ಅರ್ಜುನನಿಗೆ ಉಪದೇಶಮಾಡಿರುತ್ತಾನೆ. ಇದರಿಂದ ಭಗವದ್ಗೀತೆಯಲ್ಲಿ ಧ್ಯಾನಯೋಗವು ಎಲ್ಲಾ ಸಾಧನಗಳಿಗಿಂತಲೂ ಹೆಚ್ಚಿನದೆಂದು ಹೇಳಿದಂತೆಯೇ ಕಾಣುತ್ತದೆ. ಆದರೂ ಮುಂದೆ ಹೇಳುವ ಭಕ್ತಿಯನ್ನು ತಿಳಿಯುವ ಕುತೂಹಲವು ಅರ್ಜುನನಿಗೆ ಉಂಟಾಗಲೆಂದು ಇದೇ ಅಧ್ಯಾಯದ ಕೊನೆಯಲ್ಲಿ:–

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥
ಗೀ. ೬–೪೭

'ಯೋಗಿಗಳೊಳಗೆಲ್ಲ ಶ್ರದ್ಧಾಭಕ್ತಿಯಿಂದ ನನ್ನನ್ನು ಭಜಿಸುತ್ತಿರುವವನೇ ಹೆಚ್ಚಿನ ಯೋಗಿಯು' ಎಂದಿರುತ್ತಾನೆ. ಇದರಿಂದ ಕರ್ಮಯೋಗವೆಂಬ ಬಾಹ್ಯಸಾಧನಕ್ಕಿಂತ ಹೇಗೆ ಧ್ಯಾನಯೋಗವು ಅಂತರಂಗವಾದ ಸಾಧನವಾಗಿರುತ್ತದೆಯೋ ಹಾಗೆಯೇ ಧ್ಯಾನಯೋಗಕ್ಕೂ ಒಳಮೈಯಾಗಿ ಅಂತರಂಗವಾಗಿರುವದು 'ಭಕ್ತಿ' ಎಂದು ಸೂಚಿಸಿದಂತೆ ಆಗಿರುತ್ತದೆ. ಒಂದು ಕೆ. ಜಿ. ಸಕ್ಕರೆ ಬೇಕಾಗಿರುವವನು ಸಕ್ಕರೆ ಮೂಟೆಗೆ ಚೀಲೆಯನ್ನು ಕೇಳುವಂತೆ ನಾವು ಯೋಗಭಕ್ತ್ಯಾದಿಶಬ್ದಗಳನ್ನು ಬಳಸಿದ ಮಾತ್ರದಿಂದಲೇ ಆ ಸಾಧನಗಳಿಗೆ ಅಧಿಕಾರಿಗಳಾಗಲಾರೆವು. ನಮಗೆ ತಕ್ಕ ಸಾಧನವನ್ನು ನಾವು ಮಾಡುವದಕ್ಕೆ ಆರಂಭಿಸಬೇಕು. ಹಾಗಾದರೆ ಮೆಲ್ಲಮೆಲ್ಲಗೆ ಸಾಧನಗಳ ಮೆಟ್ಟಲುಗಳನ್ನು ಏರಬಹುದಾಗುತ್ತದೆ.

ಭಗವಂತನು ಯೋಗವನ್ನುಪದೇಶಿಸಿದ ಬಳಿಕ ಏಳನೆಯ ಅಧ್ಯಾಯದ ಆದಿಯಲ್ಲಿ ಹೀಗೆಂದಿರುತ್ತಾನೆ:

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು॥ ಗೀ. ೭–೧

ಯೋಗವನ್ನು ಕೊನೆಯ ಸಾಧನವೆಂದು ವಾದಿಸುತ್ತಿದ್ದ ಡಾ॥ ಪಾಲ್‌ಬ್ರಂಟನ್ ಎಂಬಾತನು ಕಾರಣವಶದಿಂದ ವಾದದಲ್ಲಿ ಸಿಕ್ಕಿಕೊಂಡು ಮೈಸೂರಿನಲ್ಲಿ ನನ್ನಬಳಿಗೆ ಬಂದಿದ್ದನು. ಅವನಿಗೆ ಯೋಗಸಾಧನೆಯಲ್ಲಿ ಸ್ವಲ್ಪ ಪರಿಚಯವಿತ್ತು. ಶ್ರೀರಮಣ

ಮಹರ್ಷಿಗಳು ಏಕಾಂತವಾಸವನ್ನು ಮಾಡಿಕೊಂಡಿದ್ದಲ್ಲಿಗೆ ಹೋಗಿ ಅವರ ಅನುಗ್ರಹವನ್ನು ಸಂಪಾದಿಸಿಕೊಂಡಿದ್ದನು. ನನ್ನೊಡನೆ ಮಾತನಾಡುತ್ತಿದ್ದಾಗ 'ಯೋಗವು ಜ್ಞಾನಕ್ಕೆ ಸಾಧನವು ಎಂದು ಶಾಂಕರಭಾಷ್ಯದಲ್ಲಿದೆ'-ಎಂದು ನಾನು ಹೇಳಿದ್ದನ್ನು ಕೇಳಿ 'ಶಂಕರಾಚಾರ್ಯರ ವಿಷಯವಂತಿರಲಿ, ಭಗವಂತನು ಯೋಗಿಯು ಎಲ್ಲರಿಗಿಂತಲೂ ಹೆಚ್ಚಿನವನು ಎಂದು ಹೇಳಿಲ್ಲವೆ?' ಎಂದು ಪ್ರಶ್ನಿಸಿದನು. ಆಗ ಈ ಮೇಲೆ ಉದಾಹರಿಸಿರುವ ಶ್ಲೋಕವನ್ನು ಭಗವದ್ಗೀತೆಯಿಂದಲೇ ಉದ್ಧರಿಸಿ ಹೇಳಲು ಅದು ಆವನನ್ನು ಆಶ್ಚರ್ಯಚಕಿತನನ್ನಾಗಿ ಮಾಡಿತು. ಮುಂದೆ ಆವನು "Beyond Yoga" (ಯೋಗದಿಂದಾಚೆಗೆ) ಎಂಬ ಹೆಸರಿನ ಗ್ರಂಥವೊಂದನ್ನು ರಚಿಸಿದನು. ಆ ಕಾಲಕ್ಕೆ ಆವನು ಬ್ರಿಟಿಷರ ಬೇಹುಗಾರನಾಗಿ ಭೇದೋಪಾಯದ ಅನುಷ್ಠಾನದಲ್ಲಿದ್ದಾನೆಂದು ಕೆಲವರು ಮಿತ್ರರು ನನಗೆ ಹೇಳಿದ್ದದ್ದರಿಂದಲೂ ವರ್ತಮಾನಪತ್ರಿಕೆಗಳ ವ್ಯವಹಾರವನ್ನು ಮಾಡುವವರಂತೆ ತನ್ನ ಹಿಂದೆ ಒಬ್ಬ ಮನುಷ್ಯನನ್ನು ಆಯಾ ಸಮಯದಲ್ಲಿ ನಡೆದ ಸಂಭಾಷಣೆಯನ್ನು ಸಂಕ್ಷಿಪ್ತ ಲಿಪಿಯಲ್ಲಿ ಬರೆದುಕೊಳ್ಳುವದಕ್ಕೆ ಇಟ್ಟುಕೊಂಡಿದ್ದದ್ದು ಕಂಡುಬಂದದ್ದರಿಂದಲೂ ಮತ್ತೆ ನಾನು ಆತನೊಡನೆ ವಿಚಾರವಿನಿಮಯಕ್ಕೆ ಸಿದ್ಧನಾಗಲಿಲ್ಲ. ಇದಂತಿರಲಿ. ಈ ಉದಾಹರಿಸಿರುವ ಶ್ಲೋಕದಲ್ಲಿರುವ ಅಭಿಪ್ರಾಯಗಳನ್ನು ಇಲ್ಲಿ ಒಂದೊಂದಾಗಿ ಮನಸ್ಸಿನಲ್ಲಿ ಹೊರಳಾಡಿಸೋಣ.

(೧) 'ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ' ಯಾವನು ಯಾವ ಪುರುಷಾರ್ಥವನ್ನು ಬಯಸುತ್ತಾನೋ ಅವನು ಅದಕ್ಕೆ ಬೇಕಾದ ಸಾಧನವನ್ನು ಆಶ್ರಯಿಸುತ್ತಾನೆ. ಆದರೆ ಯೋಗಿಯು ಭಗವಂತನಲ್ಲಿಯೇ ಆಸಕ್ತನಾಗಿರುತ್ತಾನೆ; ಮತ್ತೊಂದು ಸಾಧನವನ್ನು ಆಶ್ರಯಿಸದೆ ಭಗವಂತನನ್ನೇ ಆಶ್ರಯಿಸಿರುತ್ತಾನೆ. ಭಗವಂತನ ಜ್ಞಾನವು ಬೇಕಾದರೆ ಭಗವಂತನಲ್ಲಿಯೇ ಆಸಕ್ತಿಯಿರಬೇಕು; ಭಗವಂತನೇ ಅದಕ್ಕೆ ಸಾಧನವಾಗಬೇಕು. ಸಾಧನವೂ ಫಲವೂ ಇಲ್ಲಿ ಭಗವಂತನೇ-ಎಂಬುದು ವಿಶೇಷವು.

(೨) "ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು" ಪರಮಾತ್ಮನ ಭಕ್ತಿಯಿಂದೊಡಗೂಡಿದ ಯೋಗದಿಂದ ಅಸಂಶಯವಾಗಿ ಸಮಗ್ರವಾಗಿ ಆತನನ್ನು ಸಾಧಕರು ಅರಿತುಕೊಳ್ಳುತ್ತಾರೆ. ಆ ಜ್ಞಾನದಲ್ಲಿ ಭಗವಂತನ ಸ್ವರೂಪವು ಹಾಗೊ, ಹೀಗೊ?- ಎಂಬ ಸಂಶಯವು ಉಳಿದುಕೊಂಡಿರುವದಿಲ್ಲ. ಪರಮಾತ್ಮನ ಶಕ್ತ್ಯೈಶ್ವರ್ಯಾದಿಗುಣಗಳೆಲ್ಲವನ್ನೂ ನಿಶ್ಚಿತವಾಗಿ ಅರಿತುಕೊಳ್ಳುತ್ತಾರೆ. ಭಗವಂತನ ಸ್ವರೂಪವು ಹೀಗೆಯೇ ಇದೆ, ಬೇರೆ ಪ್ರಕಾರವಾಗಿಲ್ಲ ಎಂದು ಕಂಡುಕೊಳ್ಳುತ್ತಾರೆ. ಇದು ಭಕ್ತಿಯುಕ್ತವಾದ ಯೋಗದ ಫಲವು.

ಭಗವಂತನನ್ನು ಎಲ್ಲರೂ ಏತಕ್ಕೆ ಅರಿಯಲಾರದೆ ಇರುತ್ತಾರೆ? ಜ್ಞಾನಶಕ್ತಿ ಇರುವ ಅಡ್ಡಿ ಯಾವದು ?–ಎಂದರೆ ಭಗವಂತನು ಹೇಳಿರುವ ಉತ್ತರವಿದು:

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ॥** ಗೀ. ೭–೧೪

ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದಾಗಿರುವ ಮಾಯೆಯು ಭಗವಂತನನ್ನು ಮುಸುಕಿಕೊಂಡಂತೆ ಇರುತ್ತದೆ. ಅದು ಭಗವಂತನದೇ ಆಗಿರುವದರಿಂದ' ಅವನಿಗೆ ಮಾಯೆಯಿಂದ ಯಾವ ಕಲಂಕವೂ ಆಗಿರುವದಿಲ್ಲ. ಆದರೂ ಆ ಮಾಯೆಯಿಂದ ಮೋಹಿತರಾದವರು ಅದನ್ನು ದಾಟಲಾರದೆ ಇರುವರು. ಮೋಡವು ಮುಚ್ಚಿಕೊಂಡಿರುವ ಸೂರ್ಯನನ್ನು ಜನರು ನೋಡಲಾರರು ; ಆದರೆ ಆ ಮೋಡವುಕೂಡ ಸೂರ್ಯನ ಬೆಳಕಿನಿಂದಲೇ ಪ್ರಕಾಶಿಸುತ್ತಿರುವದರಿಂದ ಅದರ ಮುಸುಕಿನಿಂದ ಸೂರ್ಯನಿಗೇನೂ ಕಲಂಕವಾಗಿರುವದಿಲ್ಲ. ಹೀಗೆ ಭಗವಂತನನ್ನು ಅರಿಯುವದಕ್ಕೆ ಮರೆಯಂತಿರುವ ಮಾಯೆಯು–ಯಾರು ಭಗವಂತನನ್ನೇ ಶರಣುಹೊಗುವರೋ ಅಂಥ ಪ್ರಪನ್ನರಿಗೆ–ಯಾವ ಆತಂಕವನ್ನೂ ಉಂಟು ಮಾಡುವದಿಲ್ಲ. 'ನೀನೇ ಗತಿ!' ಎಂದು ಶರಣುಬಂದವರಪಾಲಿಗೆ ಆ ಮಾಯೆಯು ಮಾಯವಾಗಿಬಿಡುವದು ! ಆದರೆ ಹೀಗೆ ಸಂಪೂರ್ಣವಾಗಿ ಶರಣಾಗತರಾಗುವದು ಎಲ್ಲರಿಗೂ ಸಾಧ್ಯವಿಲ್ಲ.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ ।**
**ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥** ಗೀ. ೭–೧೫

ಯಾರು ಪಾಪದ ಫಲವಾಗಿ ಮೋಹಕ್ಕೊಳಗಾಗಿರುವರೋ ಅವರು ಅಸುರಭಾವವನ್ನು ಆಶ್ರಯಿಸಿರುವರು. ಅಸುರರು ಎಂದರೆ 'ಸ್ವೇಷ್ವೇವ ಅಸುಷು ರಮನ್ತೇ' ತಮ್ಮ ಪ್ರಾಣಗಳಲ್ಲಿಯೇ ರತರಾಗಿರುವವರು. ಸ್ವಾರ್ಥಿಗಳಾಗಿರುವದರಿಂದ ಭಗವಂತನಲ್ಲಿ ಪ್ರಪತ್ತಿಯು ಅವರಿಗೆ ದೊರಕದೆ ಇರುತ್ತದೆ. ಇದಕ್ಕೆ ಬದಲಾಗಿ ಸುಕೃತದ ಸಂಸ್ಕಾರವುಳ್ಳವರು ಭಗವಂತನನ್ನೇ ಭಜಿಸುತ್ತಾರೆ. ಅವರಲ್ಲಿ ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ– ಎಂದು ನಾಲ್ಕು ವಿಧ. "ಜಿಜ್ಞಾಸು"–ಎಂದರೆ ಗುರುಗಳ ಬಳಿಗೆ ಹೋಗಿ ಶ್ರದ್ಧೆಯಿಂದ ಅವರನ್ನು ಸೇವಿಸಿ ಭಗವದ್ಭಕ್ತಿಯಿಂದ ಪರಮಾತ್ಮತತ್ತ್ವವನ್ನು ಅರಿತುಕೊಳ್ಳಬೇಕೆಂದು ತಹತಹಪಡುತ್ತಿರುವಾತನು. ಅರ್ಥಾರ್ಥಿ ಎಂದರೆ ಭಗವಂತನಿಂದಲೇ ಇಹಪರಸುಖಗಳೂ ಪರಮಪುರುಷಾರ್ಥವೂ ದೊರಕಬೇಕಾಗಿದೆಎಂಬುದನ್ನು ಗಟ್ಟಿಯಾಗಿ ನಂಬಿ ತನ್ನ ಸಕಲ ಇಷ್ಟಾರ್ಥಪ್ರಾಪ್ತಿಗಾಗಿಯೂ ಆತನನ್ನೇ ಯಾವಾಗಲೂ ಭಜಿಸುತ್ತಿರುವವನು. ಇನ್ನು ಆರ್ತನೆಂದರೆ ನೀರಿನಿಂದ ಈಚೆಗೆ ಸಿಡಿದುಬಿದ್ದಿರುವ ಮೀನು

ಹೇಗೆ ಲಿಬಿಲಿಬಿ ಒದ್ದಾಡುತ್ತಿರುವದೋ, ಹಾಗೆ ಭಗವಂತನ ಅಗಲುವಿಕೆಯಿಂದಾದ ಸಂಸಾರದ ತಾಪವನ್ನು ತಡೆಯಲಾರದೆ ಸಂಕಟಪಡುತ್ತಿರುವವನು. ಆ ಭಗವಂತನನ್ನು ನಾನು ಹೇಗೆ, ಎಂದು, ಕಂಡುಕೊಂಡೇನು?– ಎಂದು ತಲ್ಲಣಿಸುತ್ತಿರುವವನು. ಈ ಎಲ್ಲರೂ ಭಗವಂತನನ್ನೇ ಶರಣುಹೊಕ್ಕಿರುವದರಿಂದ ಮಾಯೆಯನ್ನು ದಾಟುವದಕ್ಕೆ ಅಧಿಕಾರಿಗಳಾಗಿರುತ್ತಾರೆ. ಆದರೆ :

ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥
ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥

ಗೀ. ೭–೧೭, ೧೮

ಇವರುಗಳೊಳಗೆ ಜ್ಞಾನಿಯೇ ಸರ್ವಶ್ರೇಷ್ಠನು. ಏಕೆಂದರೆ ಅವನು ನಿತ್ಯಯುಕ್ತನು, ಎಂದರೆ ಪರಮಾತ್ಮನಲ್ಲಿಯೇ ಚಿತ್ತವನ್ನು ಸರ್ವದಾ ಸಮಾಧಾನಗೊಳಿಸಿಕೊಂಡಿರುತ್ತಾನೆ. ಮಿಕ್ಕವರು ತಮಗೆ ಆಗಬೇಕಾಗಿರುವ ಇಷ್ಟಪ್ರಾಪ್ತಿ, ಅಥವಾ ಅನಿಷ್ಟನಿವೃತ್ತಿ–ಇವಕ್ಕಾಗಿ ಭಗವಂತನಿಗೆ ಶರಣಾಗತರಾಗಿರುವದರಿಂದ ಅವರು ತಮಗೆ ಇಷ್ಟವಾದ ಅಥವಾ ಅನಿಷ್ಟವಾದ ವಸ್ತುಗಳಲ್ಲಿಯೂ ಮನಸ್ಸನ್ನು ಇಟ್ಟುಕೊಂಡಿರುತ್ತಾರೆ. ಆದರೆ ಜ್ಞಾನಿಯು ಹಾಗಲ್ಲ, ಭಗವಂತನ ಅಸಾಧಾರಣ ಮಹಿಮೆಯನ್ನು ಅರಿತವನಾದ್ದರಿಂದ ಆತನನ್ನು ಬಿಟ್ಟು ಮತ್ತೆಲ್ಲಿಯೂ ಚಿತ್ತವನ್ನು ಹರಿಯಬಿಡದೆ ಇರುತ್ತಾನೆ. ಅವನು ಏಕಭಕ್ತ, ಎಂದರೆ ಭಗವಂತನಿಗಿಂತ ಮತ್ತೊಂದು ಪ್ರಿಯತರವಸ್ತುವನ್ನೇ ಕಾಣನಾದ್ದರಿಂದ ಏಕಾಂತಭಕ್ತನಾಗಿರುತ್ತಾನೆ. ಆತ್ಮನೆಂದರೆ ತನ್ನ ಸ್ವರೂಪವೇ ; ಲೋಕದಲ್ಲಿ ತನಗೋಸ್ಕರವಾಗಿಯೇ ಹೆಂಡತಿ, ಮಕ್ಕಳು, ಹಣಕಾಸು, ಹೊಲಮನೆ, ಸ್ನೇಹಿತರು, ದೇಶ–ಮುಂತಾದದ್ದೆಲ್ಲವೂ ಬೇಕೆನಿಸುವದು. ಆದ್ದರಿಂದ ಜ್ಞಾನಿಗೆ ಭಗವಂತನು ಆತ್ಮನಾದ್ದರಿಂದ ನಿತ್ಯವೂ ಪ್ರಿಯನಾಗಿರುತ್ತಾನೆ : ಭಗವಂತನಿಗೂ ಅವನು ಪ್ರಿಯನಾಗಿರುತ್ತಾನೆ. ಭಗವಂತನ ಆತ್ಮನೂ ಭಕ್ತನ ಆತ್ಮನೂ ಒಬ್ಬನೇ ; ಅವರಲ್ಲಿ ಭೇದವೇ ಇರುವದಿಲ್ಲ. 'ಭಗವಂತನೇ ನಿರತಿಶಯವಾದ ಪರಗತಿಯು ; ಆತನನ್ನು ಬಿಟ್ಟು ನನಗೆ ಮತ್ತೆ ಯಾವದಿದೆ ?' ಎಂಬ ಅರಿವು ಗಟ್ಟಿಯಾಗಿ ಅವನಿಗೆ ಇದ್ದುಬಿಟ್ಟಿರುತ್ತದೆ.

ಹೀಗಿರುವದರಿಂದ ಪಾಪವಾಸನೆಯನ್ನು ನೀಗಿಕೊಂಡು ಆರ್ತಾದಿಪ್ರಕಾರಗಳಲ್ಲಿ ಯಾವದಾದರೊಂದು ಪ್ರಕಾರದ ಭಕ್ತಿಯನ್ನು ಸಂಪಾದಿಸಿಕೊಳ್ಳುವದಕ್ಕೆ ಹವಣಿಸಬೇಕು. 'ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ'–ಎಂದು ಶ್ರುತಿಯು

ಹಾರುತ್ತದೆ. ಶ್ರದ್ಧೆ, ಭಕ್ತಿ, ಭಗವದ್ಧ್ಯಾನ–ಇವುಗಳ ಸಮ್ಮಿಶ್ರಿತವಾದ ಸಾಧನವು ಭಗವತ್ತತ್ತ್ವಜ್ಞಾನಕ್ಕೆ ಸಾಕ್ಷಾತ್ಕಾರಣವಾಗಿರುತ್ತದೆ. ಕಾಮಿಗಳಾದವರು ಪುತ್ರಪಶುವಿತ್ತಾದಿಗಳನ್ನು ಸಂಪಾದಿಸುವದಕ್ಕಾಗಿ ಲೌಕಿಕೋಪಾಯಗಳನ್ನೇ ಹುಡುಕುತ್ತಿರುವರು. ಶಾಸ್ತ್ರದೃಷ್ಟಿಯುಳ್ಳವರೂ ಧನಸಂಪತ್ತಿಗೆ ಲಕ್ಷ್ಮಿ, ವಿದ್ಯೆಯ ಪ್ರಾಪ್ತಿಗೆ ಸರಸ್ವತಿ, ಕಾರ್ಯಗಳ ಸಿದ್ಧಿಗೆಂದು ವಿಘ್ನಪರಿಹಾರಕ್ಕಾಗಿ ವಿಘ್ನೇಶ್ವರ –ಹೀಗೆ ಬೇರೆಬೇರೆಯ ದೇವತೆಗಳನ್ನು ಒಂದೊಂದು ಕಾಮಿತಾರ್ಥಪ್ರಾಪ್ತಿಗಾಗಿ ಸೇವಿಸುವರು. ಆದರೆ ಭಗವಂತನು ಈ ಬೇರೆಬೇರೆಯ ದೇವತೆಗಳೆಲ್ಲರ ಆತ್ಮನಾಗಿರುತ್ತಾನೆ; ಆದ್ದರಿಂದ ಆತನನ್ನು ಶರಣುಹೊಕ್ಕರೆ ಸಕಲೇಷ್ಟಾವಾಪ್ತಿಯೂ ಆದಂತೆ.

---

## ೨೮. ಭಕ್ತಿಯಿಂದ ಜ್ಞಾನವಿಜ್ಞಾನಗಳು

( 26—8—69 )

ಭಕ್ತಿ, ಜ್ಞಾನ–ಎಂಬ ಶಬ್ದಗಳನ್ನು ಕೇಳಿ ಅವುಗಳಲ್ಲಿ ಒಂದು ಹೆಚ್ಚೆಂದೂ ಇನ್ನೊಂದು ಕಡಿಮೆಯೆಂದೂ ಕೆಲವರ ಅಭಿಪ್ರಾಯ· ತಮ್ಮ ತಮ್ಮ ಮನೆಯ ಯಜಮಾನರುಗಳಲ್ಲಿ ಶ್ರದ್ಧೆಯಿರುವ ಸೇವಕರು ಆ ಯಜಮಾನರುಗಳಿಗೆ ಯಾವದೋ ನಿಮಿತ್ತದಿಂದಾಗಿರುವ ಮತಭೇದದ ಕಾರಣವನ್ನು ತಿಳಿಯಲಾರದೆ ತಾವೂ ಒಬ್ಬರೊಡನೊಬ್ಬರು ಕಲಹಮಾಡುವಂತೆ, 'ಜ್ಞಾನದಿಂದ ಪುರುಷಾರ್ಥವು ದೊರಕೀತೆ ?', 'ಜ್ಞಾನವಿಲ್ಲದವರು ಎಂಥ ಭಕ್ತರಾದರೆತಾನೆ ಏನು ?–ಎಂದು ಒಬ್ಬರನ್ನೊಬ್ಬರು ಅವಹೇಳನಮಾಡುವದು ಅವಿವೇಕದ ಗುರುತೇ ಸರಿ. ಶಂಕರಾಚಾರ್ಯರು ಜ್ಞಾನವನ್ನು ಎತ್ತಿಹಿಡಿದಿದ್ದಾರೆ, ಅವರಿಗೆ ಭಕ್ತಿಯ ಆಳವು ಅಷ್ಟು ತಿಳಿಯದು, ಅಥವಾ ಅವರಿಗೆ ಭಕ್ತಿಯಲ್ಲಿ ಅಷ್ಟು ಅಭಿರುಚಿಯಿಲ್ಲ– ಎಂದು ಕೆಲವರು ಆಡಿಕೊಳ್ಳುವದುಂಟು. ಅದು ಸರ್ವಥಾ ಅಯುಕ್ತ. ಶ್ರುತಿಸ್ಮೃತಿಗಳಲ್ಲಿ "ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ", "ಜ್ಞಾನಾದೇವ ತು ಕೈವಲ್ಯಂ", 'ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್' – ಎಂದು ಘೋಷಿಸಿರುತ್ತದೆ. ಭಗವಂತನು 'ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ' ಎಂದು ಕಂಠರವದಿಂದ ಹೇಳಿರುತ್ತಾನೆ. ಶ್ರೀಶಂಕರಾಚಾರ್ಯರು ಗೀತಾಭಾಷ್ಯದಲ್ಲಿ ಅಲ್ಲಲ್ಲಿ ಭಕ್ತಿಯ ವಿಷಯಕ್ಕೆ ತೋರಿಸಿರುವ ಪರಮಾದರವನ್ನು ಕಂಡವರು ಎಂದಿಗೂ ಭಕ್ತಿಜ್ಞಾನಗಳಲ್ಲಿ ತಾರತಮ್ಯವು ಅವರಿಗೆ ಇಷ್ಟವಲ್ಲವೆಂಬು

ದನ್ನು ಮನಗಾಣಬಹುದು. ಈ ವಿಷಯಕ್ಕೆ ಅವರ ಪರಮಸಿದ್ಧಾಂತವನ್ನು ಇಷ್ಟರಲ್ಲಿಯೇ ಸ್ಫುಟಗೊಳಿಸುವೆವು. ಪ್ರಕೃತದಲ್ಲಿ ಒಂಬತ್ತನೆಯ ಅಧ್ಯಾಯದ ಮೊದಲನೆಯ ಶ್ಲೋಕದತ್ತ ಮನಸ್ಸನ್ನು ಹೊರಳಿಸೋಣ :

ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥
ಗೀ. ೯-೧

ಎಂಟನೆಯ ಅಧ್ಯಾಯದಲ್ಲಿ ನಿರ್ಗುಣೋಪಾಸಕರು ನಾಡೀದ್ವಾರದಿಂದ ಉತ್ತರಾಯಣಮಾರ್ಗವನ್ನನುಸರಿಸಿ ಬ್ರಹ್ಮಲೋಕದಲ್ಲಿ ವಿವಿಧವಾದ ಸಾತ್ತ್ವಿಕಕಾಮಗಳ ಫಲವನ್ನು ಅನುಭವಿಸಿ ಕಲ್ಪಾಂತದಲ್ಲಿ ಜ್ಞಾನದ್ವಾರದಿಂದ ಕ್ರಮಮುಕ್ತಿಯನ್ನು ಪಡೆಯುತ್ತಾರೆ- ಎಂಬುದನ್ನು ವರ್ಣಿಸಿದೆ. ಆದರೆ ಬ್ರಹ್ಮಪ್ರಾಪ್ತಿಗೆ ಇದೊಂದೇ ಪ್ರಕಾರವೆಂದು ಯಾರಾದರೂ ಶಂಕಿಸಬಹುದೆಂದು ಇಲ್ಲಿ ಜ್ಞಾನವಿಜ್ಞಾನಗಳನ್ನೂ ಅವುಗಳಿಂದ ಈ 'ಜನ್ಮದಲ್ಲಿಯೇ ಮುಕ್ತರಾಗಬಹುದೆಂಬುದನ್ನೂ ತಿಳಿಯಪಡಿಸುವ ಪಕ್ಕಿಂದು 'ಇದಂ ತು' (ಆದರೆ ಇದನ್ನು....) ಎಂದು ಪ್ರಾರಂಭಿಸಿರುತ್ತಾನೆ.

ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ಗೀ.೯-೨

ಈ ಜ್ಞಾನವಿಜ್ಞಾನಗಳ ತತ್ತ್ವವು ವಿದ್ಯೆಗಳಲ್ಲೆಲ್ಲ ರಾಜನು, ರಹಸ್ಯಗಳಲ್ಲೆಲ್ಲ ರಹಸ್ಯವಾದದ್ದು; ಈಗಲೇ ಇಲ್ಲಿಯೇ ಅನುಭವಕ್ಕೆ ತಂದುಕೊಳ್ಳಬಹುದಾದದ್ದು. ಧರ್ಮಕ್ಕೆ ಹೊಂದಿಕೊಂಡೇ ಇರತಕ್ಕದ್ದು. ರತ್ನಪರೀಕ್ಷೆಯೇ ಮುಂತಾದವುಗಳ ಜ್ಞಾನದಂತೆ, ದೇಹಾಯಾಸವೇನೂ ಇಲ್ಲದೆಯೇ ಸುಲಭವಾಗಿ ಪಡೆದುಕೊಳ್ಳಬಹುದಾದದ್ದು; ಅವ್ಯಯವಾದ ಅನಂತಸ್ಥಿರಫಲವುಳ್ಳದ್ದು- ಎಂದು ಈ ಜ್ಞಾನವನ್ನು ಭಗವಂತನು ಕೊಂಡಾಡಿರುತ್ತಾನೆ.

ಭಾವನಾರೂಪವಾದ ಉಪಾಸನೆಗೂ ಇಲ್ಲಿ ಹೇಳಿರುವ ಜ್ಞಾನಕ್ಕೂ ಇರುವ ವೈಲಕ್ಷಣ್ಯವೇನೆಂದರೆ: ಉಪಾಸನೆಯು ಮಾನಸಕರ್ಮವಾದ್ದರಿಂದ ಮಾಡುವದು, ಬಿಡುವದು, ಬೇರೆಯ ರೀತಿಯಲ್ಲಿಯೇ ಮಾಡುವದು- ಎಂಬ ವಿಕಲ್ಪಗಳಿಗೆ ಅವಕಾಶವನ್ನು ಕೊಡುವಂಥದ್ದು; ಏಕೆಂದರೆ ಅದು ಕರ್ತೃತಂತ್ರ, ಮಾಡುವವನ ಇಚ್ಛಾಪ್ರಯತ್ನಗಳಿಗೆ ಅನುಗುಣವಾಗಿ ಸಿದ್ಧಿಸತಕ್ಕದ್ದು. ಆದರೆ ವಿಜ್ಞಾನವು ವಸ್ತುತಂತ್ರವು. ಏಕೆಂದರೆ ಅದು ಅನುಭವರೂಪವಾಗಿರುತ್ತದೆ. ಸ್ವತಂತ್ರವಾಗಿರುವ ವಸ್ತುತತ್ತ್ವಕ್ಕೆ ಅನುಗುಣವಾಗಿ ಆಗುವ ಅರಿವೇ ಅದು. ದೊರೆಕ್ಕೆ ಕಾವಿಯನ್ನು ಹೊದೆದುಕೊಂಡು ಕೂತಿರುವ ಯತಿಯನ್ನು ಬೆಂಕಿಯ ರಾಶಿ ಎಂದು ಕಲ್ಪಿಸಿಕೊಳ್ಳುವದು ಕರ್ತೃತಂತ್ರವಾದ ಭ್ರಾಂತಿ; ಆದರೆ ಬೆಂಕಿಯೇ ಉರಿಯುತ್ತಿದ್ದರೆ ಅದನ್ನು

ಬೆಂಕಿಯು ಉರಿ—ಎಂದು ಭಾವಿಸುವದು ಕರ್ತೃತಂತ್ರವಲ್ಲ: ವಸ್ತುವಿಗೆ ಅನುಸಾರವಾಗಿ ಆಗುವ ಜ್ಞಾನವದು. ಭಗವಂತನು ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ್ದರಿಂದ ಅವನ ವಿಷಯಕ್ಕೆ ಆಗುವ ಜ್ಞಾನವೂ ಶುದ್ಧಿಕರವಾಗಿದ್ದು, ನಮಗೆ ಸಂಸಾರದ ದುಃಖವನ್ನು ಎಂದೆಂದಿಗೂ ತಪ್ಪಿಸಿ ನಿತ್ಯತೃಪ್ತತ್ವವನ್ನಲ್ಲದೇ ಏಕತ್ವವನ್ನು ಕೊಟ್ಟುಬಿಡತಕ್ಕದ್ದಾಗಿದೆ.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ |**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ||**

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ |**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ||** ಗೀ. ೯-೪,೫

ಭಗವಂತನು ತನ್ನ ತತ್ತ್ವವನ್ನು ಈ ಶ್ಲೋಕಗಳಲ್ಲಿ ಹೊರಗೆಡಹಿರುತ್ತಾನೆ. ಭಗವಂತನೇ ಅವ್ಯಕ್ತರೂಪದಿಂದ ಎಲ್ಲವನ್ನೂ ವ್ಯಾಪಿಸಿಕೊಂಡುಬಿಟ್ಟಿರುತ್ತಾನೆ; ಆ ದೃಷ್ಟಿಯಿಂದ ನೋಡಿದರೆ ಭಗವಂತನಹೊರತು ಏನೂ ಇರುವದೇ ಇಲ್ಲ. ಭಗವಂತನೇ ಎಲ್ಲಾ ಭೂತಗಳನ್ನೂ ಧರಿಸಿರುತ್ತಾನೆ, ಅವನೇ ಅವುಗಳಿಗೆಲ್ಲ ಆಧಾರವಾಗಿರುತ್ತಾನೆ; ಅವನು ಅವುಗಳಲ್ಲಿಲ್ಲ. ಹೇಗೆ 'ಆನೆ' ಎಂಬ ಕಣ್ಣಿಂದ ನೋಡಿದಾಗ ಆನೆಯೇ ಕಾಣುತ್ತಿರುವದೋ ಅದರಲ್ಲಿ ಮೂಲಕಾರಣವಾದ ಕಟ್ಟಿಗೆಯು(ಮರವು) ಕಾಣದೆ ಇರುವದೋ, ಮತ್ತು ಹೇಗೆ ಇದೆಲ್ಲ ಹಾಲುವಾಣದ ಕಟ್ಟಿಗೆಯೇ ಎಂಬ ಕಣ್ಣಿನಿಂದ ನೋಡಿದಾಗ ಅದಕ್ಕಿಂತ ವ್ಯತಿರಿಕ್ತವಾದ ಆನೆ ಎಂಬುದೇ ಇರುವದಿಲ್ಲವೋ—ಹಾಗೆಯೇ ಇದು. 'ಭಗವಂತನೇ ಎಲ್ಲವೂ'— ಎಂಬ ದೃಷ್ಟಿಯಿಂದ ನೋಡಿದಾಗ ಜಗತ್ತಿಲ್ಲ; 'ಜಗತ್ತೇ ಎಲ್ಲವೂ' ಎಂಬ ದೃಷ್ಟಿಯಿಂದ ನೋಡಿದಾಗ ಪರಮಾತ್ಮತತ್ತ್ವವು ಕಾಣಿಸುವದೇ ಇಲ್ಲ. ಈ ಅಭಿಪ್ರಾಯವನ್ನು ಸ್ಫುಟಗೊಳಿಸುವದಕ್ಕಾಗಿ ಭಗವಂತನೇ ಒಂದು ದೃಷ್ಟಾಂತವನ್ನು ಹೇಳಿರುತ್ತಾನೆ.

**ಯಥಾಽಽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ |**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ||** ಗೀ.೯-೬

ವಾಯುವೇ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವದೆಂದು ಮನಸ್ಸಿಗೆ ತಂದುಕೊಂಡಾಗ ಆಕಾಶದ ಇರವೇ ಮನಸ್ಸಿಗೆ ಬರುವದಿಲ್ಲ. ಆದರೂ ಅವಕಾಶವನ್ನು ಕೊಡುವ ಆಕಾಶವಿಲ್ಲದೆ ಹೇಗೆ ವಾಯುವು ಇರಲೇ ಆರದೋ ಹಾಗಯೇ ಭಗವಂತನ ಆಧಾರವಿಲ್ಲದೆ ಯಾವ ಜಗತ್ತೂ ಇರಲಾರದು. ಇನ್ನೂ ಆಕಾಶವೇ ವಾಯುವಿನ ಆಕಾರದಿಂದಲೂ ಕಾಣಿಸಿಕೊಳ್ಳುತ್ತಿದೆಯೇ ಹೊರತು ಅದಕ್ಕಿಂತ ವ್ಯತಿರಿಕ್ತವಾದ ವಾಯುವೆಂಬ ತತ್ತ್ವವೇ ಇಲ್ಲ— ಎಂಬ ವ್ಯಾಪಕದೃಷ್ಟಿಯನ್ನವಲಂಬಿಸಿದರೆ

ಆಕಾಶವೇ ಎಲ್ಲವೂ ಆಗಿಬಿಡುತ್ತದೆ. ಅಲ್ಲವೆ ? ಅದರಂತೆಯೇ ಪರಮಾತ್ಮನೇ ಸಮಸ್ತಜಗತ್ತಿಗೂ ಕಾರಣವಾಗಿದ್ದುಕೊಂಡು ಸಮಸ್ತಜಗತ್ತನ್ನೂ ವ್ಯಾಪಿಸಿಕೊಂಡಿರುತ್ತಾನೆ ಎಂಬ ದೃಷ್ಟಿಯಿಂದ ನೋಡಿದರೆ ಆತನೊಬ್ಬನೇ ಇರತಕ್ಕವನು ; ಆತನಿಗಿಂತ ವ್ಯತಿರಿಕ್ತವಾದ ಜಗತ್ತೆಂಬುದೇ ಇಲ್ಲ– ಎಂಬ ನಿಜವು ಮನಸ್ಸಿನಲ್ಲಿ ಮಿಂಚುವದು. ಹೀಗಿದೆ, ಪರಮಾತ್ಮನ ಮಹಿಮೆ ! ಹೇಗೆ ಹಗ್ಗದಲ್ಲಿ ಹಾವು ಇದೆ, ಇಲ್ಲ– ಎಂಬುದೆರಡೂ ಏಕಕಾಲಕ್ಕೆ ದೃಷ್ಟಿಭೇದದಿಂದ ಸಿದ್ಧವಾಗುವದೋ, ಹಗ್ಗವು ಹಗ್ಗವೇ ಆಗಿ ಎಂದೆಂದಿಗೂ ಹೇಗೆ ಇದ್ದುಕೊಂಡಿರುವದೋ ಹಾಗೆಯೇ ಭಗವತ್ತತ್ತ್ವವನ್ನೂ ಅರಿಯಬೇಕು.

ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ಗೀ. ೯–೭

ಭಗವಂತನಲ್ಲಿ ಹೀಗೆ ಸ್ಥಿತಿಕಾಲದಲ್ಲಿ ಇರುವ ವಿವಿಧವಾದ ಜಗತ್ತು ಕಲ್ಪಾಂತದಲ್ಲಿ ಆವನ ಪ್ರಕೃತಿಯಲ್ಲಿಯೇ ಲಯವಾಗುವದು ; ಮತ್ತೆ ಕಲ್ಪಾದಿಯಲ್ಲಿ ಅವುಗಳ ಸೃಷ್ಟಿಯಾಗುವದು. ಏಳನೆಯ ಅಧ್ಯಾಯದಲ್ಲಿ ಭಗವಂತನಿಗೆ 'ಪರಾ ಪ್ರಕೃತಿ, ಅಪರಾ ಪ್ರಕೃತಿ'– ಎಂದು ಎರಡು ಪ್ರಕೃತಿಗಳಿರುವವು– ಎಂದು ಹೇಳಿತ್ತಷ್ಟೆ ; ಆ ಅಪರಾಪ್ರಕೃತಿಯನ್ನೇ ಇಲ್ಲಿ ಹೇಳಿರುವದು. ಬೆಂಕಿಗೆ ಸುಡುವದು, ಬೆಳಗುವದು– ಎಂಬ ಎರಡು ಪ್ರಕೃತಿಗಳಿರುವದೂ ಅವುಗಳ ನಿಜವು ಬೆಂಕಿಯೇ ಆಗಿರುವದೂ ಹೇಗೋ, ಹಾಗೆಯೇ ಭಗವಂತನ ಪ್ರಕೃತಿಯಿಂದ ಸೃಷ್ಟಿಯಾಗುವದೆಂಬುದೂ ಭಗವಂತನ ಪ್ರಕೃತಿಯಲ್ಲಿಯೇ ಲಯವಾಗುವದೆಂಬುದೂ ಹಾಗೆಯೇ. ಪ್ರಕೃತಿಗೂ ಪ್ರಕೃತಿವಂತನಾದ ಭಗವಂತನಿಗೂ ಯಾವ ಭೇದವೂ ಇಲ್ಲ; ಎಲ್ಲವೂ ಭಗವಂತನೇ. ಹೀಗೆ ಭಗವಂತನು ಅಜ್ಞರ ದೃಷ್ಟಿಯಿಂದ ವ್ಯಕ್ತಾವ್ಯಕ್ತಸ್ವರೂಪನಾಗಿದ್ದುಕೊಂಡಿರುತ್ತಿದ್ದರೂ ತನ್ನ ರೂಪದಿಂದ ಇದ್ದಂತೆಯೇ ಇರುತ್ತಾನೆ.

ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್॥ಗೀ. ೯–೧೧

ಭಗವಂತನು ತಾನು ಇದ್ದಂತೆಯೇ ಇದ್ದು ಎರಡು ಪ್ರಕೃತಿಗಳಿಂದ ಯುಕ್ತನಾಗಿರುವಂತೆ ತೋರುತ್ತಿರುತ್ತಾನೆ; ತನ್ನ ಪ್ರಕೃತಿಯಲ್ಲಿ ಎಲ್ಲವನ್ನೂ ಲಯಮಾಡಿಕೊಂಡು ಮತ್ತೆ ಸೃಷ್ಟಿಮಾಡುತ್ತಿರುವಂತೆ ಕಾಣಿಸಿಕೊಳ್ಳುತ್ತಾನೆ. ಹೀಗೆಯೇ ಮನುಷ್ಯಾಕಾರವನ್ನು ತಳೆದು ವ್ಯವಹರಿಸುತ್ತಿರುವಂತೆ ಕಾಣಿಸಿಕೊಂಡು ತಾನು ಇದ್ದಂತೆಯೇ ಇರುತ್ತಾನೆ.

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ ।
ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಮ್ ॥
ಗೀ. ೭–೨೪

ಎಂದು ಹೇಳಿರುವಂತೆ ಇಲ್ಲಿ ಮನುಷ್ಯರೂಪದಿಂದ ದೇವಕೀದೇವಿಯ ಮಗನೆಂದು ತೋರಿಕೊಂಡು ಸ್ವಪ್ರಕಾಶಮೂರ್ತಿಸ್ವರೂಪ ತನ್ನ ನಿತ್ಯಶುದ್ಧಬುದ್ಧಮುಕ್ತಸ್ವಭಾವ ದಿಂದಲೇ ಇರುತ್ತಾನೆ. ಇವನನ್ನು ತಿಳಿಯದ ಮೂಢರು ಆತನನ್ನು ಜಾರ, ಚೋರ—ಎಂದುಮುಂತಾಗಿ ಹೀಯಾಳಿಸಿ ಅಧೋಗತಿಗೆ ಪಾತ್ರರಾಗುತ್ತಾರೆ. ಹೀಗೆ ಮಾಡುವುದಕ್ಕೆ ಅವರ ಆಸುರೀಪ್ರಕೃತಿಯೇ ಕಾರಣ. ಆದರೆ :

ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥
ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ ।
ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥

ಗೀ. ೯—೧೩, ೧೪

ಆದರೆ ದೈವಪ್ರಕೃತಿಯಿಂದ ಕೂಡಿದ ಜನರು ಆ ಭಗವಂತನನ್ನು ಸಮಸ್ತಚೇತನಾ ಚೇತನರೂಪಜಗತ್ತಿಗೂ ಪರಮಾಧಾರನು, ಆದರೂ ಅವ್ಯಯಸ್ವರೂಪನು ಎಂದರಿತು, ಆತನನ್ನು ಯಾವಾಗಲೂ ಕೀರ್ತನೆಮಾಡುವರು. ಇಂದ್ರಿಯನಿಗ್ರಹ ಅಹಿಂಸಾದಿಗಳನ್ನು ಅನುಷ್ಠಾನಮಾಡುತ್ತಾ ಭಕ್ತಿಯಿಂದ ನಮಸ್ಕರಿಸುತ್ತಲೂ ನಿತ್ಯಯುಕ್ತರಾಗಿ ಉಪಾಸನೆಮಾಡುತ್ತಾರೆ.

ಹೀಗೆ ಶ್ರದ್ಧಾಭಕ್ತಿಗಳಿಂದ ಭಗವಂತನನ್ನು ಉಪಾಸನೆಮಾಡುವವರಿಗೆ ಜ್ಞಾನವಿಜ್ಞಾನಗಳು ಲಭಿಸುವವು. ಅಂಥವರೇ ಕೃತಕೃತ್ಯರಾಗಿ ಸಂಸಾರಬಂಧ ದಿಂದ ಮುಕ್ತರಾಗುವರು.

## ೨೯. ಭಗವಂತನ ವಿಭೂತಿಗಳು

( 26—8—69 )

ಭಗವದ್ಭಕ್ತಿಯಿಂದ ಜ್ಞಾನವಿಜ್ಞಾನಗಳುಂಟಾಗುವವು ಎಂಬುದೇ ವೇದಾಂತ ಸಿದ್ಧಾಂತ. ಆದರೆ ಬಹುಜನರು ತರ್ಕಪ್ರಧಾನವಾದ ಬುದ್ಧಿಯಿಂದಲೇ ವೇದಾಂತ ವನ್ನು ಅರಿತುಕೊಳ್ಳಬಹುದೆಂಬ ವಿಪರೀತಭಾವನೆಯುಳ್ಳವರಾಗಿರುತ್ತಾರೆ. ಇದು ಸರಿಯಲ್ಲವೆಂಬುದನ್ನು ಒತ್ತಿಹೇಳುವುದಕ್ಕಾಗಿಯೇ ನಾನು "ಅನುಭವಗಮ್ಯ ವೇದಾಂತ"ವೆಂಬ ಹೆಸರಿನಿಂದ ಈ ಉಪನ್ಯಾಸಮಾಲಿಕೆಯನ್ನು ಆರಂಭಿಸಿರು ತ್ತೇನೆ. 'ಅನುಭವಗಮ್ಯ' ಎಂಬ ವಿಶೇಷಣದಿಂದ, ಅನುಭವವಲ್ಲದ ಮತ್ತೊಂದು

ಸಾಧನದಿಂದಲೂ ಅರಿತುಕೊಳ್ಳಬಹುದಾದ ವಸ್ತುವೊಂದು ವೇದಾಂತವಿದೆ-ಎಂದು ಕುತರ್ಕವನ್ನು ಮಾಡಬಾರದು. 'ದಕ್ಷಿಣಾಮೂರ್ತಿಶಾಸ್ತ್ರಗಳು' ಎಂಬ ಹೆಸರು ಒಪ್ಪಿರಿಗಿದ್ದರೆ 'ಉತ್ತರಾಮೂರ್ತಿಶಾಸ್ತ್ರ'ಗಳೊಪ್ಪಿರಿರಬೇಕು-ಎಂದು ಊಹಿಸುವ ದೇನೂ ಸರಿಯಾಗಲಾರದಷ್ಟೆ?

ಜ್ಞಾನವಿಜ್ಞಾನಗಳ ಸಂಪಾದನೆಯಾಗುವದಕ್ಕಿಂತ ಮೊದಲು **ಗೌಣಭಕ್ತಿ**ಯ ಸಾಧನವು ಅವಶ್ಯ. ಇದಕ್ಕೆ ಸಹಾಯಕವಾಗಿರಲೆಂದು ವಿಭೂತಿಗಳನ್ನು ತಿಳಿಸುವ ಗೀತೆಯ ಹತ್ತನೆಯ ಅಧ್ಯಾಯವು ಪ್ರಾರಂಭವಾಗಿರುತ್ತದೆ. ಅಲ್ಲಿ ಅರ್ಜುನನು ಭಗವಂತನನ್ನು ಹೀಗೆಂದು ಕೇಳಿರುತ್ತಾನೆ :

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥**
**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥**

ಗೀ. ೧೦-೧೬, ೧೮

ಭಗವಂತನು ಏಳನೆಯ ಅಧ್ಯಾಯದಲ್ಲಿಯೂ ಒಂಬತ್ತನೆಯ ಅಧ್ಯಾಯದಲ್ಲಿಯೂ ವಿಭೂತಿಗಳನ್ನು ಸ್ವಲ್ಪಮಟ್ಟಿಗೆ ಹೇಳಿದ್ದನು. ಆದ್ದರಿಂದ ಅರ್ಜುನನು ಇಲ್ಲಿ 'ನಿನ್ನ ವಿಭೂತಿಗಳನ್ನು ವಿಸ್ತರಿಸಿ ಸಂಪೂರ್ಣವಾಗಿ ಹೇಳು ; ಮತ್ತೂ ಕೇಳ ಬೇಕೆಂಬ ಇಚ್ಛೆಯುಂಟಾಗಿದೆ. ಎಷ್ಟು ಕೇಳಿದರೂ ನನಗೆ ತೃಪ್ತಿಯಾಗುವಂತಿಲ್ಲ' ಎಂದಿರುತ್ತಾನೆ. ಇದನ್ನು ಅರ್ಜುನನು ಕೇಳಿರುವದು ಕೇವಲ ಕುತೂಹಲ ದಿಂದಲ್ಲ. ಭಗವಂತನನ್ನು ಯಾವಾಗಲೂ (ಸದಾ) ಎಲ್ಲೆಲ್ಲಿಯೂ ಚಿಂತಿಸುತ್ತಾ (ಪರಿಚಿನ್ತಯನ್) ಆತನ ಮಹಿಮೆಯನ್ನು ಹೇಗೆ ಅರಿತುಕೊಂಡೇನು (ಕಥಂ ವಿದ್ಯಾಮ್)? ಯಾವಯಾವ ವಸ್ತುಗಳಲ್ಲಿ ಭಗವಂತನನ್ನು ನಾನು ಚಿಂತಿಸ ಬೇಕು? (ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ) (೧೦-೧೭) ಎಂಬ ತವಕದಿಂದ ಕೇಳಿದ ಪ್ರಶ್ನೆಯಿದು. 'ಶ್ರೀಕೃಷ್ಣನೂ ಅರ್ಜುನನೂ ನರ ನಾರಾಯಣರ ಅವತಾರರೂಪದವರು ; ಅವರ ಸಂವಾದರೂಪದಿಂದ ವ್ಯಾಸರು ಬರೆದಿರುವ ಈ ಗ್ರಂಥವು ಲೋಕಾನುಗ್ರಹಕ್ಕಾಗಿ ಬರೆದದ್ದು. ಇದನ್ನು ವೃತ್ತಾಂತಪತ್ರಿಕೆಗಳಂತೆ ಓದಿ ಆತ್ತ ಎಸೆಯುವದಕ್ಕಾಗುವದಿಲ್ಲ'-ಎಂಬ ಭಾವನೆ ನಮಗೆ ಬರಬೇಕು. ಜಗತ್ತೆಲ್ಲವೂ ಭಗವಂತನಿಂದಲೇ ಬಂದಿರುವದು ; ಆವನ ವೇಷಾಂತರವೇ ಇದು-ಎಂಬ ದೃಢವಾದ ನಂಬಿಕೆಯಿಂದ ಈ ಗ್ರಂಥವನ್ನು ಓದಿ ದರೆ ವಿಭೂತಿಗಳ ವಿವರಣೆಯ ಬೆಲೆಯು ನಮಗೆ ಗೊತ್ತಾದೀತು. ಈ ಗೌಣ ಭಕ್ತಿಯಿಂದಲೇ ನಾವು ಕೇವಲ ಭೌತಿಕದೃಷ್ಟಿಯನ್ನು ತ್ಯಜಿಸಿ ಒಳಗಿರುವ ತಿರುಳನ್ನು ನೋಡುವದಕ್ಕೆ ಶಕ್ತರಾಗುವೆವು.

'ವಿಭೂತಿ' ಎಂದರೆ ವಿಶಿಷ್ಟ (ಅಸಾಧಾರಣ)ವಾದ ಆಕಾರವಿಶೇಷವು. ಭಗವಂತನು ಯಾವಯಾವ ವಸ್ತುವಿನಲ್ಲಿ ಯಾವಯಾವ ಗುಣವಿಶೇಷದಿಂದ ಪ್ರಕಟನಾಗಿರುತ್ತಾನೋ ಅದನ್ನು ತಿಳಿಸಿಕೊಡುವ ಪವಿತ್ರವೃತ್ತವು. ಪಂಚಭೂತಗಳಲ್ಲಿ ಯಾವಯಾವ ಹೆಚ್ಚಿನ ಯೋಗ್ಯತೆಯನ್ನು ಕಾಣುವೆವೋ ಅದೆಲ್ಲವೂ ಭಗವಂತನ ವಿಭೂತಿಯನ್ನೇ ಪ್ರಕಟಿಸುತ್ತಿರುವದು. ಸಾಯಂಕಾಲದಲ್ಲಿ ನದಿಯ ದಂಡೆಗೆ ಹೋಗಿ ಕುಳಿತಾಗ, ಅಥವಾ ಸಮುದ್ರದ ದಂಡೆಯಲ್ಲಿ ಕುಳಿತು ವಿಶಾಲವಾದ ಜಲಾಶಯದ ಸೊಬಗನ್ನು ಅನುಭವಿಸುವಾಗ, ಉನ್ನತವಾದ ಒಂದು ಗುಡ್ಡದ ಮೇಲುಗಡೆಯಿಂದುಕೊಂಡು ಸುತ್ತಲೂ ನೋಡುವಾಗ ನಾವು ಯಾವಯಾವ ಪ್ರಕೃತಿಸೌಂದರ್ಯವನ್ನು ಕಂಡು ಬೆರಗಾಗುವೆವೋ ಅದೆಲ್ಲ ಭಗವಂತನ ವಿಭೂತಿಯೇ. ಆಗ ಭಗವಂತನ ಸ್ಮರಣೆಯೇ ಆದರೆ ಸಾಕು, ಸಂಸಾರಬಂಧವು ಸಡಿಲವಾಗುವದು.

ನಮಗೆ ಭಗವಂತನು ಅನುಗ್ರಹಿಸಿರುವ ಪಂಚೇಂದ್ರಿಯಗಳ ಸದುಪಯೋಗವೆಂದರೆ ಆತನ ವಿಭೂತಿಗಳನ್ನು ನೋಡಿ ಆತನ ಮಹಿಮೆಯನ್ನು ಅನುಭವಿಸಿ ಸುಖಿಸುವದೇ. ಹೆಚ್ಚಿನ ಬಾಯಾರಿಕೆಯಾಗಿರುವವನಿಗೆ ತಣ್ಣೀರು ಎಷ್ಟು ರುಚಿಯಾಗಿರುವದೋ ಹಾಗೆ ಭಕ್ತಿಪೂರ್ವಕವಾಗಿ ಬಾಹ್ಯಜಗತ್ತಿನಲ್ಲಿರುವ ವಸ್ತುಗಳಲ್ಲಿ ಭಗವದ್ವಿಭೂತಿಯನ್ನು ಕಂಡುಕೊಳ್ಳುವ ಅನುಭವದಿಂದ ಜಗತ್ತಿನ ತತ್ತ್ವವೇ ಬೇರೆಯಾಗಿ ಮನಶ್ಶಾಂತಿಗೆ ಕಾರಣವಾಗಿಬಿಡುತ್ತದೆ.

ಅರ್ಜುನನಂತೆ ಕುತೂಹಲವುಳ್ಳವರಿಗೇ ಭಗವದ್ವಿಭೂತಿಗಳ ವಿವರವು ರುಚಿಸುವದು. ಭಗವಂತನು ಹೇಳಿರುವದನ್ನು ಈಗ ಕೇಳೋಣ :

ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥
ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥
ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥
ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।
ಇನ್ದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥
ರುದ್ರಾಣಾಂ ಶಙ್ಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥

ಗೀ. ೧೦-೨೩ ರಿಂದ ೨೩

ಭಗವಂತನು, 'ಒಳ್ಳೆಯದು, ಪ್ರಾಧಾನ್ಯವಾಗಿ ನನ್ನ ವಿಭೂತಿಗಳನ್ನು ಹೇಳು ವೆನು ಕೇಳು. ಅವುಗಳನ್ನು ವಿಸ್ತರಿಸಲಾಗುವದಿಲ್ಲ' ಎಂದು ಮುಖ್ಯವಾದ ಕೆಲವು ವಿಭೂತಿಗಳನ್ನು ಹೇಳಿರುತ್ತಾನೆ. ಪ್ರತಿಯೊಂದು ವಸ್ತುವಿನಲ್ಲಿಯೂ ಭಗವಂತನ ವಿಭೂತಿಯಿದ್ದೇ ಇರುತ್ತದೆ. ಯಾವ ವಸ್ತುವಿನ ಹೆಚ್ಚುಗಾರಿಕೆಯನ್ನು ಹೆಚ್ಚೆನ್ನೋಣ, ಯಾವದನ್ನು ಕಡಿಮೆಯೆನ್ನೋಣ? ಪ್ರಕೃತಿಯ ಸೌಂದರ್ಯ ವನ್ನು ನೋಡಿದರೆ ಮನಸ್ಸಿಗೆ ಎಂಥ ಆನಂದವಾಗುತ್ತಿರುತ್ತದೆ! ಕಾಡಿನಲ್ಲಿ ತನ್ನ ರೆಕ್ಕೆಯನ್ನು ಬಿಚ್ಚಿಕೊಂಡು ವೈಯಾರದಿಂದ ನಡೆಯುತ್ತಿರುವ ನವಿಲನ್ನು ಮನಸ್ಸಿಗೆ ತಂದುಕೊಳ್ಳಿ: ಎಂಥ ಚಿತ್ರಗಾರನುತಾನೆ ಅಂಥ ಅದರ ಸೌಂದರ್ಯ ವನ್ನು ಅನುಕರಿಸಲಾಪನು? ಸಿಂಹದ ಗರ್ಜನೆಯನ್ನು ಏನೆನ್ನೋಣ! ತಾಯಿ ಸಿಂಹಕ್ಕೆ ಮರಿಯು ಎಷ್ಟು ಮುದ್ದು! ಒಂದು ವಸ್ತುವನ್ನು ಕಂಡರೆ ಒಬ್ಬನಿಗೆ ಹಿಗ್ಗು, ಮತ್ತೊಬ್ಬನಿಗೆ ದುಃಖ; ಹೀಗಿರುವದರಿಂದ ವಿಭೂತಿಯನ್ನು ನೋಡು ವದಕ್ಕೆ ಕಣ್ಣುಬೇಕೆನ್ನಬೇಕೇ ಹೊರತು ವಿಭೂತಿಗಳನ್ನು ಹುಡುಕಿಕೊಂಡುಹೋಗ ಬೇಕಾಗಿರುವದಿಲ್ಲ. ಒಮ್ಮೆ ರೈಲಿನಲ್ಲಿ ನಾವು ಪ್ರಯಾಣಮಾಡುತ್ತಿದ್ದಾಗ ಒಬ್ಬ ಹರಿಜನರ ಹುಡುಗ ಅದೇ ಗಾಡಿಯಲ್ಲಿ ಕುಳಿತಿದ್ದ. ಅಲ್ಲಿ ಕೂತಿದ್ದ ಮೇಲುಜಾತಿ ಯವರು ಕೆಲವರು ಅವನು ಅಂತ್ಯಜನೆಂಬ ನಿಮಿತ್ತದಿಂದ ಮನಸ್ಸಿಗೆ ಸಂಕೋಚ ವನ್ನು ಮಾಡಿಕೊಂಡು ಮುದುರಿಕೊಂಡು ಕುಳಿತಿದ್ದರು. ಆ ಹೊತ್ತಿನಲ್ಲಿಯೇ ಬೆಂಗಳೂರಿನಲ್ಲಿ ಕೊಲಿಜಿಯೇಟು ಹೈಸ್ಕೂಲಿನ ಹೆಡ್‌ಮಾಸ್ತರಾಗಿದ್ದ ಕೆ. ಎ. ಕೃಷ್ಣಸ್ವಾಮಿ ಅಯ್ಯರವರು ಆ ಹುಡುಗನ ಕಣ್ಣುಹರಳು ನೀಲಿಯ ಕಲ್ಲುಗಳಂತೆ ಥಳಗುಟ್ಟುತ್ತಿದ್ದದ್ದನ್ನು ಕಂಡು 'ಎಲಾ ಕಣ್ಣುಮುಚ್ಚಿಕೊಳ್ಳೋ, ಎಲ್ಲಿಯಾದ ರೂ ದೃಷ್ಟಿ ತಾಕೀತು! ನೋಡಿದಿರಾ, ಭಗವಂತನು ಇವನಿಗೆ ಎಂಥ ದಿವ್ಯ ಸುಂದರವಾದ ಕಣ್ಣುಗಳನ್ನು ಅನುಗ್ರಹಿಸಿರುತ್ತಾನೆ!' ಎಂದರು. ಆಗ ನಾವು 'ಆಹ! ನಿಜ, ಇಲ್ಲಿಯೇ ನಮ್ಮ ಎದುರಿಗೆ ಇದ್ದ ಈ ಕಣ್ಣುಗಳ ಸೌಂದರ್ಯ ವನ್ನು ನಾವು ಲಕ್ಷಿಸಿರಲಿಲ್ಲವಲ್ಲ!' ಎಂದು ನಾಚಿಕೊಂಡೆವು. ರಸ್ತೆಯಲ್ಲಿ ಒಬ್ಬರು ಸಾಧುಗಳು ಶಿಷ್ಯರೊಡನೆ ಹೋಗುತ್ತಿದ್ದಾಗ ದಾರಿಗೆ ಅಡ್ಡಲಾಗಿ ಬಿದ್ದಿದ್ದ ಒಂದು ಸತ್ತ ಕರಿಯ ನಾಯಿಯನ್ನು ಕಂಡು ಅದರ ಕೊಳೆತ ಮೈನಾತಕ್ಕೆ ಎಲ್ಲರೂ ಮೂಗನ್ನು ಮುಚ್ಚಿಕೊಳ್ಳುತ್ತಿದ್ದರು; ಆದರೆ ಆ ಮಹಾತ್ಮರು 'ನೋಡಿದಿರಾ, ಈ ಪ್ರಾಣಿಯ ಶುಭ್ರವಾದ ಹಲ್ಲುಗಳನ್ನು! ಎಂಥ ವಜ್ರವುತಾನೆ ಹೀಗೆ ಥಳ ಗುಟ್ಟೀತು!' ಎಂದರಂತೆ!

ಸರಿಯಾದ ದೃಷ್ಟಿಯಿರುವ ಮಹಾತ್ಮರಿಗೆ ಸಂಪೂರ್ಣವಾದ ಜಗತ್ತೇ ನಂದನ ವನವಾಗಿರುತ್ತದೆ; ಎಲ್ಲಾ ಮರಗಳೂ ಕಲ್ಪದ್ರುಮವಾಗಿರುತ್ತವೆ. ನೀರಿನ ಪ್ರವಾಹಗಳೆಲ್ಲ ಗಂಗಾಜಲವೇ; ಮಾಡುವ ಕೆಲಸಗಳೆಲ್ಲ ಪುಣ್ಯಕರ್ಮಗಳೇ;

ಪ್ರಾಕೃತದ ಮತ್ತು ಸಂಸ್ಕೃತದ ವಾಕ್ಯಗಳಿಗೆ ವೇದವಾಕ್ಯಗಳೇ: ಇದಿರು ಭೂಮಿಯೇ ವಾರಾಣಸಿಯಾಗಿರುತ್ತದೆ. ಪರಬ್ರಹ್ಮವನ್ನು ಕಂಡುಕೊಂಡವನಿಗೆ ಸರ್ವವಸ್ತುಗಳೂ ಪರತತ್ತ್ವವೇ—ಎಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಭಗವಂತನ ವಿಭೂತಿ ಎಲ್ಲಿದೆ, ಎಲ್ಲಿಲ್ಲ? ಯಾವುದು ವಿಭೂತಿ, ಯಾವುದಲ್ಲ?

ಭಗವಂತನು ತನ್ನ ವಿಭೂತಿಗಳನ್ನು ಹೇಳುವದಕ್ಕೆ ತೊಡಗುವಾಗ ಹೇಳಿದ್ದು ಇದು: 'ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಪ್ರಾಣಿಗಳ ಹೃದಯದೊಳಗೆ ಇರುತ್ತಿರುವ ಆತ್ಮನೇ ನಾನು—ಎಂದು ತಿಳಿಯಬೇಕು. ಇದು ಆಗದವನು ಮುಂದೆ ಹೇಳುವ ವಿಭೂತಿಗಳನ್ನಾದರೂ ಧ್ಯಾನಿಸಲಿ! ಈ ಜಗತ್ತಿಗೆ ಆದಿ, ಅಂತ, ಮಧ್ಯ—ಎಲ್ಲವೂ ನಾನೇ!' ಈ ಒಂದು ಉಪದೇಶದ ಸಾರವನ್ನು ಮನಸ್ಸಿನಲ್ಲಿ ಹೊರಳಾಡಿಸಿದರೆ ಸಾಕು. ನಮಗೆ ಯಾವ ಪ್ರಾಣಿಗಳನ್ನು ಕಂಡರೂ ಯಾವ ವನಸ್ಪತಿಗಳನ್ನು ಕಂಡರೂ ಯಾವ ಪಕ್ಷಿಮೃಗಾದಿಗಳನ್ನು ಕಂಡರೂ, ಯಾವ ಮನುಷ್ಯನನ್ನು ಕಂಡರೂ ಅಲ್ಲೆಲ್ಲ ಭಗವಂತನೇ ಇದ್ದುಕೊಂಡಿರುತ್ತಾನೆ—ಎಂಬ ಭಾವನೆ ಬಂದರೆ ಆಗ ನಮ್ಮ ಹೃದಯದ ದೋಷಗಳೆಲ್ಲ ಹೋಗಿಬಿಟ್ಟಾವು; ಭಗವಂತನೇ ನಮ್ಮ ಆತ್ಮನೆಂಬ ಜ್ಞಾನವೇ ನೇರಾಗಿ ಆಗಿಬಿಟ್ಟೀತು!

ಆದಿತ್ಯರು, ಜ್ಯೋತಿಗಳು, ಮರುತ್ತರು, ನಕ್ಷತ್ರಗಳು, ವೇದಗಳು, ದೇವತೆಗಳು ಮತ್ತು ಇಂದ್ರಿಯಗಳು—ಇವುಗಳಲ್ಲೆಲ್ಲ ಒಂದೊಂದು ಪ್ರಧಾನವಾದ ವಿಭೂತಿಯನ್ನು ಭಗವಂತನು ಹೇಳಿರುವದು ಅವುಗಳು ಮಾತ್ರ ವಿಭೂತಿಗಳೆಂಬ ಅಭಿಪ್ರಾಯದಿಂದಲ್ಲ; ಒಂದೊಂದು ಮುಖ್ಯವಾದ ವಿಭೂತಿಯಲ್ಲಿ ಭಗವದ್ಬುದ್ಧಿಯನ್ನು ಸಂಪಾದಿಸಿಕೊಂಡರೆ, ಮುಂದೆ ಎಲ್ಲೆಲ್ಲಿಯೂ ಭಗವಂತನನ್ನೇ ಕಾಣಬಹುದು—ಎಂಬ ಭಾವದಿಂದ.

ಅರೋಚಕದಿಂದ ನರಳುತ್ತಿರುವವರ ನಾಲಗೆಗೆ ರುಚಿಯು ಕಾಣಿಸದಿರುವಂತೆ ನಮ್ಮ ಇಂದ್ರಿಯಗಳಿಗೂ ಮನಸ್ಸಿಗೂ ಭಗವಂತನ ವಿಭೂತಿಗಳು ಎಲ್ಲಿಯೂ ಕಾಣಿಸುತ್ತಿಲ್ಲ. ಮೊದಮೊದಲು ಮುಖ್ಯವಾದ ವಿಭೂತಿಗಳನ್ನು ಗುರುತಿಸುವದನ್ನು ಅಭ್ಯಾಸಮಾಡಬೇಕು. ಆಗ ಎಲ್ಲವೂ ಭಗವದ್ವಿಭೂತಿಯೇ—ಎಂಬುದು ಮನದಟ್ಟಾಗುವದು.

**ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥**

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್ ॥**

ಗೀ. ೧೦—೪೦, ೪೧

ಅಷ್ಟರಿಂದ ಭಗವಂತನು ಹೇಳುತ್ತಿರುವದೇನೆಂದರೆ, 'ಅರ್ಜುನ, ನನ್ನ ದಿವ್ಯವಾದ ವಿಭೂತಿಗಳಿಗೆ ಕೊನೆಯೆಂಬುದಿಲ್ಲ. ಇಗೊ, ಅದರಲ್ಲಿ ಒಂದು ಭಾಗವನ್ನು ಮಾತ್ರ ನಿನಗೆ ತಿಳಿದಿರಲಿ ಎಂದು ಹೇಳಿರುತ್ತೇನೆ. ಸಾಮಾನ್ಯವಾಗಿ ನೀನು ತಿಳಿದಿರಬೇಕಾದ ನಿಯಮವಿದು : ಲೋಕದಲ್ಲಿ ಯಾವಯಾವದರಲ್ಲಿ ವಿಶೇಷವು ಕಾಣುತ್ತಿರುವದೋ, ಕಾಂತಿಯುಕ್ತವಾಗಿ, ಅಥವಾ ಶ್ರೀಮಂತವಾಗಿ ಕಾಣುತ್ತಿರುವದೋ, ಉತ್ಸಾಹೋಪೇತವಾಗಿದೆಯೋ, ಅವದನ್ನೇ ನಾನು ಎಂದು ಚಿಂತಿಸುತ್ತಾ ಹೋಗು. ಅದೆಲ್ಲವೂ ನನ್ನ ತೇಜಸ್ಸಿನ ಒಂದಂಶದಿಂದ ಆಗಿದೆಯೆಂದು ಭಾವಿಸಬೇಕೆಂಬುದೇ ವಿಭೂತ್ಯುಪದೇಶದ ಸಾರ'–ಎಂದು ಹೇಳಿದಬಳಿಕ, ಇನ್ನೂ ಸಾರತರವಾದ ವಿಷಯವೊಂದನ್ನು ಒಂದು ವಾಕ್ಯದಲ್ಲಿ ಸಂಗ್ರಹಿಸಿ ನುಡಿದನೇನೆಂದರೆ :

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ |**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ||**

ಗೀ. ೧೦–೪೨

'ಅಥವಾ ಹೀಗೆ ಬೇರೆಯಾಗಿ ಎಷ್ಟು ವಿಸ್ತರಿಸಿ ತಿಳಿದುಕೊಂಡರೆತಾನೆ ಏನಾಯಿತು ? ಈಗ ಒಂದೇ ವಾಕ್ಯದಿಂದ ಹೇಳಬೇಕಾದರೆ , ಕೇಳು : ಈ ಇಡಿಯ ಜಗತ್ತೆಲ್ಲವನ್ನೂ ಹಿಡಿದೆತ್ತಿಕೊಂಡು ನನ್ನ ಏಕಾಂಶದಿಂದ ಆ ರೂಪದಿಂದ ನಾನು ಹೊರತೋರಿಕೊಂಡಿರುವೆನು'– ಎಂದರೆ ಜಗತ್ತಿನಲ್ಲಿರುವ ಭೂತಗಳೆಲ್ಲವೂ ಹಾಗಪಾಲಾದರೆ ಇದಕ್ಕಿಂತ ಹೆಚ್ಚಿನದಾದ ಮುಪ್ಪಾಗಪಾಲು ತನ್ನ ಕೂಟಸ್ಥ ರೂಪದಿಂದ ಹಾಗೆಯೇ ನಿತ್ಯಸಿದ್ಧವಾಗಿರುತ್ತಿರುವದು !'

ಈ ಉಪದೇಶವನ್ನು ಮನದಂದುಕೊಂಡು ವಿಭೂತ್ಯುಪಾಸನೆಯನ್ನು ಮಾಡಿ ಕೃತಕೃತ್ಯರಾಗಬೇಕು.

# ೩೦. ಭಗವಂತನ ವಿಶ್ವರೂಪ

( 28—8—69 )

ಭಗವಂತನ ವಿಭೂತಿಯ ವಿಷಯವನ್ನು ಪ್ರಸ್ತಾಪಿಸಿದ್ದೇಕೆ ?– ಎಂಬುದನ್ನೀಗ ವಿಚಾರಮಾಡಬೇಕಾಗಿರುತ್ತದೆ. ಆರನೆಯ ಅಧ್ಯಾಯದಲ್ಲಿ ಧ್ಯಾನಯೋಗವೆಂಬ ಉಪಾಯದಿಂದ 'ಆತ್ಮನು ಸರ್ವಭೂತಗಳಲ್ಲಿಯೂ ಇರುತ್ತಾನೆ. ಸರ್ವಭೂತಗಳೂ ನಿಜವಾಗಿ ಆತ್ಮನಲ್ಲಿಯೇ ಇರುತ್ತವೆ' ಎಂಬ ಜ್ಞಾನವನ್ನು ಸಂಪಾದಿಸಬಹುದು ಎಂದು ತಿಳಿಸಿದ್ದಾಯಿತು. ಧ್ಯಾನಯೋಗವನ್ನು ಭಗವಂತನಲ್ಲಿಯೇ ಆಸಕ್ತವಾದ ಮನಸ್ಸಿನಿಂದ ಆತನನ್ನೇ ಆಶ್ರಯಿಸಿಕೊಂಡು ಮಾಡುತ್ತಿದ್ದರೆ ಭಗವಂತನನ್ನು ಸಂಶಯವಿಲ್ಲದೆ ಸಮಗ್ರನಾಗಿ ಅರಿತುಕೊಳ್ಳಬಹುದು– ಎಂಬುದನ್ನು ತಿಳಿಯಿಸಿ ಭಗವಂತನ ಪರಾಪರಪ್ರಕೃತಿಗಳನ್ನೂ ಅವುಗಳ ದ್ವಾರದಿಂದ ಭಗವಂತನು ಜಗತ್ತಿನ ಜನ್ಮಾದಿಗಳಿಗೆ ಕಾರಣಭೂತನೆಂಬುದನ್ನೂ ತಿಳಿಸಿದ್ದಾಯಿತು. ಇಡಿಯ ಜಗತ್ತಿಗೇ ಭಗವಂತನು ಮೂಲಕಾರಣನಾಗಿರುವುದರಿಂದ ಜಗತ್ತೆಲ್ಲವೂ ಭಗವನ್ಮಯವೆಂಬುದು ಸ್ವತಃಸಿದ್ಧವಾದರೂ ಜ್ಞಾನಸ್ತುತಿಗಾಗಿ ಏಳು, ಒಂಬತ್ತು–ಈ ಅಧ್ಯಾಯಗಳಲ್ಲಿ ಭಗವಂತನ ಕೆಲವು ವಿಭೂತಿಗಳನ್ನು ಬಣ್ಣಿಸಿದ್ದನ್ನು ಕೇಳಿದ ಅರ್ಜುನನು 'ನಿನ್ನನ್ನು ನಾನು ಯಾವಯಾವ ರೂಪದಿಂದ ಚಿಂತಿಸಲಿ ? ಹೇಳು' ಎಂದು ಕೇಳಿಕೊಂಡದ್ದರಿಂದ ಅವನ ನಿಮಿತ್ತದಿಂದ ಲೋಕಕ್ಕೆಲ್ಲ ಉಪಕಾರವಾಗಲೆಂದು ಭಗವಂತನು ಜ್ಞಾನವಿಜ್ಞಾನಗಳಿಗೆ ಸಾಧಕವಾದ ಕೆಲವು ಉಪಾಸ್ಯವಿಭೂತಿಗಳನ್ನು ತಿಳಿಸಿದನು. ಕುರುಡನಾದವನು ಕೆಲವು ಹೆಜ್ಜೆಗಳನ್ನು ಮುಂದುಮುಂದಕ್ಕೆ ಇಟ್ಟು 'ಇಷ್ಟು ಹೊತ್ತಿಗೆ ನಾನು ಕಾಶಿಗೆ ತಲುಪಿರಬಹುದು' ಎಂದು ಊಹಿಸುವಂತೆ ಆಗಬಾರದೆಂದು ಭಗವಂತನು ಜಗತ್ತಿನಲ್ಲಿರುವ ಪ್ರಧಾನವಿಭೂತಿಗಳಲ್ಲಿ ಕೆಲವನ್ನು ಮಾತ್ರ ನಾನು ಹೇಳಿರುತ್ತೇನೆ; ನಿಜವಾಗಿ ನೀನು ಇಲ್ಲಿ ತಿಳಿಯಬೇಕಾದದ್ದೇನೆಂದರೆ 'ಇಡಿಯ ವಿಶ್ವವೇ ನಾನು, ಹೀಗೆಂದು ನನ್ನನ್ನು ಉಪಾಸನೆಮಾಡು'– ಎಂದು ಉಪದೇಶವನ್ನು ಉಪಸಂಹಾರಮಾಡಿರುತ್ತಾನೆ. ಈಗ ವಿಭೂತಿಯ ಅಂಶವನ್ನೇ ಮನಗಾಣದವನಿಗೆ ಜ್ಞಾನವಿಜ್ಞಾನಗಳ ಸುದ್ದಿ ಎತ್ತಣದು ?– ಎಂಬುದನ್ನು ತಿಳಿಯಿಸುವುದಕ್ಕಾಗಿ ಭಗವಂತನು ಕೃತ್ಸ್ನವಿಭೂತಿಯಾದ ವಿಶ್ವರೂಪದ ವಿಚಾರಕ್ಕೆ ಶ್ರೋತೃಗಳನ್ನು ತಂದು ನಿಲ್ಲಿಸಿರುತ್ತಾನೆ. ಭಗವಂತನು 'ನಾನು ನನ್ನ ಒಂದಂಶದಿಂದ ಜಗದ್ರೂಪನಾಗಿ ಹೊರತೋರಿಕೊಂಡಿರುವೆನು' ಎಂದಿರುವಲ್ಲಿ ಒಂದಂಶವೆಂಬ ಶಬ್ದವು ಬಹಳ ಮುಖ್ಯವಾಗಿರುತ್ತದೆ. ಏಕೆಂದರೆ ವಿಶ್ವವೆಲ್ಲವೂ ಭಗವಂತನ ಒಂದಂಶ–ಎಂಬುದನ್ನು ಮನವರಿಕೆಮಾಡಿಕೊಂಡರೆ ನಮಗೆ ನಮ್ಮ ಅಲ್ಪತ್ವವು

ಮನಸ್ಸಿನಲ್ಲಿ ಮಿಂಚುವದು; ಅರ್ಜುನನಿಗಂತೂ ಈ ವಾಕ್ಯದಿಂದ ರೋಮಾಂಚನ ಆಗಿರಬೇಕು. 'ವೃಷ್ಣಿಗಳಲ್ಲಿ ವಾಸುದೇವನು ನಾನು, ಪಾಂಡವರಲ್ಲಿ ಧನಂಜಯನು ನಾನು' ಎಂದು ಶ್ರೀಕೃಷ್ಣನು ಹೇಳಿದಾಗ ಶ್ರೀಕೃಷ್ಣನು ನನ್ನನ್ನು ಒಂದು ಮೂಲೆಯಲ್ಲಿ ಸೇರಿಸಿಕೊಂಡಿರುವ ಆ ವಿಶ್ವರೂಪವು ಎಂಥದ್ದಾಯಿತು! ಅದು ಭಗವಂತನ ಒಂದಂಶವೇ ಎಂದರೆ ಆ ಮೂಲತತ್ತ್ವದ ಸ್ವರೂಪವಂತೂ ಎಂಥ ಅದ್ಭುತ ಮಹಿಮೆಯಿಂದಾಯಿತು !–ಎಂದು ಅವನು ಬೆರಗಾದನು. ಅವನು ಈಗ ಅತ್ಯಂತ ಕುತೂಹಲದಿಂದ ಕೇಳಿದ್ದೇನೆಂದರೆ : 'ನೀನು ಈವರೆಗೆ ವರ್ಣಿಸಿದ ಮಹಾವಿಭೂತಿಯ ವಿಶ್ವರೂಪವನ್ನು ನಾನು ನೋಡುವದು ಸಾಧ್ಯವೆ? ಹಾಗಿದ್ದರೆ ಆ ರೂಪವನ್ನು ನನಗೆ ತೋರಿಸಿಕೊಡು !'

ಇಲ್ಲಿ ನಾವು ತಿಳಿಯಬೇಕಾದದ್ದೇನೆಂದರೆ : ಭಗವಂತನು 'ವಿಶ್ವರೂಪನು' ಎಂದರೆ ಹೇಗೆ? ಅದನ್ನು ಗೀತೆಯಲ್ಲಿ ವರ್ಣಿಸಿರುವದನ್ನು ಓದಿದರೂ ನಮಗೆ ಅದರ ಅರ್ಥವು ತಿಳಿಯುವದು ಹೇಗೆ? ನಮಗೆ ಎದುರಿಗಿರುವ ಗೋಡೆಯಿಂದಾಚೆಗೆ ಕಾಣಿಸುವಂತಿಲ್ಲ. ಹೀಗಿರುವಲ್ಲಿ ಇಡಿಯ ಭೂಮಂಡಲವನ್ನು ಕಲ್ಪನೆಗೆ ತಂದುಕೊಳ್ಳುವದು ಹೇಗೆ? ಇನ್ನು ವಿಶ್ವವೆಲ್ಲವೂ ಭಗವಂತನ ಅಂಶವಾದ ರೂಪು–ಎಂಬುದರ ಕಲ್ಪನೆ ನಮಗೆ ಹೇಗೆ ಬರಬೇಕು ! ಬಾವಿಯಲ್ಲಿದ್ದ ಒಂದು ಕಪ್ಪೆಯ ಮರಿಯು ದಡದಮೇಲಿಂದ ಅಂಜಿಕೆಯಿಂದ ಹಾರಿ ಕೆಳಕ್ಕೆ ಬಿದ್ದದ್ದನ್ನು ಕಂಡು ಅದರ ತಾಯಿಯು "ಏನಾಯಿತು ?" ಎಂದು ಕೇಳಲು 'ಅಲ್ಲಿ ಒಂದು ದೊಡ್ಡ ಪ್ರಾಣಿಯು ಕಾಣಿಸಿಕೊಂಡು ಹೋಯಿತು' ಎಂದಾಗ ತಾಯಿಕಪ್ಪೆ 'ಇಷ್ಟು ದಪ್ಪವಿತ್ತೆ ?' ಎಂದು ತನ್ನ ಮೈಯನ್ನು ಉಬ್ಬಿಸಿಕೊಂಡಿತಂತೆ. "ನೀನೇಕೆ ಆಯಾಸಪಡುತ್ತೀಯೆ? ನಿನ್ನ ಹೊಟ್ಟೆಯೇ ಒಡೆದುಕೊಳ್ಳುವಷ್ಟು ಉಬ್ಬಿಸಿಕೊಂಡರೂ ಆ ಪ್ರಾಣಿಯ ಗಾತ್ರದ ಅಂಶದಲ್ಲಿ ನೂರನೆಯ ಅಂಶವೂ ಆಗಲಾರೆ !' ಎಂದು ಮರಿ ಹೇಳಿತಂತೆ! ಹೀಗೆಯೇ ನಮಗೆ ವಿಶ್ವರೂಪದ ಕಲ್ಪನೆಯು ಬರುವದು ಅತ್ಯಂತ ಅಸಂಭಾವಿತ.

ಭೀಷ್ಮಸ್ತವರಾಜದಲ್ಲಿ :

**ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ ।**
**ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರೇ ತಸ್ಮೈ ಲೋಕಾತ್ಮನೇ ನಮಃ ॥**

ಭೀಷ್ಮ. ೬೮

**ಯಸ್ಮಿನ್ ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವತಶ್ಚ ಯಃ ।**
**ಯಶ್ಚ ಸರ್ವಮಯೋ ನಿತ್ಯಂ ತಸ್ಮೈ ಸರ್ವಾತ್ಮನೇ ನಮಃ ॥ ೮೩**

ಎಂಬ ಶ್ಲೋಕಗಳ ಅರ್ಥವನ್ನು ಇಲ್ಲಿ ಅನುಸಂಧಾನಮಾಡುವದಕ್ಕೆ ಪ್ರಯತ್ನಿಸ ಬೇಕು. ವಿಷ್ಣುಸಹಸ್ರನಾಮವನ್ನು ಪಠಿಸುವಾಗ ಧ್ಯಾನಶ್ಲೋಕವೊಂದನ್ನು ಹೇಳಿಕೊಳ್ಳುವ ರೂಢಿಯಿದೆ :

ಭೂಃ ಪಾದೌ ಯಸ್ಯ ನಾಭಿರ್ವಿಯದಸುರನಿಲಶ್ಚನ್ದ್ರಸೂರ್ಯೌ ಚ ನೇತ್ರೇ
ಕರ್ಣಾವಾಶಾಃ ಶಿರೋ ದ್ಯೌರ್ಮುಖಮಪಿ ದಹನೋ ಯಸ್ಯ ವಾಸೋಽಯಮಬ್ಧಿಃ ।
ಅನ್ತಃಸ್ಥಂ ಯಸ್ಯ ವಿಶ್ವಂ ಸುರನರಖಗಗೋಭೋಗಿಗನ್ಧರ್ವದೈತ್ಯೈಃ–
ಶ್ಚಿತ್ರಂ ರಂರಮ್ಯತೇ ತಂ ತ್ರಿಭುವನವಪುಷಂ ವಿಷ್ಣುಮೀಶಂ ನಮಾಮಿ ॥

ಈ ಶ್ಲೋಕಗಳಲ್ಲಿರುವ ಪದಗಳಿಗೆ ಒಂದೊಂದಕ್ಕೂ ಅರ್ಥವನ್ನು ನಾವು ಹೇಳ ಬಹುದು ; ಆದರೆ 'ಈ ತ್ರಿಭುವನರೂಪನಾದ ಭಗವಂತನನ್ನು ಧ್ಯಾನಮಾಡುವೆ ನೆಂದು ಹೇಳಿಕೊಳ್ಳುವದು ಬರಿಯ ಹೆಮ್ಮೆಯ ಮಾತು'–ಎನ್ನಿಸದೆ ಇರದು. ಪ್ರಕೃತದಲ್ಲಿ ಕೇಳಿದವನು ನರೋತ್ತಮನಾದ ಅರ್ಜುನನು ; ಹೇಳಿದವನು ಭಗವನ್ನಾರಾಯಣನೇ. ಆದ್ದರಿಂದ ಶ್ರೀಕೃಷ್ಣನು ತಡೆಯಿಲ್ಲದೆ ಹೇಳಿದ್ದೇನೆಂದರೆ :

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥
ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥
ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥
ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್

ಗೀ. ೧೧–೫ ರಿಂದ ೮

ಶ್ರೀಕೃಷ್ಣನು ಯೋಗೇಶ್ವರನಾದ ಶ್ರೀಮಹಾವಿಷ್ಣುವೇ ಆದ್ದರಿಂದ ಆವನಿಗೆ ಈ ಜಗದ್ರೂಪವನ್ನು ತೋರಿಸುವದಕ್ಕೆ ಏನೂ ತಡವಾಗಲಿಲ್ಲ. 'ನನ್ನ ದಿವ್ಯವಾದ ನೂರಾರು ಸಾವಿರಾರು ರೂಪಗಳನ್ನು ನೋಡು. ಇಲ್ಲಿ ನನ್ನ ದೇಹದಲ್ಲಿಯೇ, ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು, ಮರುತ್ತುಗಳು– ಇನ್ನು ಏನೇನು ನೋಡಬೇಕೆನ್ನುವೆಯೋ ಅದೆಲ್ಲವನ್ನೂ ನೋಡು. ಈ ನಿನ್ನ ಚರ್ಮ ಚಕ್ಷುಸ್ಸಿನಿಂದಲೇ ನನ್ನ ಆ ರೂಪವನ್ನು ನೋಡಲಾರೆ; ನಿನಗೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ. ಈಶ್ವರನಾದ ನನ್ನ ಯೋಗಮಹಿಮೆಯನ್ನು ನೋಡು !

ಭಗವಂತನು ಸತ್ಯಸಂಕಲ್ಪನು, ಆತನು ಏನುಬೇಕೆಂಪರೆ ಅವನ್ನು ತತ್‌ಕ್ಷಣದಲ್ಲಿ ರೂಪಿಸಬಲ್ಲಾತನು. ಅರ್ಜುನನ ಸಾರಥಿಯಾಗಿ ಕುಳಿತಿದ್ದ ತನ್ನ ಮಾನುಷ ರೂಪವನ್ನು ಕೂಡಲೆ ಬೆಳೆಯಿಸಿ ಊಹಿಸಲಸದಳವಾದ ಅದ್ಭುತಪರಿಮಾಣದ ನಾನಾವರ್ಣಗಳ ನಾನಾಕೃತಿಗಳ ರೂಪವನ್ನು ಸ್ವೀಕರಿಸಿ ಅರ್ಜುನನಿಗೆ ತೋರಿಸಿ ಬಿಟ್ಟನು! ನಾವು ಇದನ್ನು ನಂಬುವದಕ್ಕೆ ದಿನದಿನವೂ ನಮಗೆ ಕಾಣಿಸುತ್ತಿರುವ ಸ್ವಪ್ನಪ್ರಪಂಚವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಒಂದಡಿಕೆಯನ್ನು ಕಡಿಯುವಷ್ಟು ಹೊತ್ತಿನೊಳಗಾಗಿ ಈ ಜಾಗ್ರತ್ಪ್ರಪಂಚವನ್ನು ಅಳಿಸಿಹಾಕಿ, ಎಂದೆಂದೂ ಕಾಣದೆಇದ್ದ ಅಧ್ಯಾತ್ಮಿಕಾಧಿಭೌತಿಕಾಧಿದೈವಿಕಾಭಾಸವಾದ ಒಂದು ಜಗತ್ತು ನಮ್ಮ ಮುಂದೆ ಆಗ ಬಂದು ನಿಲ್ಲುವದಲ್ಲ! ಅದು ಕಲ್ಪಿತಪ್ರಪಂಚವೆಂಬು ದೇನೊ ನಿಜ; ಆದರೆ ಅದು ಜಾಗ್ರತ್ತೇ ಎಂಬ ಗಟ್ಟಿಯಾದ ನಂಬಿಕೆಯಾಗಿ ಬಿಡುವಂತೆ, ನಮ್ಮನಮ್ಮ ಕರ್ಮಗಳಿಗೆ ಅನುಸಾರವಾಗಿ ಒಂದು ಜಗತ್ತನ್ನು ನಿರ್ಮಿಸಬಲ್ಲ ಆ ಮಹಾಪ್ರಭುವು ತನ್ನ ಜಗದಾದ್ಯರೂಪವನ್ನು ಅರ್ಜುನನಿಗೆ ತೋರಿಸಿದನೆಂಬುದನ್ನು ನಾವು ನಂಬುವದಕ್ಕೆ ಅಡ್ಡಿ ಏನಿದೆ?

ಭಗವಂತನು 'ನೋಡು!' ಎಂದದ್ದೇ ತಡ, ಕೂಡಲೆ ಅರ್ಜುನನಿಗೆ ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು, ಮರುತ್ತರು,ದೇವತೆಗಳು, ಭೂತವಿಶೇಷಗಳು, ಚತುರ್ಮುಖಬ್ರಹ್ಮ, ಋಷಿಗಳು, ದಿವ್ಯನಾಗರು— ಮುಂತಾ ದವರೆಲ್ಲರೂ ಆ ವಿಶ್ವರೂಪದಲ್ಲಿ ಕಾಣಿಸಿಕೊಂಡರು. ಭಗವಂತನು ದಿವ್ಯಾಭರಣ ಯುತನಾಗಿ ತೇಜೋರಾಶಿಯಾಗಿ ಕಾಣಿಸಿಕೊಂಡು, ಭೂಮ್ಯಂತರಿಕ್ಷಗಳನ್ನೂ ಸರ್ವದಿಕ್ಕುಗಳನ್ನೂ ವ್ಯಾಪಿಸಿಕೊಂಡಿದ್ದದ್ದನ್ನು ಅರ್ಜುನನು ನೋಡಿದನು. ಮಹರ್ಷಿಗಳೂ ಸಿದ್ಧರೂ ಭಗವಂತನನ್ನು ಸ್ತುತಿಸುತ್ತಿದ್ದರು. ಆ ಉಗ್ರರೂಪ ವನ್ನು ಕಂಡು ಲೋಕದಲ್ಲಿರುವವರೆಲ್ಲರೂ ಪ್ರವ್ಯಥಿತರಾಗಿದ್ದರು. ಅರ್ಜುನನಂತೂ ಭಯದಿಂದ ನಡುಗುತ್ತಿದ್ದರೂ ಆ ಭಯಂಕರರೂಪದ ಪುರುಷನ ಮುಖದಲ್ಲಿ ಯೋಧಮುಖ್ಯರೆಲ್ಲರೂ ಅತ್ಯಂತತ್ವರೆಯಿಂದ ಪ್ರವೇಶಿಸುತ್ತಿದ್ದರು. ಲೋಕದಲ್ಲಿರು ವವರೆಲ್ಲರನ್ನೂ ನುಂಗುತ್ತಾ ಬಾಯಿಚಪ್ಪರಿಸುತ್ತಿದ್ದ ಆ ಉಗ್ರರೂಪವನ್ನು ಕಂಡು ಅರ್ಜುನನು 'ಭಗವಂತನೆ, ನೀನು ನಿಜವಾಗಿ ಯಾರು, ಏನುಮಾಡುವದಕ್ಕೆ ಪ್ರವರ್ತಿಸಿರುವೆ? ದಯವಿಟ್ಟು ಹೇಳು!' ಎಂದು ಬೇಡಿಕೊಂಡನು. ಆಗ ಶ್ರೀ ಭಗವಂತನು ಈ ಯುದ್ಧದ ನೆಪದಿಂದ ಜನರೆಲ್ಲರನ್ನೂ ಸಂಹರಿಸುವದಕ್ಕೆ ಹೊರ ಟಿರುವ ಕಾಲನೇ ತಾನೆಂದೂ ಅರ್ಜುನನು ನಿಮಿತ್ತಮಾತ್ರನಾದರೆ ಸಾಕು, ಅಥವಾ ಅವನು ಇಲ್ಲದಿದ್ದರೂ ತಾನೇ ಭೂಲೋಕದವರೆಲ್ಲರನ್ನೂ ಸಂಹರಿಸುವೆ ನೆಂದೂ ಹೇಳಿದ್ದನ್ನು ಕೇಳಿ ಕೈಮುಗಿದುಕೊಂಡು ನಡುಗುತ್ತಾ ಅರ್ಜುನನು ಮಾಡಿರುವ ಸ್ತೋತ್ರವನ್ನು ನಾವು ಕಂಠಪಾಠಮಾಡಬೇಕು.

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ
ಸರ್ವೇ ನಮಸ್ಯನ್ತಿ ಚ ಸಿದ್ಧಸಙ್ಘಾಃ ॥ ಗೀ. ೧೧-೩೬

ಈ ಶ್ಲೋಕವನ್ನು ರಾಕ್ಷೋಘ್ನಮಂತ್ರವೆಂದು ಈಗಲೂ ಮಂತ್ರಶಾಸ್ತ್ರಜ್ಞರು ಭೀತಿಶಂಕೆಯ ನಿವಾರಣೆಗಾಗಿ ವಿನಿಯೋಗಿಸುತ್ತಿರುತ್ತಾರೆ. 'ಭಗವಂತನ ಐಶ್ವರ್ಯವನ್ನು ಕೀರ್ತನೆಮಾಡುವುದರಿಂದ ಭಕ್ತರ ಜಗತ್ತು ಹರ್ಷದಿಂದ ಭಗವದನುರಕ್ತಿಯನ್ನು ಪಡೆಯುತ್ತದೆ. ರಾಕ್ಷಸರು ಭೀತರಾಗಿ ದಿಕ್ಕುದಿಕ್ಕಿಗೆ ಓಡುವರು, ಸಿದ್ಧಸಂಘಗಳೆಲ್ಲವೂ ನಮಸ್ಕರಿಸುವವು' ಎಂಬುದು ಶ್ಲೋಕದ ಭಾವಾರ್ಥವು.

ಹೀಗೆ ಅರ್ಜುನನಿಗೆ ಈ ಅಪೂರ್ವವಾದ ರೂಪದ ದರ್ಶನವನ್ನು ಅನುಗ್ರಹಿಸಿದ ಬಳಿಕ ಭಗವಂತನು ಹೇಳಿದನೇನೆಂದರೆ:

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ।
ತೇಜೋಮಯಂ ವಿಶ್ವಮನನ್ತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥

ನ ವೇದಯಜ್ಞಾಧ್ಯಯನೈರ್ನ ದಾನೈ-
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ಗೀ. ೧೧-೪೭, ೪೮

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥
ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥
ಗೀ. ೧೧-೫೩, ೫೪

ಭಗವಂತನು ತನ್ನ ವಿಶ್ವರೂಪವನ್ನು ತೋರಿಸಿದ ಬಳಿಕ ಮತ್ತೆಮತ್ತೆ ಒತ್ತಿ ಹೇಳಿರುವ ವಾಕ್ಯವಿದು. ವೇದದಲ್ಲೆಲ್ಲ ಹೇಳಿರುವದು ಯಜ್ಞ, ದಾನ, ತಪಸ್ಸು-ಈ ಮೂರೇ ಮುಖ್ಯವಾದ ಸಾಧನೆಗಳು. ಆದರೆ ಭಕ್ತಿಯಿಲ್ಲದಿದ್ದರೆ ಈ ಯಾವದೊಂದರಿಂದಲೂ, ಅಥವಾ ಈ ಎಲ್ಲದರಿಂದಲೂ, ಭಗವಂತನ ವಿಶ್ವರೂಪವನ್ನು ಯಾರೂ ನೋಡಲಾರರು; ಅರ್ಜುನನಿಗೊಬ್ಬನಿಗೆ ಹೊರತು ಮತ್ತೆ ಯಾರಿಗೂ

ಇದು ದೊರಕಲಿಲ್ಲ. ಮುಖ್ಯವಾಗಿ ಭಗವಂತನ ಈ ರೂಪವನ್ನು ನೋಡುವ ದಕ್ಕೂ, ಅವರ ಬಲದಿಂದ ಭಗವತ್ತತ್ತ್ವವನ್ನು ಸರಿಯಾಗಿ ಅರಿತುಕೊಳ್ಳುವ ದಕ್ಕೂ, ಭಗವಂತನಲ್ಲಿಯೇ ಸಾಯುಜ್ಯವನ್ನು ಹೊಂದುವದಕ್ಕೂ ಅನನ್ಯಭಕ್ತಿ ಯೊಂದೇ-ಸಾಧನವು. ಭಗವದ್ಗೀತೆಯಲ್ಲಿ ಪರಮಪುರುಷಾರ್ಥಕ್ಕೆ ಅನನ್ಯಭಕ್ತಿ ಯೊಂದೇ ಸಾಧನವೆಂದು ಭಗವಂತನು ಮತ್ತೆಮತ್ತೆ ಸಾರಿರುತ್ತಾನೆ. ಶ್ರೀಶಂಕರ ಭಗವತ್ಪಾದರು ಅದನ್ನು ಸಾವಧಾರಣವಾಗಿ ಹೇಳಿರುತ್ತಾರೆ. ಮುಂದಿನ ಶ್ಲೋಕ ವನ್ನು ವ್ಯಾಖ್ಯಾನಮಾಡುವಾಗ ಅವರು ಕೊಟ್ಟಿರುವ ಅವತರಣಿಕೆಯನ್ನು ನಾವು ಸಾವಧಾನವಾಗಿ ಲಕ್ಷಿಸಬೇಕು.

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ |
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ಗೀ. ೧೧-೫೫

ಇಲ್ಲಿ ಆಚಾರ್ಯರು ಬರೆದಿರುವದೇನೆಂದರೆ :-

ಅಧುನಾ ಸರ್ವಸ್ಯ ಗೀತಾಶಾಸ್ತ್ರಸ್ಯ ಸಾರಭೂತೋಽರ್ಥೋ ನಿಃಶ್ರೇಯಸಾರ್ಥೋಽನುಷ್ಠೇಯತ್ವೇನ ಸಮುಚ್ಚಿತ್ಯೋಚ್ಯತೇ । (ಈಗ ಗೀತಾಶಾಸ್ತ್ರಕ್ಕೆಲ್ಲ ಸಾರಭೂತವಾಗಿರುವ ಯಾವ ಮೋಕ್ಷಾರ್ಥಸಾಧನವನ್ನು ಮಾಡಬೇಕೆಂಬುವನ್ನು ಒಟ್ಟುಗೂಡಿಸಿ ಭಗವಂತನು ಹೇಳಿರುತ್ತಾನೆ) :

**'ಮತ್ಕರ್ಮಕೃತ್'**-ಎಂದರೆ ನನಗಾಗಿ ಕರ್ಮವನ್ನು ಮಾಡುವವನು. **'ಮತ್ಪರಮಃ'**-ಭೃತ್ಯನು ಒಡೆಯನ ಕರ್ಮವನ್ನೇ ಮಾಡುತ್ತಿದ್ದರೂ ಆ ಒಡೆ ಯನ್ನೇ ತನಗೆ ಪರಮಗತಿಯೆಂದೇನೂ ನಂಬಿರುವದಿಲ್ಲ; ಆದರೆ ಈ ಭಕ್ತನು ಮಾತ್ರ ಭಗವಂತನಾದ ನನ್ನ ಕರ್ಮವನ್ನೇ ಮಾಡುತ್ತಾ, **ಮತ್ಪರಮನಾಗಿ** ಎಂದರೆ ನಾನೇ ಪರಮಗತಿಯೆಂದು ನಂಬಿರುತ್ತಾನೆ. ಮತ್ತು **'ಮದ್ಭಕ್ತಃ'** ಎಂದರೆ ನನ್ನನ್ನೇ ಸರ್ವಪ್ರಕಾರದಿಂದಲೂ ಸರ್ವೋತ್ಸಾಹದಿಂದಲೂ ಭಜಿಸುತ್ತಿರು ತ್ತಾನೆ. ಇದಲ್ಲದೆ **'ಸಂಗವರ್ಜಿತಃ'** ಧನ, ಮಕ್ಕಳು, ಹೆಂಡತಿ, ನೆಂಟರು- ಇವರು ಯಾರಲ್ಲಿಯೂ ಸಂಗವಿಲ್ಲದವನಾಗಿ ನನ್ನಲ್ಲಿಯೇ ಪ್ರೇಮವನ್ನಿಟ್ಟಿರುವನು. **'ನಿರ್ವೈರಃ ಸರ್ವಭೂತೇಷು'** -ಯಾವ ಪ್ರಾಣಿಗಳಲ್ಲಿಯೂ ತನಗೆ ಅತ್ಯಂತ ವಾಗಿ ಅಪಕಾರವನ್ನು ಮಾಡುವವರಲ್ಲಿಕೂಡ ಶತ್ರುಭಾವವಿಲ್ಲದೆ ಇರುವನು. ಹೀಗೆ ಈ ಐದು ಪ್ರಕಾರಗಳಿಂದ ಯಾವನು ನನ್ನ ಅನನ್ಯಭಕ್ತನಾಗಿರುವನೋ ಅವನು ನನ್ನನ್ನು ಸೇರುವನು. ಅವನಿಗೆ ನಾನೇ ಪರಮಗತಿಯಾಗಿರುವೆನು ; ಇನ್ನೊಂದು ಗತಿಯು ಅವನಿಗಿಲ್ಲ. ಇದೇ ನಿನಗೆ ನಾನು ಮಾಡಿರುವ ಇಷ್ಟವಾದ ಉಪದೇಶವು-ಎಂದಿರುತ್ತಾನೆ, ಭಗವಂತ.

# ೩೧. ವಿಶ್ವರೂಪದರ್ಶನಕ್ಕೆ ಸಾಧನಸೋಪಾನ

( 31—8—69 )

ವಿಶ್ವಶಬ್ದದ ಅರ್ಥವು ವಿಶಾಲವಾದದ್ದು; ವಿಶ್ವೇಶ್ವರನ ದರ್ಶನಕ್ಕೆಂದು ಒಂದು ಕ್ಷೇತ್ರಕ್ಕೆ ಹೋಗುವದಕ್ಕೆ ಜನರು ಬಯಸುತ್ತಾರಷ್ಟೆ? ಅದು ನಿಜವಾಗಿ ವಿಶ್ವದರ್ಶನವಲ್ಲ; ಯಾವದನ್ನು ನೋಡಬಹುದೋ ಅದು ವಿಶ್ವವಲ್ಲ, ವಿಶ್ವವಾದರೆ ಅದನ್ನು ಈ ನಮ್ಮ ಕಣ್ಣುಗಳಿಂದ ನೋಡುವದಕ್ಕೆ ಆಗುವದೇ ಇಲ್ಲ. ಭಗವಂತನು

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಙ್ಕ್ಷಿಣಃ ॥** ಗೀ. ೧೧-೫೨

ಎಂದಿರುತ್ತಾನೆ. "ವಿಶ್ವಮ್" ಎಂಬಿದೇ ವಿಷ್ಣುಸಹಸ್ರನಾಮದಲ್ಲಿ ಮೊದಲನೆಯ ನಾಮ. ವಿಶ್ವವೆಂಬ ಭಾವವು ಮನಸ್ಸಿನಲ್ಲಿ ಬರುವದು ಬಹಳಕಷ್ಟ. ಆದರೆ ಅದು ತತ್ತ್ವಜ್ಞಾನಕ್ಕೆ ಬಹಳ ಆವಶ್ಯವಾಗಿರುತ್ತದೆ. ಜೇನುಹುಟ್ಟಿಯಲ್ಲಿ ಎಷ್ಟು ಹುಳುಗಳು ಸೇರಿರುತ್ತವೆ! ಆದರೆ ಜೇನುತುಪ್ಪವು ಆ ಹುಳುಗಳೆಲ್ಲವೂ ಸೇರಿ ಸಿದ್ಧಗೊಳಿಸಿರುವ ರಸವು. ಅದು ಯಾವದೇ ಒಂದು ಹುಳುವು ತಂದಿರುವ ರಸವಲ್ಲ. ಹೀಗೆಯೇ ಜಗತ್ತಿನಲ್ಲಿ ಯಾವದಾದರೊಂದು ವ್ಯಕ್ತಿಯಾದ ವಸ್ತುವನ್ನು ಕಾಣಬಹುದು; ಅದು ವ್ಯಕ್ತಿಯೇ ಹೊರತು ಒಟ್ಟು ಜಗದ್ರೂಪವಲ್ಲ. ನಮಗೆ ದಶೇಂದ್ರಿಯಗಳ ಸಹಾಯದಿಂದ ಮಾಡುವ ವ್ಯವಹಾರವಿದೆ; ಆ ಒಂದೊಂದು ಇಂದ್ರಿಯದಿಂದಲೂ ಒಂದೊಂದೇ ಪರಿಚ್ಛಿನ್ನವಸ್ತುವನ್ನು ಅರಿಯುವದಾಗುತ್ತದೆ. ವಿಶ್ವದ ಜ್ಞಾನವು ಅವುಗಳಿಂದ ಸಿಕ್ಕಲಾರದು. ಸಂನ್ಯಾಸಿಗಳು ಮಳೆಗಾಲದಲ್ಲಿ ಒಂದೇ ಸ್ಥಲದಲ್ಲಿರಬೇಕೆಂಬ ನಿಯಮವಿದೆ; ಆಮೇಲೆ ಅವರು ಸೀಮೋಲ್ಲಂಘನವನ್ನು ಮಾಡಿ ಬೇರೆಬೇರೆ ಕಡೆಗೆ ಸಂಚಾರಮಾಡಿ ಹೊರಡುವದಕ್ಕೆ "ವಿಶ್ವರೂಪಯಾತ್ರೆ" ಎಂಬ ಹೆಸರು ರೂಢಿಯಲ್ಲಿದೆ. ಪರಿವ್ರಾಜಕರು ದೇಶದಿಂದ ದೇಶಕ್ಕೆ ಹೋಗುತ್ತಿರುವಾಗ ಜನರ ಆಚಾರ, ಭೋಜನಕ್ರಮ, ವೇಷ, ಭಾಷೆ, ರೂಪ, ನಡತೆ–ಮುಂತಾದ ವೈಚಿತ್ರ್ಯಗಳನ್ನು ನೋಡುತ್ತಾ ಅದೆಲ್ಲ ಭಗವಂತನ ವಿಶ್ವರೂಪವೆಂದೇ ಕಾಣುತ್ತಾ ಆತನ ಚಿಂತೆಯಿಂದಲೇ ವಿಹರಿಸಬೇಕೆಂಬುದು ಈ ಸಂಜ್ಞಾಕರಣದ ಉದ್ದೇಶವಿರಬಹುದು. ಜಗತ್ತಿನಲ್ಲಿ ವೈಚಿತ್ರ್ಯವು ಮಾತ್ರವೇ ಇಲ್ಲ, ನವನವೋನ್ಮೇಷಶಾಲಿತ್ವವೂ ಇದೆ. ಗಳಿಗೆ ಗಳಿಗೆಗೂ ಹೊಸಹೊಸ ರೂಪವನ್ನು ಧರಿಸುವದು ಈ ಜಗತ್ತಿನ ಸ್ವಭಾವವು. ಇಂಥ ವಿಶ್ವರೂಪವನ್ನು ಶ್ರೀಕೃಷ್ಣಭಗವಂತನು ಸಾಕ್ಷಾತ್ತಾಗಿ ತೋರಿಸಿದಾಗ

ಅರ್ಜುನನ ಮನಸ್ಸಿನಲ್ಲಿ ಯಾವಯಾವ ಬಗೆಯ ಭಾವಗಳು ಉತ್ಪನ್ನವಾಗಿರಬಹುದು ! ಇಂಥ ರೂಪವನ್ನು ತೋರಿಸಿದಬಳಿಕವೇ–

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥**

ಗೀ. ೧೧–೫೫

ಎಂಬ ಉತ್ತಮಸಾಧನವನ್ನು ಉಪದೇಶಿಸಿರುತ್ತಾನೆ. ವಿಶ್ವರೂಪೋಪಾಸನೆಗೆ ಎಂಥ ಉಚ್ಚಧ್ಯೇಯವಿದೆ ! ಈ ಸಾಧನವನ್ನು ಅಳವಡಿಸಿಕೊಳ್ಳುವದಕ್ಕಾಗಿ ಭಾಗವತದಲ್ಲಿ ಹೀಗೆ ಹೇಳಿದೆ :

**ನ ರೇಷ್ವಭೀಕ್ಷ್ಣಂ ಮದ್ಭಾವಂ ಪುಂಸೋ ಭಾವಯತೋಽಚಿರಾತ್**
**ಸ್ಪರ್ಧಾಽಸೂಯಾತಿರಸ್ಕಾರಾಃ ಸಾಹಙ್ಕಾರಾ ವಿಯನ್ತಿ ಹಿ ॥**
**ವಿಸೃಜ್ಯ ಸ್ಮಯಮಾನಾನ್ ಸ್ವಾನ್ ದೃಶಂ ವ್ರೀಡಾಂ ಚ ದೈಹಿಕೀಮ್**
**ಪ್ರಣಮೇದ್ದಣ್ಡವದ್ಭೂಮಾವಾ ಶ್ವಚಾಣ್ಡಾಲಗೋಖರಮ್ ॥**

ಭಾಗ. ೧೧–೨೯–೧೫, ೧೬

ಮನುಷ್ಯರಲ್ಲಿ ಭಗವದ್ಭಾವವನ್ನೇ ಚೆನ್ನಾಗಿ ಅಭ್ಯಾಸಮಾಡುತ್ತಿರುವ ಪುರುಷನಿಗೆ ಬೇಗನೆ ಮೇಲಾಟ, ಅಸೂಯೆ, ತಿರಸ್ಕಾರ, ಅಹಂಕಾರ– ಇವೆಲ್ಲ ತೊಲಗುವವು ಗರ್ವ, ಅಭಿಮಾನ, ಲಜ್ಜೆ–ಮುಂತಾದವುಗಳನ್ನೆಲ್ಲ ಬಿಟ್ಟು, ನಾಯಿ, ಚಂಡಾಲ, ಎತ್ತು, ಕತ್ತೆ–ಇಂಥ ಪ್ರಾಣಿಗಳವರೆಗೂ ದಂಡವತ್ಪ್ರಣಾಮಗಳನ್ನು ಮಾಡುತ್ತಿರಬೇಕು. ಇದ ಸರ್ವತ್ರಭಗವದ್ಭಾವನೆಗೆ ಸಾಧಕವಾಗುವದು. **ಸ್ವಾಮಿ ರಾಮತೀರ್ಥರು** ಸಭೆಯಲ್ಲಿ ಉಪದೇಶಮಾಡುವಾಗ 'ಈ ಸ್ತ್ರೀಪುರುಷರ ರೂಪದಲ್ಲಿರುವ ನನ್ನ ಆತ್ಮವೆ,' –ಎಂದು ಸಂಬೋಧಿಸುತ್ತಿದ್ದರಂತೆ !

ಈ ಭವ್ಯವಾದ ಭಾವನೆಯು ಬರುವದಕ್ಕೆಂದು ನಮ್ಮಲ್ಲಿ ಹಿಂದಿನವರು ಮಂಗಲಕಾರ್ಯಗಳಲ್ಲಿ 'ಸಭಾಪೂಜೆ'ಯನ್ನು ಮಾಡಿಸುತ್ತಿದ್ದರು. ಆಗ ಎದುರಿಗಿರುವವರೆಲ್ಲರೂ ಭಗವಂತನ ಮೂರ್ತಿಗಳೆಂದು ಭಾವಿಸುವದಕ್ಕಾಗಿ ಮಕ್ಕಳನು ಕೂಡ ಭಗವಂತನ ವಿಭೂತಿಯಾಗಿ ಭಾವಿಸಿ '**ನಮೋಽರ್ಭಕೇಭ್ಯಃ**' ಎಂಬ ವಾಕ್ಯವನ್ನೊಳಗೊಂಡ ಮಂತ್ರವನ್ನು ಹೇಳಿಸುತ್ತಿದ್ದರು. ಈಗ ಮತ್ತೆ ನಾವು ಈ ಉದಾತ್ತಭಾವನೆಯನ್ನು ಅಳವಡಿಸಿಕೊಳ್ಳಬೇಕು.

# ೩೨. ವಿಶ್ವರೂಪೋಪಾಸನೆಯ ಸೌಲಭ್ಯ

( 1—9—69 )

ನಿನ್ನೆಯದಿನ ಕಾರಣಾಂತರದಿಂದ ಕಾಲವು ಸಾಕಾದಷ್ಟು ಇರಲಿಲ್ಲವಾಗಿ ವಿಷಯವನ್ನು ಪೂರ ಹೇಳಲಾಗಲಿಲ್ಲ. ನಮ್ಮ ಇಂದ್ರಿಯಗಳಿಗೆ ಎಷ್ಟು ಗೋಚರ ವಾಗುವದೋ ಅಷ್ಟೇ ವಿಶ್ವವಲ್ಲ, ವ್ಯವಹಾರದಲ್ಲಿ ನಮ್ಮ ಇಂದ್ರಿಯಗಳು ಎದುರಿಗೆ ಇರುವದನ್ನೆಲ್ಲ ನೋಡುವದಿಲ್ಲ; ಇಂದ್ರಿಯದಲ್ಲಿ ಕಿವುಡು, ಕುರುಡು– ಮುಂತಾದ ದೋಷವಿದ್ದರಂತೂ ನೋಡುವದು ಆಗುವದೇ ಇಲ್ಲ. ಸರಿಯಾಗಿ ಕಾಣುವ ಶಕ್ತಿ ಯಿದ್ದರೂ ಪೂರ್ಣವಾಗಿ ಯಾವವಸ್ತುವನ್ನೂ ನೋಡುವದಕ್ಕೆ ಆಗುವಂತಿರುವದಿಲ್ಲ ಹೀಗಿರುವಲ್ಲಿ ಇಂದ್ರಿಯಗೋಚರವಾಗಿರುವಷ್ಟು ಪ್ರಪಂಚವನ್ನು ವಿಶ್ವವೆಂದು ಕರೆಯುವದು ಹೇಗೆತಾನೆ ಯುಕ್ತವಾದೀತು?

ಅರ್ಜುನನಿಗೆ ಭಗವಂತನು ಅನುಗ್ರಹಿಸಿದ ದಿವ್ಯಚಕ್ಷುಸ್ಸಿನಿಂದ ಭೂಮ್ಯಂತರಿಕ್ಷಗಳನ್ನೆಲ್ಲ ವ್ಯಾಪಿಸಿಕೊಂಡಿದ್ದ ವಿಶ್ವರೂಪವನ್ನು ಅವನು ಕಂಡನು; ಈ ರೂಪವನ್ನು ಉಪಾಸನೆಮಾಡುವಂತೆಯೂ ಭಗವಂತನು ತಿಳಿಸಿದನು.

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥**

ಗೀ. ೧೧-೫೫

ಎಂದು ವಿಶ್ವರೂಪವನ್ನು ನಿರಂತರವಾಗಿ ಭಕ್ತಿಯಿಂದ ಸತತವೂ ಉಪಾಸನೆಮಾಡುವವನೇ ಭಗವಂತನನ್ನು ಸೇರುತ್ತಾನೆ – ಎಂದು ಉಪದೇಶಿಸಿದನು. ಆದರೆ ಭಗವಂತನು ಎರಡನೆಯ ಅಧ್ಯಾಯವೇ ಮುಂತಾದ ಕಡೆಗಳಲ್ಲಿ ತನ್ನ ಅವ್ಯಕ್ತ ರೂಪವನ್ನು ಅರಿತುಕೊಂಡು ಚಿಂತಿಸುವ ಪ್ರಕಾರವನ್ನೂ ಹಿಂದೆ ಬೋಧಿಸಿದ್ದನು. ಆದ್ದರಿಂದ ಈ ಎರಡು ಪ್ರಕಾರಗಳೊಳಗೆ ಯಾವದು ಹೆಚ್ಚಿನದು ?– ಎಂಬುದನ್ನು ನಿಶ್ಚಯಿಸಿಕೊಳ್ಳುವದಕ್ಕಾಗಿ ಅರ್ಜುನನು :

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥** ಗೀ.೧೨-೧

ಎಂದು ಕೇಳಿದನು. ನೀನು ಹೇಳಿರುವಂತೆ ವಿಶ್ವರೂಪಭಗವಂತನಲ್ಲಿಯೇ ಸತತವಾಗಿ ಚಿತ್ತಸಮಾಧಾನವನ್ನು ಮಾಡಿಕೊಂಡು ಉಪಾಸನೆಮಾಡುವವರು, ಮತ್ತು ಸರ್ವ ಧರ್ಮವಿವರ್ಜಿತನಾದ ಅವ್ಯಕ್ತವಾದ ಅಕ್ಷರಬ್ರಹ್ಮವನ್ನು [illegible] [illegible] ಯಲ್ಲಿಯೇ ಇರುವವರು– ಇವರಿಬ್ಬರಲ್ಲಿ ಯಾರು ಹೆಚ್ಚಿನ ಯೋಗಿಗಳು? ಎಂಬುದು ಪ್ರಶ್ನವಾಕ್ಯದ ಅರ್ಥ.

ಭಗವಂತನು ಇದಕ್ಕೆ ಕೊಟ್ಟಿರುವ ಉತ್ತರವೇನೆಂದರೆ :

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥**

ಗೀ. ೧೨–೨

'ಯಾರು ವಿಶ್ವರೂಪನಾದ ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಂಡು ಈತನು ಸರ್ವಯೋಗೇಶ್ವರರಿಗೂ ಈಶ್ವರನು, ಸರ್ವಜ್ಞನು, ಯಾವ ರಾಗಾದಿಕ್ಲೇಶಗಳೂ ಇಲ್ಲದವನು–ಎಂದು ಹಿಂದೆ ನಾನು 'ಮತ್ಕರ್ಮಕೃತ್' ಎಂದು ಮುಂತಾಗಿ ವರ್ಣಿಸಿರುವಂತೆ ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಂಡು ಉಪಾಸನೆಮಾಡು ವರೋ, ಅವರೇ ಯುಕ್ತತಮರು ಎಂಬುದು ನನ್ನ ಮತವು'

ಇಲ್ಲಿ ಭಗವಂತನಿಗೆ ಎಂಟನೆಯ ಅಧ್ಯಾಯದಲ್ಲಿ ಹೇಳಿರುವ ಬ್ರಹ್ಮೋಪಾಸಕ ರಾಗಲಿ ಆರನೆಯ ಅಧ್ಯಾಯದಲ್ಲಿ ಹೇಳಿದ ಧ್ಯಾನಯೋಗಪರರಾಗಲಿ ಯುಕ್ತರಲ್ಲ ವೆಂದೇನೂ ಅಭಿಪ್ರಾಯವಿಲ್ಲ. ಪ್ರಕೃತದಲ್ಲಿ ಅರ್ಜುನನು ಕೇಳಿದ ಪ್ರಶ್ನೆಗೆ ಯಾವ ಧರ್ಮವೂ ಇಲ್ಲದ ನಿರ್ವಿಶೇಷವಾದ ಅಕ್ಷರವನ್ನು ಅರಿತುಕೊಂಡು ಅದರ ಅನು ಸಂಧಾನದಲ್ಲಿಯೇ ಇರುವವರು ಹೆಚ್ಚಿನ ಯೋಗಿಗಳೊ, ವಿಶ್ವರೂಪವನ್ನೇ ನಿರಂತ ರವೂ ಉಪಾಸನೆಮಾಡುವವರು ಹೆಚ್ಚಿನವರೊ ?–ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಶ್ರೀಕೃಷ್ಣನು ಹೊರಟಿರುತ್ತಾನೆ. ಅದರಲ್ಲಿಯೂ ಉತ್ತರದ ಅಕ್ಷರಾರ್ಥವನ್ನು ಹಿಡಿದುನೋಡಿದರೆ ಅಕ್ಷರಚಿಂತಕರಿಗಿಂತ ವಿಶ್ವರೂಪೋಪಾಸ ಕರು ಹೆಚ್ಚಿನವರು ( ಯುಕ್ತತಮಾಃ ) ಎಂದೇ ಅರ್ಥವಾಗಬಹುದು. ಆದರೆ ಹಾಗೇನೂ ಇಲ್ಲಿ ಹೇಳಿಲ್ಲ. ಈ ಇಬ್ಬರಲ್ಲಿ ಯಾರ ಉಪಾಸನೆಯು ಸುಲಭ ?– ಎಂಬುದನ್ನು ಹೇಳುವದಕ್ಕೆಂದೇ ಈ ಪ್ರಶ್ನೋತ್ತರವು ಬಂದಿರುತ್ತದೆ. ಹಿಂದೆ :

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥**

ಗೀ. ೫–೨

ಎಂದು ಹೇಳಿದಾಗ ಸಂನ್ಯಾಸ, ಕರ್ಮಯೋಗ–ಈ ಎರಡರಲ್ಲಿ ಕರ್ಮಯೋಗವೇ ಹೆಚ್ಚಿನದು– ಎಂದಿರುವಲ್ಲಿ ಹೇಗೆ ಕರ್ಮಯೋಗವೇ ಹೆಚ್ಚು ಸುಲಭ ಎಂಬ ಅಭಿಪ್ರಾಯವಿತ್ತೋ, ಇಲ್ಲಿಯೂ ಹಾಗೆಯೇ ತಿಳಿಯಬೇಕು. ಅಂಗಡಿಯಲ್ಲಿ ಬೇರೆಬೇರೆಯ ಬೆಲೆಯ ಪದಾರ್ಥಗಳಿದ್ದರೂ ಬಂದ ಗಿರಾಕಿಗಳ ಯೋಗ್ಯತೆಗೆ ತಕ್ಕಷ್ಟು ಬೆಲೆಯ ಪದಾರ್ಥವನ್ನು ತೋರಿಸಿ, 'ತಮಗೆ ಇದೇ ಉತ್ತಮ ; ತಾವು ಇದನ್ನೇ ಕೊಂಡರೆ ಉತ್ತಮ' ಎಂದು ಅಂಗಡಿಯವರು ಹೇಳುವಂತೆ ಅಧಿಕಾರಿಗಳ

ದೃಷ್ಟಿಯಿಂದ ನೋಡಿದರೆ ವಿಶ್ವರೂಪೋಪಾಸನೆಯೇ ಉತ್ತಮ ; ಏಕೆಂದರೆ ಅದೇ ಇವೆರಡರಲ್ಲಿ ಸುಲಭಸಾಧ್ಯ–ಎಂದು ಭಗವಂತನು ಇಲ್ಲಿ ಹೇಳಿರುತ್ತಾನೆ. 'ಬಂಡಿ ಭಂಡಾಟ, ಹೇರು ಹೆಡ್ಡಾಟ, ಕಾಲುನಡಗೆ ಪರಮಸುಖ' ಎಂಬ ನಾಣ್ನುಡಿಯಂತೆ ಅಧಿಕಾರಿಗಳಿಗೆ ಯಾವದು ಸುಲಭವೋ ಅದನ್ನೇ ಶಾಸ್ತ್ರಕಾರರು ಅವರಿಗೆ ಉತ್ತಮವೆಂದು ಉಪದೇಶಿಸುತ್ತಾರೆ.

ನಾರದಭಕ್ತಿಸೂತ್ರದಲ್ಲಿ ಭಕ್ತಿಯ ಲಕ್ಷಣವನ್ನು ಹೇಳುವಾಗ **'ಸಾ ತ್ವಸ್ಮಿನ್ ಪರಮಪ್ರೇಮರೂಪಾ'** ಎಂದಿದೆ. ಮನುಷ್ಯನಿಗೆ ಹೆಂಡತಿ, ಮಕ್ಕಳು, ಹಣಕಾಸು– ಮುಂತಾದವುಗಳಲ್ಲಿ ಇಡುವ ಪ್ರೇಮದ ಸ್ವಭಾವವು ಗೊತ್ತಿದೆ ಪರಮಾತ್ಮನು ನಮ್ಮ ಶರೀರದೊಳಗೇ ಇದ್ದು ನಮ್ಮ ಪರಮಾರ್ಥವಾದ ಆತ್ಮನೇ ಆಗಿರುವದರಿಂದ ಅವನಲ್ಲಿ ಮಿಕ್ಕದ್ದೆಲ್ಲಕ್ಕಿಂತಲೂ ಹೆಚ್ಚಿನ ಪ್ರೇಮವಿರತಕ್ಕದ್ದು ನ್ಯಾಯವಾದರೂ ಹೆಂಡತಿ, ಮಕ್ಕಳು– ಮುಂತಾದವರಲ್ಲಿರುವ ಪ್ರೇಮದ ಜಾತಿಯೂ ಪರಮಾತ್ಮನಲ್ಲಿರಬೇಕೆಂದು ಈ ಸೂತ್ರದಲ್ಲಿ ಹೇಳಿರುವ ಪ್ರೇಮವೂ ಒಂದೇ ಜಾತಿಯದೇನಲ್ಲ ; ಮಿಕ್ಕವರಲ್ಲಿ ಸದ್ಯಕ್ಕೆ ಪ್ರಿಯರು ಎಂಬರ್ಥದಲ್ಲಿ ಪ್ರೇಮವಿರುತ್ತದೆ. ಆತ್ಮನಲ್ಲಿ ಮಿಕ್ಕೆಲ್ಲವನ್ನೂ ಕಡೆಗಣಿಸಿ ಇಡಬೇಕಾದ ನಿರುಪಾಧಿಕವಾದ ನಿರ್ಹೇತುಕವಾದ ಪ್ರೇಮವಿರಬೇಕು– ಎಂಬುದನ್ನು ತಿಳಿಸುವದಕ್ಕೋಸ್ಕರ 'ಪರಮಪ್ರೇಮ' ಎಂಬ ಶಬ್ದವನ್ನು ಅಲ್ಲಿ ಪ್ರಯೋಗಿಸಿದೆ. ಮಿಕ್ಕವರಲ್ಲಿರುವ ಪ್ರೇಮದ ಜಾತಿಯ ಪ್ರೇಮವೇ ಇದು–ಎಂದು ಪ್ರಾಕೃತರು ತಪ್ಪಾಗಿ ತಿಳಿದುಕೊಳ್ಳಬಹುದಾದರೂ ಅದು ನಿಜವಲ್ಲ. ಹಾಗೆಯೇ ಇಲ್ಲಿ ವಿಶ್ವರೂಪಾತ್ಮನ ಉಪಾಸನೆಯು ಭಾವನಾತ್ಮಕವಾಗಿದೆ ; ಅಕ್ಷರರೂಪಪರಮಾತ್ಮನನ್ನು ಅರಿತುಕೊಂಡಬಳಿಕ ಸ್ವರಸವಾಗಿಯೇ ಅವನನ್ನು ಚಿಂತಿಸುತ್ತಿರುವದೆಂಬ ಉಪಾಸನೆಯು ಭಾವನಾತ್ಮಕವಲ್ಲ ; ವಸ್ತುವಿನ ನಿರತಿಶಯಮಹತ್ತ್ವವನ್ನರಿತುಕೊಂಡದ್ದರಿಂದ ಸ್ವಭಾವದಿಂದಲೇ ಉಂಟಾಗುವ ನಿರಂತರಾನುಸಂಧಾನವದು. ಹೀಗೆ ಧ್ಯೇಯವಸ್ತುವಿನ ಸ್ವರೂಪದಲ್ಲಿಯೂ ಅನುಷ್ಠಾನಮಾಡುವ ಉಪಾಸನೆಯಲ್ಲಿಯೂ ತಾರತಮ್ಯವಿದ್ದರೂ ಅಧಿಕಾರಿತಾರತಮ್ಯದಿಂದ ವಿಶ್ವರೂಪೋಪಾಸನೆಯ ಸೌಲಭ್ಯವನ್ನು ಅನುಲಕ್ಷಿಸಿ **"ತೇ ಮೇ ಯುಕ್ತತಮಾ ಮತಾಃ"** ಅವರೇ ನನಗೆ ಹೆಚ್ಚಿನ ಯೋಗಿಗಳೆನಿಸುವರು–ಎಂದು ಭಗವಂತನು ಉತ್ತರವನ್ನು ಹೇಳಿರುತ್ತಾನೆ.

ಹಾಗಾದರೆ ಅಕ್ಷರೋಪಾಸಕರ ವಿಷಯದಲ್ಲಿ ಭಗವಂತನ ಅಭಿಪ್ರಾಯವೇನು? –ಎಂದರೆ ಆತನ ವಾಕ್ಯಗಳ ಅರ್ಥವನ್ನು ಇಲ್ಲಿ ಮನಸ್ಸಿನಲ್ಲಿ ಮೆಲುಕುಹಾಕಬೇಕಾದದ್ದಿದೆ.

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥
ಸಂನಿಯಮ್ಯೇನ್ದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ ॥

ಗೀ. ೧೨–೩, ೪

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥

ಗೀ. ೧೨–೩, ೪, ೫

ಅಕ್ಷರವೆಂಬ ಹೆಸರಿನ ಅವ್ಯಕ್ತರೂಪದ ಭಗವಂತನನ್ನು ಉಪಾಸನೆಮಾಡುವವರಿಗೂ ಆತನೇ ಗತಿ ( ತೇ ಪ್ರಾಪ್ನುವನ್ತಿ ಮಾಮೇವ ). ಆದರೂ ಹೊರಗಿನ ವಿಷಯಗಳ ಆಸಕ್ತಿಯಿಂದ ಹೊರಾಡುವ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಅಂತರ್ಮುಖರಾದವರಿಗೇ ಅಕ್ಷರಸ್ವರೂಪದ ಅನುಭವಸಾಧ್ಯ. ಆದ್ದರಿಂದ ಅವ್ಯಕ್ತಗತಿಯು ದೇಹಾಭಿಮಾನಿಗಳಿಗೆ ಪಡೆಯುವದು ಹೆಚ್ಚಿನ ಕ್ಲೇಶದಿಂದಲೇ. ಈ ಕಾರಣದಿಂದಲೇ ವಿಶ್ವರೂಪೋಪಾಸಕರು ಯುಕ್ತತಮರೆಂಬುದು. ಯಾರಿಗೆ ದೇಹಾಭಿಮಾನವಿರುತ್ತದೆಯೋ ಅವರು ಅಶರೀರನಾದ ನಿರ್ಧರ್ಮಕನಾದ ಅಕ್ಷರರೂಪದ ಪರಮಾತ್ಮನನ್ನು ಮನಸ್ಸಿಗೆ ಎಂದಿಗೂ ತಂದುಕೊಳ್ಳಲಾರರು. ನಾವು ಎಲ್ಲಿಗೆ ಪ್ರಯಾಣಮಾಡಬೇಕೆಂಬುದು ತಿಳಿಯದೆ, ರೈಲ್ವೆಟಿಕೆಟ್ ಕೇಳಿದಂತೆ ಆಗುವದು. ಅಕ್ಷರೋಪಾಸನೆಯನ್ನೇ ಮಾಡುವೆನೆಂಬ ಸಂಕಲ್ಪವು ಕ್ಲೇಶಕರವು. ಆದರೆ ವಿಶ್ವರೂಪವನ್ನು ಭಾವನೆಮಾಡುವವರಿಗೆ ಈ ಕ್ಲೇಶವಿಲ್ಲ. ಮನುಷ್ಯನ ಮನಸ್ಸು ಸ್ವಾಭಾವಿಕವಾಗಿ ಹೊರಗಡೆಗೇ ತಿರುಗಿರುತ್ತದೆ. ಆದ್ದರಿಂದ ಇಂದ್ರಿಯಗೋಚರವಾಗಿರುವ ವಿಶ್ವದ ರೂಪದಲ್ಲಿ ಭಗವದ್ಭಾವನೆಯನ್ನು ಮಾಡಿದರಾಯಿತು. ಇಷ್ಟೇ ಅಲ್ಲ; ಅವರಿಗೆ ಇನ್ನೊಂದು ಸೌಕರ್ಯವೂ ಇದೆ :

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥

ಗೀ. ೧೨–೬, ೭

ತಾವು ಮಾಡುವ ಸರ್ವಕರ್ಮಗಳನ್ನೂ ಭಗವಂತನಿಗೆ ಅರ್ಪಣೆಮಾಡಿ ವಿಶ್ವರೂಪಾತ್ಮನಿಗಿಂತ ಮತ್ತೊಂದನ್ನು ಆಶ್ರಯಿಸದೆ ಆ ಭಗವಂತನನ್ನೇ ಧ್ಯಾನಿಸು

ತ್ತಿದ್ದರೆ ಸರಿ, ಅವರನ್ನು ಭಗವಂತನೇ ಈ ಸಂಸಾರಸಾಗರದಿಂದ ಎತ್ತಿ ಉದ್ಧಾರ ಮಾಡುತ್ತಾನೆ. ಈ ವಿಶ್ವರೂಪೋಪಾಸನೆಗೆ ಅನುಕೂಲವಾಗಿರಲೆಂದೇ ನಾನು ಈವರೆಗೆ ಆಸ್ತಿಕ್ಯಾದಿಸಾಧನೆಗಳನ್ನು ಒಂದೊಂದಾಗಿ ಹೇಳಿರುತ್ತೇನೆ. ಈ ವಿಷಯ ವನ್ನು ಮತ್ತೊಮ್ಮೆ ವಿಚಾರಕ್ಕೆ ತೆಗೆದುಕೊಳ್ಳೋಣ.

## ೩೩. ವಿಶ್ವರೂಪೋಪಾಸನೆಗೆ ಸೋಪಾನ

( 2—9—69 )

ಭಗವಂತನು '**ಪಶ್ಯ ಮೇ ಪಾರ್ಥ ರೂಪಾಣಿ**' ಎಂದು ತನ್ನ ವಿಶ್ವರೂಪದ ದರ್ಶನವನ್ನು ಕೊಟ್ಟಾಗ ಅರ್ಜುನನಿಗೆ ಭಗವಂತನ ಮಹತ್ತ್ವವೂ ತನ್ನ ಅಲ್ಪತ್ವವೂ ಮನವರಿಕೆಯಾಯಿತು. ಕೊನೆಗೆ ಭಗವಂತನು ತನ್ನ ಮಾನುಷರೂಪವನ್ನು ಮತ್ತೆ ತೋರಿಸಿದಾಗ, ಪ್ರಸನ್ನನಾದ ಆತನನ್ನು ಕುರಿತು ವಿಶ್ವರೂಪೋಪಾಸಕರು ಹೆಚ್ಚಿನ ಯೋಗಿಗಳೊ, ಅಕ್ಷರೋಪಾಸಕರು ಹೆಚ್ಚಿನ ಯೋಗಿಗಳೊ?– ಎಂದು ಕೇಳಿದನು. ತಾನು ಈ ಎರಡರೊಳಗೆ ಯಾವ ಉಪಾಸನೆಯನ್ನು ಹಿಡಿಯಬೇಕು? –ಎಂಬುದನ್ನು ತಿಳಿಯುವದಕ್ಕೆಂದೇ ಈ ಪ್ರಶ್ನೆಯನ್ನು ಅವನು ಹಾಕಿದ್ದನು.

'ಉಪಾಸನೆ' ಎಂಬ ಶಬ್ದವು 'ಭಾವನೆ' ಎಂಬರ್ಥದಲ್ಲಿಯೂ 'ಜ್ಞಾನೋತ್ತರ ಚಿಂತನೆ' ಎಂಬರ್ಥದಲ್ಲಿಯೂ ಪ್ರಯುಕ್ತವಾಗುತ್ತದೆ. 'ಅಕ್ಷರೋಪಾಸನೆ' ಎಂಬ ಶಬ್ದವನ್ನು ಎರಡನೆಯ ಅರ್ಥದಲ್ಲಿಯೇ ಗೀತೆಯಲ್ಲಿ ಪ್ರಯೋಗಿಸಿರುತ್ತದೆ. ವಿಶ್ವ ರೂಪೋಪಾಸನೆ, ಅಕ್ಷರೋಪಾಸನೆ– ಎರಡೂ ಕ್ಲೇಶದಾಯಕವೇ ; ಎರಡೂ ಸಾಮಾನ್ಯರಿಗೆ ದಕ್ಕುವವುಗಳೇ ಅಲ್ಲ. ಆದರೂ ಲಕ್ಷಗಟ್ಟಲೆಯ ವ್ಯಾಪಾರಕ್ಕಿಂತ ಸಾವಿರಗಟ್ಟಲೆಯ ವ್ಯಾಪಾರವು ಹೇಗೆ ಹೆಚ್ಚಿನ ಜನರಿಗೆ ಸ್ವಾಧೀನವಾದೀತೋ ಹಾಗೆಯೇ ಅಕ್ಷರೋಪಾಸನೆಗಿಂತ ವಿಶ್ವರೂಪೋಪಾಸನೆಯೇ ಸುಲಭವಾದ ಸಾಧನೆ –ಎಂದು ಭಗವಂತನು ಹೇಳಿರುತ್ತಾನೆ.

ಆದರೆ ಯಾರಿಗೆ ಈ ವಿಶ್ವರೂಪೋಪಾಸನೆಯೂ ತಟ್ಟನೆ ಅಳವಡದೆ ಇರುತ್ತದೆ ಯೋ ಅಂಥವರು ಏನುಮಾಡಬೇಕು ?– ಎಂಬ ಪ್ರಶ್ನೆಯೂ ಏಳಬಹುದಷ್ಟೆ ? ಯಾರಿಗೆ ವಿಶ್ವವನ್ನೆಲ್ಲ ಉಂಡೆಯಾಗಿ ಮನಸ್ಸಿಗೆ ತಂದುಕೊಂಡು ಭಾವನೆಮಾಡು ವದು ಕಷ್ಟತರವಾಗಿರುತ್ತದೆಯೋ ಅಂಥವರು ಏನುಮಾಡಬೇಕು? ಅದನ್ನು ಸಾಧಿಸುವದಕ್ಕೆ ಅದಕ್ಕಿಂತಲೂ ಕೆಳಗಿನ ಮೆಟ್ಟಲಿನ ಸಾಧನವು ಯಾವದಾದರೂ

ಇದೆಯೆ ?– ಎಂದರೆ, ಇದೆ. ಭಗವಂತನು ಇಂಥವರನ್ನು ಲಕ್ಷ್ಯದಲ್ಲಿಟ್ಟು ಹೇಳುವದೇನೆಂದರೆ :

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಞ್ಜಯ ॥ ೯ ॥**

ನಾನು ಹೇಳಿದಂತೆ ವಿಶ್ವರೂಪದಲ್ಲಿಯೇ ಚಿತ್ತವನ್ನು ಸಮಾಧಾನಗೊಳಿಸಿಕೊಳ್ಳುವದಕ್ಕೆ ಆಗದೆ ಇದ್ದರೆ, ಅಭ್ಯಾಸಯೋಗದಿಂದ ಆ ವಿಶ್ವರೂಪವನ್ನು ಸೇರುವದಕ್ಕೆ ಪ್ರಯತ್ನಿಸು –ಎಂದು ಭಗವಂತನು ಉಪದೇಶಿಸಿರುತ್ತಾನೆ. ಅಭ್ಯಾಸವೆಂದರೆ ಅದೇ ವಿಷಯದಲ್ಲಿ ಮನಸ್ಸನ್ನು ಮತ್ತೆಮತ್ತೆ ನಿಲ್ಲಿಸುವದಕ್ಕೆ ಪ್ರಯತ್ನಿಸುವದು. ಚೇಳು, ಜೇಡರಹುಳು–ಮುಂತಾದವುಗಳು ಗೋಡೆಯಮೇಲಕ್ಕೆ ಅಥವಾ ಒಂದು ಮರದ ಮೇಲಕ್ಕೆ ಏರುವದಕ್ಕೆ ಪ್ರಯತ್ನಿಸಿದಾಗ ಮತ್ತೆಮತ್ತೆ ಜಾರಿ ಕೆಳಕ್ಕೆ ಬೀಳುತ್ತವೆ. ಆದರೂ ಅವು ಮತ್ತೆಮತ್ತೆ ಸ್ಥಿರಪ್ರಯತ್ನದಿಂದ ಆ ಗುರಿಯನ್ನು ಮುಟ್ಟಿಯೇತೀರುತ್ತವೆ. ಅಲ್ಲ ಮತ್ತೆಮತ್ತೆ ಮಾಡುವ ಪ್ರಯತ್ನವೊಂದಲ್ಲದೆ ಕಾರ್ಯಜಯಕ್ಕೆ ಮತ್ತೆ ಯಾವದೂ ಉಪಾಯವಿರುವದಿಲ್ಲ. ಮಕ್ಕಳು ಏಳುವದು ಬೀಳುವದು–ಹೀಗೆ ಮಾಡುತ್ತಾಮಾಡುತ್ತಾ ಕೊನೆಗೆ ತಮ್ಮ ಕಾಲಮೇಲೆ ತಾವು ನಿಂತುಕೊಳ್ಳುವದನ್ನು ಕಲಿತುಕೊಂಡುಬಿಡುತ್ತವೆ. ಮ ರ ಳಿ ಮ ರ ಳಿ ಯತ್ನಿಸುವದರಿಂದ ಕಾರ್ಯವು ಸಿದ್ಧಿಯಾಗುವದೆಂಬುದು ಲೋಕದಲ್ಲಿ ಕಂಡೇಇದೆ: ಇದರಂತೆ ಇಲ್ಲಿಯೂ ಹೊರಗೆ ವಿಶ್ವರೂಪದ ಭಾವನೆಯನ್ನು ಮಾಡುವಾಗ ಹಿಂದಿನ ವಾಸನೆಯಪ್ರಾಬಲ್ಯದಿಂದ ಪರಿಚ್ಛಿನ್ನದೃಷ್ಟಿಯು ಮತ್ತೆಮತ್ತೆ ಎದ್ದುಕೊಳ್ಳುವದು. ಆಗ ತನ್ನನ್ನುತಾನೇ ಎಚ್ಚರಿಸಿಕೊಂಡು ಸಮಷ್ಟಿಭಾವನೆಯನ್ನು ಮಾಡುವದಕ್ಕೆ ಪ್ರಯತ್ನಿಸಬೇಕು. ಇದೇ ಅಭ್ಯಾಸಯೋಗವು.

ಹೀಗೆ ಅಭ್ಯಾಸಕ್ಕೆ ತಕ್ಕಷ್ಟು ಸ್ಥೈರ್ಯವಿಲ್ಲದವರು ಏನುಮಾಡಬೇಕು ? –ಎಂದರೆ

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥**

ಗೀ. ೧೨–೧೦

ಅಭ್ಯಾಸಯೋಗಕ್ಕೂ ಅಧಿಕಾರವಿಲ್ಲದವರು ಭಗವತ್ಕರ್ಮವನ್ನು ಮಾಡುವದಕ್ಕೆ ಪ್ರಯತ್ನಿಸಬೇಕು. ಭಗವಂತನಿಗಾಗಿ ಕರ್ಮವನ್ನು ಮಾಡುತ್ತಿದ್ದರೆ, ಕೊನೆಗೆ ಅಭ್ಯಾಸಯೋಗಕ್ಕೆ ಕಾಲಾನುಕಾಲದಲ್ಲಿ ಅಧಿಕಾರಿಯಾಗುವನು. ಅಭ್ಯಾಸದಿಂದ ಯೋಗವನ್ನು ಸಂಪಾದಿಸಬೇಕೆಂದು ಆರನೆಯ ಅಧ್ಯಾಯದಲ್ಲಿ ಹೇಳಿರುವದು

ಈ ಅಭ್ಯಾಸವಲ್ಲ. ಅಲ್ಲಿ ಮನಸ್ಸು ಬಹಿರ್ಮುಖವಾಗುತ್ತಿರುವದನ್ನು ತಪ್ಪಿಸಿ ಅಂತರ್ಮುಖವಾಗಿ ಮಾಡಿಕೊಳ್ಳುವ ಪ್ರಯತ್ನವನ್ನು ಅಭ್ಯಾಸವೆಂದು ಕರೆದಿದೆ; ಇಲ್ಲಿ ಸಮಷ್ಟಿಭಾವನೆಗಾಗಿ ಮಾಡುವ ಪ್ರಯತ್ನವೇ ಅಭ್ಯಾಸವೆಂದಿದೆ. ಹೇಗೇ ಆಗಲಿ, ಈ ಎರಡು ಕಡೆಯಲ್ಲಿಯೂ ಅಭ್ಯಾಸಕ್ಕೆ ವೈರಾಗ್ಯವು ಅವಶ್ಯವಾಗಿ ಬೇಕು. ಕರ್ಮವನ್ನು ಮಾಡುವಾಗ ಅದರ ಫಲವು ನಮಗೆ ಬೇಕು– ಎಂಬ ತಹತಹಪಡುವಿಕೆಯನ್ನು ತಪ್ಪಿಸಿಕೊಳ್ಳುವದಕ್ಕೆ ವೈರಾಗ್ಯವು ಅವಶ್ಯವಾಗುವ ದಷ್ಟೆ ? ಅದಕ್ಕಾಗಿ ಮನೋವಾಕ್ಕಾಯಗಳಿಂದ ಮಾಡುವ ಕರ್ಮಗಳನ್ನೆಲ್ಲ ಭಗವಂತನಿಗೆ ಅರ್ಪಣೆಮಾಡುವದು ಒಂದು ಉತ್ತಮಸಾಧನವು. ಮನೆಯ ಒಡೆಯನಿಗಾಗಿ ಆಳು ಕೆಲಸಮಾಡುತ್ತಿರುವಾಗಲೆಲ್ಲ, 'ಇದು ನನ್ನ ಯಜಮಾನನಿಗಾಗಿ ಮಾಡುತ್ತಿರುವ ಕೆಲಸ' ಎಂಬ ತಿಳಿವಳಿಕೆ ಇದ್ದೇಇರುತ್ತದೆ. ಆದರೆ ಹೀಗೆ ಮಾಡುವದರಿಂದ 'ನನಗೆ ಯಜಮಾನನು ಇಂತಿಷ್ಟು ಸಂಬಳವನ್ನು ಕೊಡುತ್ತಾನೆ. ಅಥವಾ ಅನ್ನಬಟ್ಟೆಗಳನ್ನು ಒದಗಿಸಿಕೊಟ್ಟು ನನ್ನ ಯೋಗ ಕ್ಷೇಮವನ್ನು ನೋಡಿಕೊಳ್ಳುತ್ತಾನೆ' ಎಂಬ ನಂಬಿಕೆಯೂ ಒಳಗೆ ಇರುತ್ತದೆ. ಆದರೆ ಇಲ್ಲಿ ಅಂಥ ಆಸೆಯೂ ಇಲ್ಲದೆ "ನಾನು ಮಾಡುವದೆಲ್ಲ ಭಗವಂತನ ಕರ್ಮವೇ, ಆತನಿಗೇ ಇದೆಲ್ಲ ಅರ್ಪಿತವಾಗಲಿ, ಇದಕ್ಕೆ ಫಲವು ಏನೇ ಆಗಲಿ, ಅದು ನನಗೆ ಸೇರಿದ್ದಲ್ಲ, ಆತನಿಗೆ ಪ್ರೀತಿಯುಂಟಾದರೆ ಸಾಕು" ಎಂಬ ಭಗವತ್ಕರ್ಮಪರತೆಯ ಉಚ್ಚಭಾವನೆಯಿರಬೇಕು.

ಹೀಗೆ ಭಗವತ್ಕರ್ಮವನ್ನು ಮಾಡುವದಕ್ಕೆ ಆಗದೆ ಇದ್ದರೆ, ಆಗ ಏನು ಮಾಡಬೇಕು ? ಎಂದರೆ ಭಗವಂತನ ಉತ್ತರವಿದು :

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ |**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ||** ಗೀ. ೧೨–೧೧

ಭಗವತ್ಕರ್ಮವನ್ನು ಮಾಡುವಷ್ಟು ಮೇಲಿನ ಮಟ್ಟಕ್ಕೂ ಏರದ ಚಿತ್ತವುಳ್ಳವನು ತಾನು ಯಾವ ಕರ್ಮವನ್ನು ಮಾಡಿದರೂ ಕರ್ಮಕ್ಕಾಗಿ ಕರ್ಮವನ್ನು ಮಾಡ ಬೇಕು. ಕರ್ಮಕ್ಕೆ ಯಾವ ಫಲವೇ ಉಂಟಾಗಲಿ, ಅದು ತನಗೆ "ಇಷ್ಟ, ಅಥವಾ ಅನಿಷ್ಟ"–ಎಂಬ ಭಾವನೆಯಿಲ್ಲದೆ ಕರ್ಮವನ್ನೇ ಮಾಡುತ್ತಿರಬೇಕು. ಭಗವತ್ಕ ರ್ಮವನ್ನು ಮಾಡುವದಕ್ಕೆ ಏನು ಅಡ್ಡಿ ?–ಎಂದರೆ ನಾನು ಕರ್ಮವನ್ನು ಮಾಡಿ ದರೆ ಭಗವತ್ಕರ್ಮವು ಹೇಗಾದೀತು ? ಅಥವಾ ಕರ್ಮವನ್ನು ಭಗವಂತನಿಗೇ ಅರ್ಪಿಸಿ ಸುಮ್ಮನೆ ಇರುವದೆಂದರೆ ಹೇಗೆ ಸಾಧ್ಯ ?– ಎಂಬ ಶಂಕೆಯು ಲೌಕಿಕ ಬುದ್ಧಿಗೆ ಆಗಾಗ್ಗೆ ಅಂಕುರಿಸುತ್ತಲೇಇರುತ್ತದೆ. ಅದನ್ನು ಬದಿಗೊತ್ತಿ "ಕರ್ಮ ವನ್ನು ಮಾಡುವದು ನನ್ನ ಪಾಲಿಗೆ ಬಂದದ್ದು, ಫಲದ ಯೋಚನೆ ನನಗೇಕೆ ?

ಏನಾಗುತ್ತದೆಯೋ ಆಗಲಿ, ನಾನಂತೂ ಕರ್ತವ್ಯವನ್ನು ಮಾಡಿಬಿಡುವೆನು”–ಎಂಬ ಉದಾತ್ತಭಾವನೆಯನ್ನು ಸಂಪಾದಿಸಿಕೊಳ್ಳುವದೇ ಈ ಶಂಕೆಗೆ ಪರಿಹಾರ. “ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ”–ಕರ್ಮವೊಂದೇ ನಿನ್ನ ಪಾಲಿಗಿರಲಿ, ಫಲದ ಚಿಂತೆಯನ್ನು ಬಿಡು–ಎಂಬುದು ಕರ್ಮಯೋಗದಲ್ಲಿ ಮೊಟ್ಟಮೊದಲನೆಯ ಮೆಟ್ಟಲು. ಭಗವತ್ಕರ್ಮವನ್ನು ಮಾಡುವಷ್ಟು ಮೇಲಕ್ಕೆ ಏರಲಾರದವನು “ಸರ್ವಕರ್ಮಫಲತ್ಯಾಗ” ಎಂಬ ಮೊದಲನೆಯ ಸಾಧನೆವನ್ನು ಎಲ್ಲಕ್ಕೂ ಮುಂಚೆ ಅಳವಡಿಸಿಕೊಳ್ಳಬೇಕು.

ಸರ್ವಕರ್ಮಫಲತ್ಯಾಗವೆಂದರೇನು? ಹಿಂದೆ ಹೇಳಿದ್ದು ಭಗವದರ್ಪಣಕರ್ಮ. ನಾವು ಮಾಡುವ ಕರ್ಮವೆಲ್ಲವೂ ಭಗವಂತನಿಗಾಗಿಯೇ ಮಾಡುವ ಕರ್ಮವಾಗಿರಬೇಕು; ಅದು ಭಗವತ್ಕರ್ಮ. ಈಗ ಹೇಳುವದು ಆ ಕರ್ಮವಲ್ಲ. ಲೌಕಿಕ, ಶಾಸ್ತ್ರೀಯ–ಯಾವ ಕರ್ಮವೇ ಆಗಲಿ ಅದನ್ನು ಮಾಡಿಬಿಡಬೇಕು, ಅದರ ಫಲವನ್ನು ಮಾತ್ರ ನಿರೀಕ್ಷಿಸಬಾರದು– ಎಂಬುದೇ ಸರ್ವಕರ್ಮಫಲತ್ಯಾಗ. ಒಬ್ಬ ಹೆಣ್ಣುಮಗಳು ನನ್ನನ್ನು ಒಮ್ಮೆ “ಭಗವಂತನನ್ನು ಎಡೆಬಿಡದೆ ಸ್ಮರಿಸುತ್ತಿರುವ ಅಭ್ಯಾಸವನ್ನು ಹೇಗೆ ಮಾಡಲಿ? ಹೆಂಗಸರಿಗೆ ಮಾಡಬೇಕಾದ ಎಷ್ಟೋ ಕೆಲಸಗಳಿರುತ್ತವೆ. ಉದಾಹರಣೆಗೆ ನೀರುಸೇದುವ ಕೆಲಸವನ್ನು ತೆಗೆದುಕೊಳ್ಳೋಣ: ಆಗ ಕೊಡ ತುಂಬಿತೊ, ಇಲ್ಲವೊ?– ಎಂಬ ಯೋಚನೆ ಮನಸ್ಸಿಗೆ ಹತ್ತದೆ ಇದ್ದೀತೆ?” ಎಂದು ಕೇಳಿದಳು. ಅದಕ್ಕೆ ನಾನು “ಕೊಡ, ಹಗ್ಗ, ನೀರು, ಬಾವಿ –ಎಲ್ಲವನ್ನೂ ಭಗವಂತನೇ ಎಂದು ಇಟ್ಟುಕೊಂಡುಬಿಡಿ. ಭಗವಂತನಿಗಿಂತ ವ್ಯತಿರಿಕ್ತವಾಗಿ ಕೊಡವೂ ಇಲ್ಲ, ನೀರೂ ಇಲ್ಲ. ಇದೇ ನಿಮ್ಮ ಭಾವನೆಯಾಗಿ ಉಳಿದುಕೊಳ್ಳಲಿ” ಎಂದೆನು.

ನಾನು ಹೇಳಿದ ಉತ್ತರದ ಅರ್ಥವು ಅವರ ಮನಸ್ಸಿಗೆ ಹತ್ತಿತೊ, ಇಲ್ಲವೊ –ನಾನರಿಯೆ. ಆದರೆ ಲೌಕಿಕಕರ್ಮಗಳನ್ನು ಮಾಡುವಾಗ, “ಇದು ನಾನು ಮಾಡುವ ಕರ್ಮ; ಇದಕ್ಕೆ ಇಂಥ ಫಲವಾಗಬೇಕು” ಎಂಬ ಯೋಚನೆಯನ್ನು ಬಿಡುವ ಅಭ್ಯಾಸವಾದರೂ ಆಳವಟ್ಟರೆ ಎಷ್ಟೋ ಉತ್ತಮಸಾಧನವಾದೀತು.

ಯಾ ದೋಹನೇಽವಹನನೇ ಮಥನೋಪಲೇಪ-
ಪ್ರೇಙ್ಖೇಙ್ಖನಾರ್ಭರುದಿತೋಕ್ಷಣಮಾರ್ಜನಾದೌ ।
ಗಾಯನ್ತಿ ಚೈನಮನುರಕ್ತಧಿಯೋಽಶ್ರುಕಣ್ಠ್ಯೋ
ಧನ್ಯಾ ವ್ರಜಸ್ತ್ರಿಯ ಉರುಕ್ರಮಚಿತ್ತಯಾನಾಃ ।

ಭಾಗ. ೩೪–೧೫

ಗೋಪಸ್ತ್ರೀಯರು ಹಾಲುಕರೆಯುವದು, ಭತ್ತವನ್ನು ಕುಟ್ಟುವದು, ಮೊಸರು ಕಡೆಯುವದು, ನೆಲಸಾರಿಸುವದು, ತೊಟ್ಟಿಲುತೂಗುವದು, ಮಾತನಾಡುವದು, ಮಗು ಅಳುವಾಗ ಆಡಿಸುವದು, ಪಾತ್ರೆತೊಳೆಯುವದು- ಹೀಗೆ ಎಲ್ಲಾ ಕಾಲದಲ್ಲಿಯೂ ಗದ್ಗದಕಂಠರಾಗಿ ಅನುರಕ್ತರಾಗಿ ಕೃಷ್ಣನನ್ನೇ ಗಾನಮಾಡುತ್ತಿದ್ದರಂತೆ. ಅವರು ತಮ್ಮತಮ್ಮ ಕೆಲಸಗಳನ್ನು ಮಾಡುತ್ತಿರುವಾಗಲೂ ಕೃಷ್ಣಸ್ಮರಣೆಯ ಚಿತ್ತವೆಂಬ ರಥದಮೇಲೆ ಅವನಬಳಿಗೆ ಹೋಗಿಬಿಡುತ್ತಿದ್ದರು !

ಹುಡುಗರು ಪರೀಕ್ಷೆಯ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವಾಗ ಯಾವ ಪ್ರಶ್ನೆಗೆ ಹೆಚ್ಚು ಗುಣಸಂಖ್ಯೆಯನ್ನಿಟ್ಟಿರುವದೋ ಅದಕ್ಕೆ ಉತ್ತರವನ್ನು ಕೊಡೋಣವೆಂದು ಪ್ರಯತ್ನಿಸಿ ಅದರ ಯೋಚನೆಯಲ್ಲಿ ಮುಳುಗಿ ಸುಲಭವಾಗಿ ಉತ್ತರವನ್ನು ಕೊಡಬಹುದಾದ ಪ್ರಶ್ನೆಗಳನ್ನೂ ಬಿಡುವದುಂಟು ! ಆದ್ದರಿಂದಲೇ ಈಚೆಗೆ ಪ್ರಶ್ನೆಗಳ ಮುಂದೆ ಅವಕ್ಕಾಗಿ ಗೊತ್ತುಪಡಿಸಿದ ಗುಣಸಂಖ್ಯೆಯನ್ನು ಹಾಕುವ ಪದ್ಧತಿಯನ್ನು ಕೈಬಿಟ್ಟಿರುತ್ತಾರೆಂದು ಕೇಳುತ್ತೇನೆ. ಇನ್ನಂತಿರಲಿ. "ಕರ್ಮವನ್ನು ಮಾಡುವವನು ನಾನು" ಎಂಬ ಕರ್ಮಸಂಗ ; 'ಇದರ ಫಲವು ನನಗೆ ಆಗಬೇಕು' ಎಂಬ ಫಲಸಂಗ ; ಫಲವು ಬಂದೊದಗಿದಾಗ 'ಈ ಫಲವು ಪ್ರಾಪ್ತವಾದದ್ದು ಒಳ್ಳೆಯದಾಯಿತು. ಇಲ್ಲದಿದ್ದರೆ, ಈ ಸುಖವೆಲ್ಲಿರುತ್ತಿತ್ತು ?' ಎಂದಾಗಲಿ 'ಅಯ್ಯೊ, ಹಾಗೆ ಮಾಡಿದ್ದಕ್ಕಲ್ಲವೆ, ಈ ದುಷ್ಫಲವನ್ನು ಅನುಭವಿಸಬೇಕಾಯಿತು !' ಎಂದು ಫಲವನ್ನು ಭೋಗಿಸುವಾಗ ಹರ್ಷವಿಷಾದಗಳನ್ನು ಪಡೆಯುವ ಭೋಗಸಂಗ- ಇವಿಷ್ಟನ್ನೂ ಬಿಟ್ಟುಬಿಟ್ಟರೆ ಆಗ ಕರ್ಮದಿಂದ ನಮಗೆ ಯಾವ ಬಂಧವೂ ಆಗಲಾರದು. ಇದೇ 'ಸರ್ವಕರ್ಮಫಲತ್ಯಾಗ'ದಿಂದ ಆಗುವ ಹೆಚ್ಚಿನ ಲಾಭ.

ಫಲತ್ಯಾಗವನ್ನು ಮಾಡಿದಮೇಲೂ ಕರ್ಮವನ್ನು ಮಾಡುತ್ತಿರುವದನ್ನು ದೊಡ್ಡವರ ಉದಾಹರಣೆಯನ್ನು ನೋಡಿ ಕಲಿತುಕೊಳ್ಳಬೇಕು. ಒಂದು ಸ್ಕೂಲಿಗೆ ಬಂದ ಒಬ್ಬ ಉಪಾಧ್ಯಾಯರು ತಾವು ಮಾರನೆಯದಿನ ಹೇಳಬೇಕಾಗಿರುವ ಪಾಠಕ್ಕೆ ಬೇಕಾದ ಸಿದ್ಧತೆಯನ್ನು ರಾತ್ರೆಯಲ್ಲಿ ಮಾಡಿ ಬರೆದಿಟ್ಟುಕೊಳ್ಳುತ್ತಿದ್ದರು; ಅಲ್ಲಿಯ ಮುಖ್ಯೋಪಾಧ್ಯಾಯರು 'ನೋಡಿದಿರಾ ! ಅವರು ಯಾವ ಪರೀಕ್ಷೆಗೂ ಹೋಗಬೇಕಾದದ್ದಿಲ್ಲವಾದರೂ ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ಪಾಠನಕ್ಕೆ ಸಿದ್ಧರಾಗಿ ಮೊದಲೆ ಪಾಠದ ಟಿಪ್ಪಣಿಯನ್ನು ಬರೆದಿಟ್ಟುಕೊಂಡಿರುತ್ತಾರೆ!' ಎಂದು ವಿದ್ಯಾರ್ಥಿಗಳಿಗೆ ಅವರ ಆದರ್ಶವನ್ನು ತೋರಿಸುತ್ತಿದ್ದರು. ಹೀಗೆಯೇ ಭಗವಂತನು ಸರ್ವಕರ್ಮಫಲತ್ಯಾಗದಿಂದ ಆಗುವ ಪ್ರಯೋಜನವನ್ನು ಮನದಟ್ಟುಮಾಡಿಕೊಡುವದಕ್ಕಾಗಿ ಹೀಗೆನ್ನುತ್ತಿದಾನೆ :

ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾನ್ತಿರನನ್ತರಮ್ ॥ ಗೀ. ೧೨-೧೨

ವಿವೇಕಪೂರ್ವಕವಾಗಿ ಮತ್ತೆಮತ್ತೆ ಅಭ್ಯಾಸವನ್ನು ಮಾಡುತ್ತಿರುವದಕ್ಕಿಂತ ಜ್ಞಾನವು ಮೇಲು; ಏಕೆಂದರೆ ಜ್ಞಾನಕ್ಕಾಗಿಯೇ ಅಭ್ಯಾಸವನ್ನು ಮಾಡುವರು. ಈ ಜ್ಞಾನಕ್ಕಿಂತ ಜ್ಞಾನಪೂರ್ವಕವಾದ ಧ್ಯಾನವು ಮೇಲು. ಇಲ್ಲಿ ತತ್ತ್ವವನ್ನು ಅರಿತಮೇಲೆ ಅದರ ಚಿಂತನೆಯಲ್ಲಿ ನಿಂತವನಿಗೇ ಹೆಚ್ಚಿನ ಪ್ರಯೋಜನವುಂಟಾಗುವದು–ಎಂಬುದನ್ನು ನೆನಪಿಗೆ ತಂದುಕೊಟ್ಟಿದೆ. ಈ ಧ್ಯಾನಕ್ಕಿಂತಲೂ ಅದರಿಂದಾಗುವ ಕರ್ಮಫಲತ್ಯಾಗವು ಹೆಚ್ಚಿನದು. ಇಲ್ಲಿ "ಕರ್ಮಫಲತ್ಯಾಗ"ವೆಂದರೆ ಶ್ರೌತಸ್ಮಾರ್ತಕರ್ಮಗಳಿಂದಾಗುವ ಫಲದಿಂದ ಬಿಡುಗಡೆಯಾಗುವದು. ಯಾವನು ತತ್ತ್ವವನ್ನರಿತುಕೊಂಡು ಅದರ ಧ್ಯಾನದಲ್ಲಿಯೇ ನಿಲ್ಲುವನೋ ಅವನಿಗೆ ಮನಸ್ಸಿನಲ್ಲಿರುವ ಎಲ್ಲಾ ಕಾಮಗಳೂ ತೊಲಗಿಬಿಡುವದರಿಂದ ಯಾವ ಕರ್ಮಫಲದ ಅಂಟೂ ಆಗುವದಿಲ್ಲ. ಆದ್ದರಿಂದ ಕೃತಕೃತ್ಯರಾಗುವವರಿಗೆ ಕೊನೆಯಲ್ಲಿ ಕರ್ಮಬಂಧದಿಂದ ಬಿಡುಗಡೆಯಾಗುವದೇ ಫಲವೆಂದಾಯಿತಷ್ಟೆ? ಇವನ್ನು ಲಕ್ಷ್ಯದಲ್ಲಿಟ್ಟರೆ ಕರ್ಮಫಲವನ್ನು ತ್ಯಾಗಮಾಡುವದೆಂಬುದು ಮನಸ್ಸಿನ ಶಾಂತಿಗೆ ಎಷ್ಟು ಸಮೀಪದ ಕಾರಣವೆಂದಾಯಿತು? ಆದ್ದರಿಂದ ಮತ್ತೆ ಯಾವ ಸಾಧನವನ್ನು ಮಾಡುವದಕ್ಕೂ ಆಗದಿದ್ದರೂ ಸರ್ವಕರ್ಮಫಲತ್ಯಾಗವನ್ನಾದರೂ ಮಾಡಬೇಕು– ಎಂದು ಭಗವಂತನು ಇಲ್ಲಿ ಉಪದೇಶಿಸಿರುತ್ತಾನೆ.

"ತ್ಯಾಗೇನೈಕೇ ಅಮೃತತ್ವಮಾನಶುಃ" (ತ್ಯಾಗದಿಂದ ಅಮೃತತ್ವವನ್ನೇ ಅರಿತವರು ಪಡೆದಿರುತ್ತಾರೆ). ಎಂಬ ಶ್ರುತಿಯನ್ನನುಸರಿಸಿ ಇಲ್ಲಿ ಸರ್ವಕರ್ಮಫಲತ್ಯಾಗವನ್ನು ಹೊಗಳಿರುತ್ತದೆ. ವಿಶ್ವರೂಪಚಿಂತನೆ, ಅಭ್ಯಾಸಯೋಗ, ಭಗವದರ್ಥಕರ್ಮ–ಇವು ಯಾವವೂ ದಕ್ಕದಿದ್ದರೂ ಸರ್ವಕರ್ಮಫಲತ್ಯಾಗವನ್ನಾದರೂ ಮುಮುಕ್ಷುವಾದವನು ಅಭ್ಯಾಸಮಾಡುತ್ತಿರಬೇಕು. ಅವನಿಗೆ ಕ್ರಮಕ್ರಮವಾಗಿ ವಿಶ್ವರೂಪಚಿಂತನೆಯು–ಅಷ್ಟೇಕೆ? ಕಾಲಕ್ರಮದಲ್ಲಿ ಅಕ್ಷರೋಪಾಸನೆಯು ಕೂಡ–ವಶವಾಗಬಹುದು ಎಂಬುದೇ ಇಲ್ಲಿ ಭಗವಂತನ ಆಶಯ.

# ೩೪. ಜ್ಞಾನಿಗಳ ವ್ಯವಹಾರ

( 3—9—69 )

ಅಕ್ಷರೋಪಾಸಕರ ಉಪಾಸನೆಯೆಂಬುದು ಆತ್ಮಾನುಸಂಧಾನವೇ ಆಗಿರು ತ್ತದೆ. ಈ ದಿನ ಅದರ ವಿಷಯವನ್ನು ಕುರಿತು ಮಾತನಾಡಬೇಕೆಂದಿದ್ದೆನು. ಇಂದು ಕೃಷ್ಣಾಷ್ಟಮಿಯಾಗಿರುವದರಿಂದ ಶ್ರೀಕೃಷ್ಣನ ವಿಷಯವನ್ನೇ ಕುರಿತು ಸ್ವಲ್ಪ ಹೇಳುವೆನು. ನಾನು ಕೃಷ್ಣಾಷ್ಟಮಿಯ ವ್ರತವನ್ನು ಕುರಿತು ಹೇಳುವದಕ್ಕೆ ಹೊರಟಿಲ್ಲ; ರಾಮ, ಕೃಷ್ಣ– ಮುಂತಾದ ರೂಪಗಳನ್ನು ತಾಳಿ ಲೋಕೋದ್ಧಾರವನ್ನು ಮಾಡುತ್ತಿರುವಾಗಲೂ ಭಗವಂತನು ತನ್ನ ಸ್ವರೂಪ ದಲ್ಲಿಯೇ ಇದ್ದುಕೊಂಡು ಹೇಗೆ ವ್ಯವಹರಿಸುತ್ತಿದ್ದನು ?– ಎಂಬುದನ್ನು ನಿಮಗೆ ನೆನಪುಮಾಡಿಕೊಡುವದಕ್ಕೆ ಯತ್ನಿಸುವೆನು. ಅಷ್ಟೆ.

ಈಗಿನ ಕಾಲದಲ್ಲಿ ಕೆಲವರು ಜ್ಞಾನಿಗಳೆಂದು ಕೊಚ್ಚಿಕೊಳ್ಳುತ್ತಿರುವವರು 'ಕರ್ಮವು ಅಧಮಾಧಿಕಾರಿಗಳಿಗೆ ಹೇಳಿದ್ದು, ಉಪಾಸನೆಯು ಮಧ್ಯಮಾಧಿಕಾರಿ ಗಳಿಗೆ, ಜ್ಞಾನವೇ ಇಲ್ಲಿ ಮುಖ್ಯವಾದದ್ದು'–ಎನ್ನುತ್ತಾ ಯಾವ ಕರ್ಮವನ್ನೂ ಮಾಡದೆ ಉಪಾಸನೆಯ ಗೋಜೂ ಇಲ್ಲದೆ ವಿಧಿನಿಷೇಧಗಳನ್ನು ಮೀರಿರುವವರು ತಾವು–ಎನ್ನುತ್ತಿರುತ್ತಾರೆ. ನಿಜವಾಗಿಯೂ ಜ್ಞಾನಿಯಾಗಿರುವವನು ಹೀಗೆ ಎಂದಿಗೂ ಮಾಡನು. ಅವನು ತಾನು ವ್ಯವಹಾರದೃಷ್ಟಿಯಿಂದ ಯಾವ ಆಶ್ರಮ ದಲ್ಲಿರುತ್ತಾನೋ ಆ ಆಶ್ರಮಕ್ಕೆ ತಕ್ಕ ಕರ್ಮವನ್ನು ಮಾಡುತ್ತಾ ಮಿಕ್ಕವರಿಗೂ ಮೇಲುಪಙ್ಕ್ತಿಯನ್ನು ಹಾಕಿಕೊಡುತ್ತಾನೆ.

ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಙ್ಗಿನಾಮ್ ।
ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥

ಗೀ. ೩–೨೬

ಸಾಮಾನ್ಯಜನರು ತಾವು ಸ್ವಭಾವದಿಂದಲೇ ಕರ್ತೃಭೋಕ್ತೃಗಳಾಗಿರುವೆವೆಂದು ಭಾವಿಸಿಕೊಂಡಿರುತ್ತಾರೆ. ಜ್ಞಾನಿಯಾದವನು ಮಿಕ್ಕವರು ಹೇಗೆ ಕರ್ಮವನ್ನು ಮಾಡುತ್ತಿರುತ್ತಾರೋ ಹಾಗೆಯೇ ಮಾಡುತ್ತಿರುತ್ತಾನೆಯೇ ಹೊರತು, ತಾನು ಜ್ಞಾನಿಯಾದ್ದರಿಂದ ತನಗೆ ಕರ್ಮದ ಗೊಡವೆಯೇನೂ ಇಲ್ಲವೆಂದು ಎಂದಿಗೂ ಹೇಳಿಕೊಳ್ಳುವದಿಲ್ಲ. ಕರ್ಮವನ್ನು ಮಾಡುವ ಅಜ್ಞರು ಕರ್ಮದಲ್ಲಿ ಆಸಕ್ತರಾಗಿ 'ಇದು ನನ್ನ ಕರ್ಮ, ಇದರ ಫಲವು ನನಗೆ ಆಗುವದು'– ಎಂಬ ತಪ್ಪುಭಾವನೆ ಯನ್ನು ತಳೆದಿರುತ್ತಾರೆ; ಜ್ಞಾನಿಯು ಮಾತ್ರ ಅಸಕ್ತನಾಗಿರುತ್ತಾನೆ. ಅಂತಃ ಕರಣದಲ್ಲಿರುವ ಭಾವನೆಯಲ್ಲಿ ಹೀಗೆ ಭೇದವಿದ್ದರೂ ಹೊರಗೆ ಮಾಡುತ್ತಿರುವ

ಕರ್ಮವಲ್ಲಿ ಯಾವ ಹೆಚ್ಚುಕಡಿಮೆಯೂ ಇರುವದಿಲ್ಲ. ಜ್ಞಾನಿಯು ಕರ್ಮವನ್ನು ಮಾಡುತ್ತಿರುವಾಗ ಅವನ ಮನಸ್ಸಿನ ಸ್ಥಿತಿ ಹೇಗಿರುವದು ?–ಎಂದರೆ

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತನ್ತೇ ಇತಿ ಮತ್ವಾ ನ ಸಜ್ಜತೇ ॥** ಗೀ. ೩–೨೮

ತತ್ತ್ವವನ್ನು ಬಲ್ಲವನಿಗೆ ಗುಣಗಳ ಮತ್ತು ಕರ್ಮಗಳ ವಿವೇಕವು ಉಂಟಾಗುತ್ತದೆ. ಇಂದ್ರಿಯರೂಪವಾದ ಗುಣಗಳು ವಿಷಯರೂಪವಾಗಿರುವ ಗುಣಗಳಲ್ಲಿ ವ್ಯಾಪಾರಮಾಡುತ್ತಿರುವವು– ಎಂಬುದರ ಅರಿವು ಇರುವದರಿಂದ 'ಇದು ನನ್ನ ಕರ್ಮ'–ಎಂಬ ಅಭಿಮಾನವು ಎಂದಿಗೂ ಆಗುವದಾಗಿರುವದಿಲ್ಲ. ಅವನು ಹೊರಗೆ ಕರ್ಮವನ್ನು ಮಾಡುವದರಲ್ಲಿ ಯಾರಿಗಿಂತಲೂ ಹಿಂದೆ ಬಿದ್ದಿರುವದಿಲ್ಲವಾದರೆ ಎಲ್ಲವೂ ಬ್ರಹ್ಮವೇ ಎಂಬ ಬುದ್ಧಿಯು ಅವನಿಗೆ ನಿಸ್ಸಂಶಯವಾಗಿ ಬಿಟ್ಟಿರುತ್ತದೆ.

ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ॥ ಗೀ. ೪–೨೪

ಎಂದು ಹೇಳಿರುವಂತೆ ಯಾವ ಸ್ರುಕ್ಸ್ರುವ– ಮುಂತಾದ ಸಾಧನಗಳಿಂದ ಅವನು ಹವಿಸ್ಸನ್ನು ಅರ್ಪಿಸುತ್ತಾನೋ, ಆ ಸಾಧನವು ಅವನ ದೃಷ್ಟಿಯಲ್ಲಿ ಸಾಧನವಾಗಿರುವದಿಲ್ಲ ; ಅದು ಪರಮಾರ್ಥವಾಗಿ ಬ್ರಹ್ಮವೇ ಆಗಿರುತ್ತದೆ ಎಂಬುದನ್ನು ಅವನು ಬಲ್ಲನು. ಆ ಸಾಧನದಿಂದ ಅವನು ಅರ್ಪಿಸುತ್ತಿರುವ ಹವಿಸ್ಸೂ ಅವನ ದೃಷ್ಟಿಯಲ್ಲಿ ಬ್ರಹ್ಮವೇ ಆಗಿರುತ್ತದೆ. ಆ ಹವಿಸ್ಸನ್ನು ಯಾವ ಅಗ್ನಿಯಲ್ಲಿ ಅರ್ಪಿಸುತ್ತಾನೋ ಆ ಅಗ್ನಿಯೂ ಅವನ ಕಣ್ಣಿನಲ್ಲಿ ಬ್ರಹ್ಮವೇ. ಇನ್ನು ಹೋಮಮಾಡುತ್ತಿರುವಾತನೂ ಬ್ರಹ್ಮವೇ ; ಬ್ರಹ್ಮಕ್ಕಿಂತ ವ್ಯತಿರಿಕ್ತನಾಗಿದ್ದುಕೊಂಡು ತಾನು ಹೋಮಮಾಡುತ್ತಿದ್ದೇನೆಂಬ ಭೇದಬುದ್ಧಿಯು ಅವನಿಗೆ ಎಂದಿಗೂ ಬರುವಂತಿರುವದಿಲ್ಲ. ಕರ್ಮಿಯಾದವನು ಕರ್ಮವನ್ನು ಮಾಡಿದ ಬಳಿಕ ಕಾಲಾಂತರದಲ್ಲಿ ತಾನು ಸ್ವರ್ಗಾದಿಫಲವನ್ನು ಪಡೆಯುವೆನೆಂದು ಭಾವಿಸಿಕೊಂಡಿರುತ್ತಾನಲ್ಲವೆ ? ಈ ಜ್ಞಾನಿಯು ಹಾಗಿರುವದಿಲ್ಲ ; ಇವನ ಪಾಲಿಗೆ ಕರ್ಮಫಲವೂ ಬ್ರಹ್ಮವೇ. ಬ್ರಹ್ಮವೆಂಬ ಕರ್ಮದಲ್ಲಿ ಮನಸ್ಸನ್ನು ಸಮಾಧಾನಗೊಳಿಸಿಕೊಂಡು ಆ ಫಲವನ್ನೇ ಇವನು ಪಡೆಯುತ್ತಾನೆ. ಸಕ್ಕರೆಯಲ್ಲಿ ಮಾಡಿದ ಗಣಪತಿಯ ಸೊಂಡಿಲು, ಹೊಟ್ಟೆ, ಕಾಲು, ಮೂಷಕವಾಹನ, ಕೈಯಲ್ಲಿ ಹಿಡಿದಿರುವ ಪಾಶಾಂಕುಶಾದಿಗಳು–ಎಲ್ಲವೂ ಹೊರಗಿನಿಂದ ನೋಡಿದಾಗ ಬೇರೆಬೇರೆಯ ಆಕಾರದಿಂದ ಕಂಡರೂ ಹೇಗೆ ನಿಜವಾಗಿ ಎಲ್ಲವೂ ಸಕ್ಕರೆಯೇ ಆಗಿರುವದೋ

ಹಾಗೆ ಕರ್ಮಿಯಾಗಿರುವ ಜ್ಞಾನಿಯ ದೃಷ್ಟಿಯಿಂದ ಕರ್ತೃ, ಕರಣ, ಕರಣ ಸಾಧನ, ಅಧಿಕರಣ, ಕ್ರಿಯೆ, ಫಲ-ಎಲ್ಲವೂ ಬ್ರಹ್ಮವೇ ಆಗಿಬಿಟ್ಟಿರುತ್ತದೆ.

ಇವನು ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ ಪರಮಹಂಸಪರಿವ್ರಾಜಕ ನಾಗಿದ್ದಾಗ ಕರ್ಮವನ್ನು ಬಿಟ್ಟು ಕರ್ಮಭ್ರಷ್ಟನಾದನೆಂದು ತಿಳಿಯಬಾರದು. ಈ ವಿಷಯದಲ್ಲಿ ಶ್ರೀಶಂಕರಭಗವತ್ಪಾದರು ಬರೆದಿರುವುದೇನೆಂದರೆ :-

ಏವಂ ಲೋಕಸಂಗ್ರಹಂ ಚಿಕೀರ್ಷುಣಾಪಿ ಕ್ರಿಯಮಾಣಂ ಕರ್ಮ ಪರಮಾರ್ಥತೋಽಕರ್ಮ। ಬ್ರಹ್ಮಬುದ್ಧ್ಯುಪಮೃದಿತತ್ವಾತ್। ಏವಂ ಸತಿ ನಿವೃತ್ತಕರ್ಮಣೋಽಪಿ ಸರ್ವಕರ್ಮಸಂನ್ಯಾಸಿನಃ ಸಮ್ಯಗ್ದರ್ಶನಸ್ತುತ್ಯರ್ಥಂ ಯಜ್ಞತ್ವಸಂಪಾದನಂ ಜ್ಞಾನಸ್ಯ ಸುತರಾಮ್ ಉಪಪದ್ಯತೇ। ಯದರ್ಪಣಾದಿ ಅಧಿಯಜ್ಞೇ ಪ್ರಸಿದ್ಧಮ್ ತದಸ್ಯ ಅಧ್ಯಾತ್ಮಂ ಬ್ರಹ್ಮೈವ ಪರಮಾರ್ಥ ದರ್ಶಿನ ಇತಿ। ಅನ್ಯಥಾ ಸರ್ವಸ್ಯ ಬ್ರಹ್ಮತ್ವೇ ಅರ್ಪಣಾದೀನಾಮೇವ ವಿಶೇಷತೋ ಬ್ರಹ್ಮತ್ವಾಭಿಧಾನಮ್ ಅನರ್ಥಕಂ ಸ್ಯಾತ್। ತಸ್ಮಾತ್ ಬ್ರಹ್ಮೈವೇದಂ ಸರ್ವಮ್ ಇತ್ಯಭಿಜಾನತೋ ವಿದುಷಃ ಕರ್ಮಾ-ಭಾವಃ॥ ಗೀ. ಭಾ. ೪-೨೪, ಪಾ. ೭೪.

'ಹೀಗೆ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿರುವ ಜ್ಞಾನಿಯ ಕರ್ಮವು ಅಕರ್ಮವೇ; ಏಕೆಂದರೆ ಅದು 'ಇದೆಲ್ಲವೂ ಬ್ರಹ್ಮ' ಎಂಬ ಬುದ್ಧಿಯಿಂದ ಬಾಧಿತವಾಗಿಬಿಟ್ಟಿರುತ್ತದೆ. ಹೀಗಿರುವದರಿಂದ ಕರ್ಮವೆಲ್ಲವನ್ನೂ ಬಿಟ್ಟಿರುವ ಸಂನ್ಯಾಸಿಯು ಸಮ್ಯಗ್ದರ್ಶಿಯಾಗಿರುವದರಿಂದ ಅವನ ಜ್ಞಾನವೇ ಯಜ್ಞವಾಗಿರುತ್ತದೆ. ಅಧಿಯಜ್ಞದೃಷ್ಟಿಯಿಂದ ಯಾವದನ್ನು ಅರ್ಪಣ, ಹವಿ- ಎಂದು ಮುಂತಾಗಿ ತಿಳಿಯುವರೋ ಅದೆಲ್ಲವೂ ಅಧ್ಯಾತ್ಮವಾಗಿ ಇವನಿಗೆ ಬ್ರಹ್ಮವೇ ಆಗಿರುತ್ತದೆ. ಆದ್ದರಿಂದ 'ಜ್ಞಾನಿಯು ಕರ್ಮಿಯಲ್ಲ' ಎನ್ನುವದಕ್ಕಿಲ್ಲ, ಈ ಶ್ಲೋಕಕ್ಕೆ ಹೀಗೆ ಅರ್ಥಮಾಡಿದರೆ ಸರಿಯಾದೀತು; ಹೀಗಲ್ಲದಿದ್ದರೆ, ಎಲ್ಲವೂ ಬ್ರಹ್ಮವೇ ಆಗಿರುವಾಗ ಅರ್ಪಣಾದಿಗಳು ಮಾತ್ರ ಬ್ರಹ್ಮ-ಎಂಬಿದು ವ್ಯರ್ಥವಚನವಾಗುವದು.'

ಇದಿಷ್ಟು ಕರ್ಮಿಯಾಗಿ ವ್ಯವಹರಿಸುವ ಜ್ಞಾನಿಯ ಮಾತಾಯಿತು. ಇನ್ನು ಯೋಗಜ್ಞಾನಿಯ ವಿಚಾರ :

ಯೋಽನ್ತಃಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ॥ ಗೀ. ೫-೨೪

ಸಾಮಾನ್ಯಜನರಿಗೆ ಯಾವನಾದರೊಂದು ಅಪೂರ್ವವಾದ ಹೊಸ ಗಡಿಯಾರವೇ ಮುಂತಾದ ವಸ್ತುವು ಸಿಕ್ಕಿದರೆ ಅದನ್ನು ನೋಡುವದರಿಂದಲೇ ಅವನಿಗೆ ಸುಖವಾಗುವದು ; ಅದರಲ್ಲಿಯೇ ಅವನ ಮನಸ್ಸು ಆಡುತ್ತಿರುವದು. ಅದಿಲ್ಲದಿದ್ದರೆ ಅವನಿಗೆ ದಿಕ್ಕುತೋಚದಂತೆ ಆಗಿಬಿಡುತ್ತದೆ. ಹೆಚ್ಚೇಕೆ ? ತಾವೇ ಆ ಗಡಿಯಾರವೇ ಮುಂತಾದ ವಸ್ತುವಾಗಿ ಮಾರ್ಪಟ್ಟುಬಿಟ್ಟಿರುತ್ತಾರೆನ್ನಬಹುದು. ಇದರಂತೆಯೇ ಯೋಗಿಯಾದ ಜ್ಞಾನಿಗೆ ಬಾಹ್ಯವಿಷಯಗಳಿರುವವೆಂದಾಗಲಿ, ಅವುಗಳಿಂದ ತನಗೆ ಸುಖವೆಂದಾಗಲಿ ಭಾವನೆಯಿರುವದೇ ಇಲ್ಲ. ಅವನ ಸುಖವೆಲ್ಲ ಒಳಗಿರುವ ಆತ್ಮನಿಂದಲೇ. ಅವನ ಮನಸ್ಸು ಸತತವಾಗಿ ಆತ್ಮನಲ್ಲಿಯೇ ರಮಿಸುತ್ತಿರುವದು. ಅವನಿಗೆ ಅಂತರಾತ್ಮನೇ ಜ್ಯೋತಿ, ಸರಿಯಾಗಿ ನೋಡಿದರೆ ಎಲ್ಲರಿಗೂ ಆತ್ಮನೇ ಜ್ಯೋತಿ : ಆತ್ಮನ ಬೆಳಕಿನಿಂದಲೇ ಜನರು ಎಲ್ಲಿಗಾದರೂ ಹೋಗುವದು, ಕರ್ಮವನ್ನು ಮಾಡುವದು, ಮತ್ತೆ ಹಿಂತಿರುಗಿಬರುವದು— ಈ ಎಲ್ಲಾ ಕ್ರಿಯೆಗಳನ್ನೂ ಮಾಡುತ್ತಿರುವದು ; ಆದರೂ ಅವರಿಗೆ ಆತ್ಮನ ಅರಿವೇ ಇರುವದಿಲ್ಲ. ಹೊರಗಿನ ಸೂರ್ಯ, ಚಂದ್ರ, ಅಗ್ನಿ, ವಿದ್ಯುದ್ದೀಪ— ಮುಂತಾದವುಗಳೇ ಅವರಿಗೆ ಬೆಳಕು. ಅದು ಇಲ್ಲದಿದ್ದರೆ ಅವರು ಕತ್ತಲಿನಲ್ಲಿ ದಿಕ್ಕುಗಾಣದೆ ಇರುತ್ತಾರೆ. ಯೋಗಿಯಾಗಿರುವ ಜ್ಞಾನಿಯ ವಿಷಯವು ಹಾಗಿಲ್ಲ. ಅವನಿಗೆ ಹೊರಗಿನ ಬೆಳಕು ಯಾವದೂ ನಿಜವಾದ ಬೆಳಕಲ್ಲ ; ಆತ್ಮನೇ ಬೆಳಕು. ಅಥವಾ ಆತ್ಮನು ಅವನಿಗೆ ಬೆಳಕು ಎನ್ನುವದಕ್ಕಿಂತ ಅವನೇ ಪರಮಾತ್ಮನಾಗಿಬಿಟ್ಟಿರುತ್ತಾನೆ ಎನ್ನಬಹುದು. 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' (ಬೃ. ೪–೪–೬) ಎಂಬ ಶ್ರುತಿಯು ಹೇಳುವಂತೆ, ಅವನು ಬದುಕಿರುವಾಗಲೂ ಬ್ರಹ್ಮವೇ ಆಗಿರುತ್ತಾನೆ ; ದೇಹಪಾತವಾದ ಬಳಿಕವೂ ಬ್ರಹ್ಮದಲ್ಲಿಯೇ ಸೇರಿಹೋಗಿಬಿಡುತ್ತಾನೆ. ಲೋಕದ ಜನರ ದೃಷ್ಟಿಯಿಂದ ಅವನು ಯೋಗಿ ; ತನ್ನ ದೃಷ್ಟಿಯಲ್ಲಿ ಆತ್ಮಸ್ವರೂಪನೇ.

ಇದು ಯುಕ್ತನಾದ ಜ್ಞಾನಿಯ ವ್ಯವಹಾರವಾಯಿತು. ಇನ್ನು ಭಕ್ತ ಜ್ಞಾನಿಯ ವಿಚಾರ.

ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥
ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥

ಗೀ. ೭–೧೬, ೧೭

"ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ— ಎಂಬ ನಾಲ್ಕು ವಿಧದ ಜನರು ನನ್ನನ್ನು ಭಜಿಸುತ್ತಾರೆ. ಅವರಲ್ಲಿ ಜ್ಞಾನಿಯು ನಿತ್ಯಯುಕ್ತನು, ಏಕಭಕ್ತನು—

ಎಂದು ಭಗವಂತನು ಹೇಳಿದ್ದಾನೆ. ಜ್ಞಾನಿಭಕ್ತನಿಗೆ ಭಗವಂತನು ಪ್ರಿಯನು; ಭಗವಂತನಿಗೆ ಜ್ಞಾನಿಯು ಪ್ರಿಯನು. ಇದು ವ್ಯವಹಾರದೃಷ್ಟಿಯಿಂದ ಆಡಿದ ಮಾತು. ಆದರೆ ಪರಮಾರ್ಥವೇನೆಂದರೆ :

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ।**

ಗೀ. ೭-೧೮

ಇವರೆಲ್ಲರೂ ಉತ್ಕೃಷ್ಟರೇ ಆದರೂ ಜ್ಞಾನಿಯು ನನ್ನ ಆತ್ಮನೇ ; ಅವನು ನನ್ನಲ್ಲಿಯೇ ಮನಸ್ಸನ್ನು ಇಟ್ಟುಕೊಂಡು 'ಇವನೇ ನನಗೆ ಅತ್ಯುತ್ತಮಗತಿಯು' ಎಂದು ದೃಢವಾಗಿ ನಂಬಿದ್ದಾನೆ– ಎಂಬುದು ಭಗವಂತನ ಮತ.

ಯಾವನು ಆತ್ಮನಲ್ಲಿಯೇ ನಿಷ್ಠೆಯಿಂದ ನೆಲೆನಿಂತು ಬ್ರಹ್ಮಸ್ವರೂಪನೇ ಆಗಿರುವನೋ ಅಂಥ ಜ್ಞಾನಿಯು:

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಙ್ಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥**
**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ॥**

ಗೀ.೧೮–೫೪. ೫೫

ಸರ್ವಭೂತಗಳಲ್ಲಿಯೂ ಒಬ್ಬ ಪರಮಾತ್ಮನನ್ನೇ ಕಾಣುತ್ತಾ ಪರಭಕ್ತಿಯುಳ್ಳವನಾಗಿರುತ್ತಾನೆ, ಆದರಿಂದ ಆತ್ಮಸ್ವರೂಪವು ಇದ್ದದ್ದು ಇದ್ದಹಾಗೆಯೇ ಅವನಿಗೆ ತಿಳಿದಿರುತ್ತದೆ. ಆ ಜ್ಞಾನದಿಂದಲೇ ಅವನು ಭಗವಂತನನ್ನು ಪ್ರವೇಶಿಸಿಬಿಡುತ್ತಾನೆ. ಇಲ್ಲಿರುವ ಶ್ಲೋಕದಲ್ಲಿ 'ಜ್ಞಾತ್ವಾ ವಿಶತೇ ತದನನ್ತರಮ್' ಎಂಬ ವಾಕ್ಯಕ್ಕೆ ಅರಿತುಕೊಂಡು ಆಮೇಲೆ ನನ್ನನ್ನು ಪ್ರವೇಶಿಸುತ್ತಾನೆ–ಎಂಬರ್ಥವನ್ನು ಮಾಡುವದಕ್ಕೂ ಬರುತ್ತದೆ. ಆದರೆ ಜ್ಞಾನವು ಸಾಧನ, ಪ್ರವೇಶವು ಫಲ–ಎಂದು ಬೇರೆ ಬೇರೆಯಾಗಿ ಎರಡಿಲ್ಲ. ಜ್ಞಾನವೇ ಪ್ರವೇಶ ; ಏಕೆಂದರೆ '**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ**' (ಎಲ್ಲಾ ದೇಹಗಳಲ್ಲಿರುವ ಆತ್ಮನು ನಾನೆಂದೇ ತಿಳಿ) ಎಂದು ಭಗವಂತನು ಹೇಳಿರುತ್ತಾನೆ. ಹೀಗೆಂದು ಈ ಶ್ಲೋಕದ ಭಾಷ್ಯದಲ್ಲಿ ಶಂಕರಾಚಾರ್ಯರವರು ಬರೆದಿರುತ್ತಾರೆ. ಇದು ಭಕ್ತಜ್ಞಾನಿಯ ವ್ಯವಹಾರ.

ಜ್ಞಾನಿಭಕ್ತನ ಅಥವಾ ಭಕ್ತಜ್ಞಾನಿಯ ದೃಷ್ಟಿಯಿಂದ ಭಕ್ತಿ, ಭಕ್ತ, ಭಗವಂತ– ಎಂಬ ಭೇದವೇ ಇರುವದಿಲ್ಲ; ಇವೆಲ್ಲ ಭಗವತ್ಸ್ವರೂಪವೇ ಎಂದು ತಿಳಿಯಬೇಕು.

ಜ್ಞಾನಿಯಾದವನು ಕರ್ಮಿಯಾಗಿರಲಿ, ಯೋಗಿಯಾಗಿರಲಿ, ಭಕ್ತನಾಗಿರಲಿ, ಕರ್ಮಸಂನ್ಯಾಸವನ್ನು ಮಾಡಿರುವ ಪರಮಹಂಸನೇ ಆಗಿರಲಿ– ಆಯಾ ಆಶ್ರಮಕ್ಕೆ ತಕ್ಕಂತೆ ನಡೆಯುತ್ತಾನೆ ಎಂದ ಹೇಳಿದೆನಷ್ಟೆ ? ಇದನ್ನು ಶ್ರೀಕೃಷ್ಣ ಭಗವಂತನೇ ಆದರ್ಶಭೂತವಾದ ನಡತೆಯಿಂದ ತೋರಿಸಿರುತ್ತಾನೆ. ಭಾಗವತದಲ್ಲಿ ಶ್ರೀಕೃಷ್ಣನ ಆಹ್ನಿಕಕರ್ಮವನ್ನು ಹೀಗೆಂದು ವರ್ಣಿಸಿದೆ:

ಬ್ರಾಹ್ಮೇ ಮುಹೂರ್ತ ಉತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ ।
ದಧ್ಯೌ ಪ್ರಸನ್ನಕರಣ ಆತ್ಮಾನಂ ತಮಸಃ ಪರಮ್ ॥

ಏಕಂ ಸ್ವಯಂಜ್ಯೋತಿರನನ್ಯಮವ್ಯಯಂ
ಸ್ವಸಂಸ್ಥಯಾ ನಿತ್ಯನಿರಸ್ತಕಲ್ಮಷಮ್ ।
ಬ್ರಹ್ಮಾಖ್ಯಮಸ್ಯೋದ್ಭವನಾಶಹೇತುಭಿಃ
ಸ್ವಶಕ್ತಿಭಿರ್ಲಕ್ಷಿತಭಾವನಿರ್ವೃತಿಮ್ ॥

ಅಥಾಪ್ಲುತೋಽಮ್ಭಸ್ಯಮಲೇ ಯಥಾವಿಧಿ
ಕ್ರಿಯಾಕಲಾಪಂ ಪರಿಧಾಯ ವಾಸಸೀ ।
ಚಕಾರ ಸನ್ಧ್ಯೋಪಗಮಾದಿ ಸತ್ತಮೋ
ಹುತಾನಲೋ ಬ್ರಹ್ಮ ಜಜಾಪ ವಾಗ್ಯತಃ ॥

ಉಪಸ್ಥಾಯಾರ್ಕಮುದ್ಯನ್ತಂ ತರ್ಪಯಿತ್ವಾತ್ಮನಃ ಕಲಾಃ ।
ದೇವಾನ್ ಋಷೀನ್ ಪಿತೄನ್ ವೃದ್ಧಾನ್ ವಿಪ್ರಾನಭ್ಯರ್ಚ್ಯ ಚಾತ್ಮವಾನ್ ॥

ಭಾಗ. ೧೦–೭೦–೪ರಿಂದ ೭

ಇವೇ ಮುಂತಾದ ಶ್ಲೋಕಗಳಲ್ಲಿ ಹೇಳಿರುವದನ್ನು ನೋಡಿದರೆ, ಭಗವಂತನು ಆಸ್ತಿಕರಾದ ಆಚಾರಪರರಂತೆಯೇ ಬ್ರಾಹ್ಮಮುಹೂರ್ತದಲ್ಲಿ ಎದ್ದು , ಶುಚಿರ್ಭೂತನಾಗಿ ಪರಮಾತ್ಮಧ್ಯಾನವನ್ನು ಮಾಡುತ್ತಿದ್ದನು. ಸ್ನಾನಾನಂತರ ಮಡಿಯಬಟ್ಟೆಗಳನ್ನುಟ್ಟು ಯಥಾವಿಧಿಯಾಗಿ ಕರ್ಮಾನುಷ್ಠಾನವನ್ನು ಮಾಡುತ್ತಿದ್ದನು. ಸಂಧ್ಯಾದಿಕರ್ಮಗಳನ್ನು ಮಾಡಿ, ಹೋಮವನ್ನುಮಾಡಿ, ಮೌನದಿಂದ ಜಪವನ್ನು ಮಾಡುತ್ತಿದ್ದನು. ಸೂರ್ಯೋಪಸ್ಥಾನವನ್ನು ಮಾಡಿ ತನ್ನ ಕಲೆಗಳೇ ಆಗಿರುವ ದೇವತೆಗಳು, ಋಷಿಗಳು, ಪಿತೃಗಳು– ಇವರಿಗೆ ತರ್ಪಣವನ್ನು ಮಾಡಿ ಉತ್ತಮವಾದ ಕರೆಯುವ ಗೋಗಳನ್ನು ದಾನಮಾಡಿ ಗೋಗಳು, ವಿಪ್ರರು, ದೇವತೆಗಳು, ಗುರುಹಿರಿಯರು, ಸಮಸ್ತಭೂತಗಳು – ಮುಂತಾಗಿರುವ ಆತ್ಮವಿಭೂತಿಗಳನ್ನು ನಮಸ್ಕರಿಸುತ್ತಿದ್ದನು. ಮಂಗಲದ್ರವ್ಯಗಳನ್ನು ಸಂಸ್ಪರ್ಶಮಾಡಿದ ಬಳಿಕ ವಸ್ತ್ರಾಭರಣಗಳಿಂದ ಅಲಂಕೃತನಾಗಿ ಸಕಲವರ್ಣದವರಿಗೂ ಎಲ್ಲಾ ವರ್ಣಗಳ ಜನರಿಗೂ

ಅಂತಃಪುರದಲ್ಲಿದ್ದವರಿಗೂ ಅವರವರ ಇಷ್ಟಾರ್ಥಗಳನ್ನು ಕೊಡಿಸಿ ಮುಂದೆ ಲೌಕಿಕ ಕರ್ಮಗಳಲ್ಲಿ ತೊಡಗುತ್ತಿದ್ದನೆಂತ ತಿಳಿಯಬರುತ್ತದೆ.

ಈ ದಿವಸ ಕೃಷ್ಣಜನ್ಮಾಷ್ಟಮಿ. ಲೋಕಕ್ಕೆಲ್ಲ ಧರ್ಮಮಾರ್ಗವನ್ನು ತನ್ನ ಆಚರಣೆಯಿಂದಲೂ ಉಪದೇಶದಿಂದಲೂ ತಿಳಿಯಪಡಿಸುವದಕ್ಕೆಂದೇ ಅವತರಿಸಿದ ಆ ಭಗವಂತನನ್ನು ಸ್ಮರಣೆಮಾಡಿ ಈ ದಿನದ ವಿಚಾರವನ್ನು ಉಪಸಂಹಾರ ಮಾಡೋಣ !

## ೩೫. ಅಕ್ಷರೋಪಾಸಕರ ವರ್ತನೆ

(4—9—69)

ಈ ದಿನ ಅಕ್ಷರೋಪಾಸನೆಯನ್ನು ಕುರಿತು ಮಾತನಾಡುವದಿದೆ. ಅದಕ್ಕಿಂತ ಮುಂಚೆ ಈವರೆಗೆನಾವು ವಿಚಾರಕ್ಕೆ ತೆಗೆದುಕೊಂಡಿದ್ದ ವಿಷಯಗಳನ್ನು ಸಂಗ್ರಹವಾಗಿ ಸಿಂಹಾವಲೋಕನದೃಷ್ಟಿಯಿಂದ ನೋಡುವದು ಒಳ್ಳೆಯದು.

ನಮ್ಮ ವ್ಯವಹಾರಕ್ಕೆಲ್ಲ 'ಅಹಮ್' (ನಾನು) ಎಂಬುದು ಕಣದಲ್ಲಿರುವ ಮೇಟಿ ಕಂಬದಂತೆ ಇರುತ್ತದೆ. ಜನರ ಪ್ರತ್ಯಯ (ಆಲೋಚನೆ), ವ್ಯಪದೇಶ (ನುಡಿ) ಪ್ರವೃತ್ತಿನಿವೃತ್ತಿಗಳು(ನಡೆ)—ಇವೆಲ್ಲ 'ನಾನು' ಎಂಬ ಕಂಬದ ಸುತ್ತಲೂ ಸುತ್ತುತ್ತಿರುವ ಎತ್ತುಗಳ ವ್ಯವಹಾರವಾಗಿರುತ್ತದೆ. ಆದರೂ ಈ 'ನಾನು' ಎಂಬುದು ಯಾವದು? ಇದರ ಸ್ವರೂಪವು ಹೇಗಿದೆ ?— ಎಂಬ ವಿಚಾರವನ್ನು ಮಾತ್ರ ನಾವು ಎಂದೂ ಮಾಡಿರುವದಿಲ್ಲ. ತಾಲ್ಲೂಕು ಕಚೇರಿಯಲ್ಲಿ ಶಿರಸ್ತೆದಾರ, ನಗದಿಗುಮಾಸ್ತೆ ಮತ್ತು ಸರಾಫ—ಇವರು ಮೂವರು, ಕಚೇರಿಯು ಪ್ರಾರಂಭವಾಗಿ ಆ ದಿನದ ವ್ಯವಹಾರವಾಗುವವರೆಗೂ ತಮ್ಮತಮ್ಮ ಕೆಲಸದಲ್ಲಿ ಎಂದರೆ ಶಿರಸ್ತೆದಾರನು ಜಮಾಖರ್ಚು ಇವನ್ನು ಗುರುತುಮಾಡುವದರಲ್ಲಿ, ನಗದಿಗುಮಾಸ್ತನು ಆಯಾ ಖಾತೆಗೆ ತಕ್ಕಂತೆ ನಗದಿ ರಿಜಿಸ್ಟರಿನಲ್ಲಿ ಬರೆದುಕೊಳ್ಳುವದರಲ್ಲಿ, ಸರಾಫನು ರೂಪಾಯಿ, ಚಿಲ್ಲರೆಗಳನ್ನು ವಿಂಗಡಿಸಿಕೊಂಡು ಜಮಾತೆಗೆದುಕೊಳ್ಳುವದು ಖರ್ಚುಮಾಡುವದು—ಇವುಗಳಲ್ಲಿಯೇ ವ್ಯಾಪೃತವಾಗಿರುವಂತೆಯೂ ಅಂಗಡಿಗೆ ಹೋದವರು ತಮತಮಗೆ ಬೇಕಾದ ಪದಾರ್ಥಗಳ ಆಕಾರಾದಿಗಳನ್ನು ನೋಡುವದರಲ್ಲಿಯೇ ವ್ಯಗ್ರರಾಗಿರುವಂತೆಯೂ ಜನರು ತಮ್ಮತಮ್ಮ ವ್ಯವಹಾರದಲ್ಲಿಯೇ ಮಗ್ನರಾಗಿರುತ್ತಾರೆಯೇ ಹೊರತು, 'ನಾನು', 'ನಾನು' ಎಂದು ತಾವು ಕರೆದುಕೊಳ್ಳುತ್ತಿರುವ ವಸ್ತುವಿನ ವಿಚಾರಕ್ಕೆ ಮನಸ್ಸು ಹಾಕಿರುವದೇಇಲ್ಲ. ಕಚೇರಿ

ಯಲ್ಲಿ ಶಿರಸ್ತೆದಾರನೇ ಮುಂತಾದ ಮೂವರಿಗೂ ದಿನದ ಕೊನೆಯಲ್ಲಿ ಹೊಂದಿಕೆಯಾಗಿ ಲೆಕ್ಕವು ತೇಲಿದರೇ ವ್ಯವಹಾರವು ಸರಿಹೋಗುವಂತೆ, ಶರೀರ, ಇಂದ್ರಿಯಗಳು, ಮನಸ್ಸು– ಈ ಮೂರಕ್ಕೂ ಹೊಂದಿದರೇ ವ್ಯವಹಾರವು ಸರಿಯಾಯಿತೆಂದು ನಮ್ಮ ಎಣಿಕೆ. ಆದರೆ ಕಚೇರಿಯ ಮೂವರು ಉದ್ಯೋಗಸ್ಥರೂ ಸರಕಾರದ ಕೋಶಕ್ಕೆ ಹೊಣೆಗಾರರಾಗಿರುವಂತೆ ಶರೀರಾದಿಗಳು ಮೂರೂ ಯಜಮಾನನಾದ 'ನಾನು' ಎಂಬುದರ ಆಶ್ರಯದಲ್ಲಿದ್ದು ಅದರ ಆಗುಹೋಗುಗಳಿಗೆ ಹೊಣೆಗಾರರಾಗಿರುತ್ತಾರೆ. ಹೀಗಿದ್ದರೂ 'ನಾನು' ಎಂಬುದು ಯಾವದು ? ಇದರ ಪರಮಾರ್ಥವನ್ನು ನಾವು ವಿಚಾರಿಸುತ್ತಲೇ ಇಲ್ಲ. ನಾನು ಎಂಬುದರ ಪರಮಾರ್ಥವು ಅದಕ್ಕೂ ಆಧಾರವಾಗಿರುವ ಪರಮಾತ್ಮನೇ. ಆ ಪರಮಾರ್ಥವನ್ನು ಅರಿಯುವದಕ್ಕೆ 'ನಾನು' ಎಂಬ ಅಭಿಮಾನವೇ ಅಡ್ಡಲಾಗಿರುತ್ತದೆ. ಆದರೂ ಇದನ್ನೇ ನಾವು ನಿತ್ಯವೂ ಆರಾಧನೆಮಾಡಿಕೊಂಡಿರುತ್ತೇವೆ.

ನಾನು ಎಂಬುದು ನಮ್ಮ ಪರಮಾರ್ಥವನ್ನು ಅರಿತುಕೊಳ್ಳುವದಕ್ಕೆ ಹೇಗೆ ಅಡ್ಡಿಯಾಗಿರುತ್ತದೆ? ಎಂಬುದನ್ನು ತಿಳಿಯುವದಕ್ಕೆ ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಂದು ದಿನ ಉದ್ಯಾನವನಕ್ಕೆ (Park) ಹೋಗಿ ಅಲ್ಲಿ ಇರುವ ಗಿಡಮರಬಳ್ಳಿಗಳನ್ನೂ ಹೂಹಣ್ಣುಗಳನ್ನೂ ನೋಡಿ ನಲಿಯೋಣವೆಂದು ಅಲ್ಲಿಗೆ ಹೋದಾಗ ನಮ್ಮ ಎದುರಿಗೆ ಒಂದು ಸುಂದರವಾದ ಹೂವು ಕಾಣಿಸಿತೆಂದು ಇಟ್ಟುಕೊಳ್ಳಿರಿ. ಆಗ ಆ ಹೂವನ್ನು ಕಂಡಕೂಡಲೆ ನಮಗೆ ಹೃದಯದಲ್ಲಿ ಆನಂದವು ಉಕ್ಕುವದು. ಅರಳಿದ ಹೂವಿನ ಸುತ್ತುಗಳನ್ನೂ ಅದರ ಬಣ್ಣವನ್ನೂ ಸುವಾಸನೆಯನ್ನೂ ಕಂಡು ನಾವು ಮನಸ್ಸಿಗೆ ಆಹ್ಲಾದವನ್ನುಂಟುಮಾಡಿಕೊಳ್ಳಬಹುದಲ್ಲವೆ? ಆದರೆ ಈ ನಡುವೆ ಈ 'ನಾನು' ನಮಗೆ ಅಡ್ಡಲಾಗಿ ಬಂದುಬಿಡುವದು. 'ಈ ಹೂವು ನನಗೆ ಬೇಕು' ಎಂಬ ಆಶೆಯು ನಮ್ಮನ್ನು ಹೊರಕ್ಕೆ ತಳ್ಳಿ, ಕೈಚಾಚಿ ಹೂವನ್ನು ಕಿತ್ತುಕೊಳ್ಳುವಂತೆ ಪ್ರೇರಿಸಿಬಿಡುತ್ತದೆ. ಕೂಡಲೆ ನಾವು ಹೂವಿನ ಮೇಲೆ ಯಾವ ಕನಿಕರವನ್ನೂ ತೋರಿಸದೆ ಅದನ್ನು ಗಿಡದಿಂದ ಇತ್ತ ಕಿತ್ತು ಎಳೆದುಕೊಳ್ಳುವೆವು. ಅದರ ಫಲವಾಗಿ ಹೂವು ತನ್ನ ದಳಗಳನ್ನು ಉದುರಿಸಿ ಬಾಡಿಹೋಗುವದು. ನಮಗೆ ಸಿಕ್ಕಬಹುದಾಗಿದ್ದ ಆನಂದವು ಮಾಯವಾಗಿಬಿಡುತ್ತದೆ !

ಲೋಕದಲ್ಲಿ ನಾವು ಮೆಚ್ಚಿ ಆನಂದಪಡಬಹುದಾದ ಭಗವದ್ವಿಭೂತಿಗಳು ಹೇರಳವಾಗಿವೆ. ಆದರೆ ನಮ್ಮ ದೌರ್ಭಾಗ್ಯದಿಂದ ನಮಗೆ 'ನಾನು ನನ್ನದು', 'ಇದು ಬೇಕು, ಅದು ಬೇಡ'–ಎಂಬ ಅಭಿಮಾನದಿಂದ ರಾಗದ್ವೇಷಗಳೂ ಎದ್ದುಕೊಂಡು ನಮ್ಮ ಆನಂದಕ್ಕೆ ಅಡ್ಡಿಯಾಗಿಬಿಟ್ಟಿವೆ. ಆನಂದವು ಹೊರಗಿನ

ವಿಭೂತಿಗಳಲ್ಲಿಲ್ಲ; ಅವುಗಳನ್ನು ನಿರಹಂಕಾರರಾಗಿ ನಿರ್ಮಮರಾಗಿ ನೋಡಿ, ನಮ್ಮ ಒಳಗೇ ನಮ್ಮ ಆತ್ಮನಾಗಿರುವ ಪರಮಾತ್ಮನಲ್ಲಿ ಮನಸ್ಸನ್ನು ನೆಲೆನಿಲ್ಲಿಸಿ ಕೊಳ್ಳುವದರಿಂದ ಅದು ನಮ್ಮನಮ್ಮಲ್ಲಿಯೇ ಹೊರಹೊಮ್ಮುತ್ತದೆ. ಇದಕ್ಕೆ 'ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ' ಎಂಬ ಸೂಕ್ತಿಯನ್ನು ನೆನಪಿನಲ್ಲಿಡು ವದೇ ಉಪಾಯ. ಶ್ರದ್ಧೆ, ಭಕ್ತಿ, ಧ್ಯಾನಯೋಗ– ಎಂಬುದು ಸಮಾಹಾರ ದ್ವಂದ್ವಪದ. ಈ ಮೂರನ್ನೂ ಒಟ್ಟಿಗೆ ಕೂಡಿಸಿಕೊಂಡು ಸಮರಸಮಾಡಿ ಕೊಳ್ಳುವ ಉಪಾಯದಿಂದ ನಮಗೆ ಹೊರಗೂ ಒಳಗೂ ಭಗವಂತನ ಮಹಿಮೆ ಯೇ ತೋರುವದಕ್ಕೆ ಮೊದಲಾಗುತ್ತದೆ. ಅಕ್ಷರೋಪಾಸಕರು ಈ ಯೋಗ ವನ್ನು ಈ ಜನ್ಮದಲ್ಲಿಯೋ ಅಥವಾ ಹಿಂದಿನ ಜನ್ಮದಲ್ಲಿಯೋ ಅನುಷ್ಠಾನಮಾಡಿ ಕೊಂಡಿರುತ್ತಾರೆ. ಅದ್ದರಿಂದ ಅವರ ದೃಷ್ಟಿಗೆ ಎಲ್ಲೆಲ್ಲಿಯೂ ಆ ಭಗವಂತನೇ ಕಾಣಿಸುತ್ತಿರುತ್ತಾನೆ.

'ಸಾಧಕರಾದ ನಾವುಗಳು ಮೊದಲು ಶ್ರದ್ಧೆಯಿಂದ ಭಗವಂತನ ಅಸ್ತಿತ್ವ ವನ್ನು ನಂಬಿ, ಮನಸ್ಸಿನ ಏಕಾಗ್ರತೆಯಿಂದ ಧ್ಯಾನಮಾಡಿ, ಆ ಭಗವಂತನಲ್ಲಿ ಭಕ್ತಿಯನ್ನು ಸಂಪಾದಿಸಿಕೊಳ್ಳಬೇಕು. ಆಗ 'ನಾನು', 'ನನ್ನದು'–ಎಂಬ ಈ ಅಡ್ಡಿಯು ಕಳಚಿಕೊಳ್ಳುತ್ತದೆ. ಅಕ್ಷರೋಪಾಸಕರಿಗೆ ಹೀಗೆ ಬೇರೆಬೇರೆಯಾಗಿ ಈ ಮೂರನ್ನೂ ಅನುಷ್ಠಾನಮಾಡಬೇಕಾದ ಆಯಾಸಕ್ಕೆ ಕಾರಣವೇ ಇರುವ ದಿಲ್ಲ. ಅವರಿಗೆ 'ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ' ಎಂಬ ಶ್ರುತಿಯಂತೆ ಅಧ್ರುವವಾದ ಬಾಹ್ಯದೃಶ್ಯಗಳಲ್ಲಿ ನಿತ್ಯವಾದ ಆನಂದವನ್ನು ಹುಡು ಕುವ ತವಕವೇನೂ ಇರುವದಿಲ್ಲ. ಅವರು ತಮ್ಮ ಆತ್ಮನಿಂದಲೇ ಆತ್ಮನನ್ನು ಆತ್ಮನಲ್ಲಿ ಕಂಡುಕೊಳ್ಳುತ್ತಿರುತ್ತಾರೆ. ಸದಾಶಿವಬ್ರಹ್ಮೇಂದ್ರರು ಹಾಡಿರುವಂತೆ 'ಸರ್ವಂ ಬ್ರಹ್ಮಮಯಂ ರೇ ರೇ' (ಎಲಾ ಮನಸ್ಸೆ, ಇದೆಲ್ಲವೂ ಬ್ರಹ್ಮ ಮಯವೇ) ಎಂಬ ಅನುಭವವು ಅವರಿಗೆ ಬಂದುಬಿಟ್ಟಿರುತ್ತದೆ.

ಅಕ್ಷರೋಪಾಸಕರ ಸ್ಥಿತಿಯನ್ನು ಭಗವದ್ಗೀತೆಯ ಹನ್ನೆರಡನೆಯ ಅಧ್ಯಾ ಯದ ಉಪಸಂಹಾರದಲ್ಲಿ ವರ್ಣಿಸಿರುತ್ತದೆ. ಶ್ರೀಶಂಕರಾಚಾರ್ಯರವರು ಆ ಶ್ಲೋಕಗಳಿಗೆ ಅವತರಣಿಕೆಯಾಗಿ ಬರೆದಿರುವ ವಾಕ್ಯಗಳ ಅರ್ಥವನ್ನು ಮನಸ್ಸಿ ನಲ್ಲಿ ಹೊರಳಾಡಿಸುವದರಿಂದ ಲಾಭವುಂಟು :

**"ಅತ್ರ ಚ ಆತ್ಮೇಶ್ವರಭೇದಮಾಶ್ರಿತ್ಯ ವಿಶ್ವರೂಪೇ ಈಶ್ವರೇ ಚೇತಃ ಸಮಾಧಾನಲಕ್ಷಣೋ ಯೋಗ ಉಕ್ತಃ, ಈಶ್ವರಾರ್ಥಂ ಕರ್ಮ ಧ್ಯಾನಾದಿ ಚ। 'ಅಥೈತದಪ್ಯಶಕ್ತೋಽಸಿ' ಇತಿ ಅಜ್ಞಾನಕಾರ್ಯ ಸೂಚನಾತ್ ನಾಭೇದದರ್ಶಿನಃ ಅಕ್ಷರೋಪಾಸಕಸ್ಯ ಕರ್ಮ**

**ಯೋಗ ಉಪಪದ್ಯತ ಇತಿ ದರ್ಶಯತಿ । ತಥಾ ಕರ್ಮಯೋಗಿನೋಽಕ್ಷರೋಪಾಸನಾನುಪಪತ್ತಿಂ ದರ್ಶಯತಿ ಭಗವಾನ್ 'ತೇ ಪ್ರಾಪ್ನುವನ್ತಿ ಮಾಮೇವ' ಇತಿ ಅಕ್ಷರೋಪಾಸಕಾನಾಂ ಕೈವಲ್ಯಪ್ರಾಪ್ತೌ ಸ್ವಾತನ್ತ್ರ್ಯಮುಕ್ತ್ವಾ ಇತರೇಷಾಂ ಪಾರತನ್ತ್ರ್ಯಾತ್ ಈಶ್ವರಾಧೀನತಾಂ ದರ್ಶಿತವಾನ್ 'ತೇಷಾಮಹಂ ಸಮುದ್ಧರ್ತಾ' ಇತಿ ।.... ತಸ್ಮಾತ್ ಅಕ್ಷರೋಪಾಸಕಾನಾಂ ಸಮ್ಯಗ್ದರ್ಶನನಿಷ್ಠಾನಾಂ ಸಂನ್ಯಾಸಿನಾಂ ತ್ಯಕ್ತಸರ್ವೈಷಣಾನಾಂ 'ಅದ್ವೇಷ್ಟಾ ಸರ್ವಭೂತಾನಾಮ್' ಇತ್ಯಾದಿಧರ್ಮಪೂಗಂ ಸಾಕ್ಷಾದಮೃತತ್ವಕಾರಣಂ ವಕ್ಷ್ಯಾಮೀತಿ ಪ್ರವರ್ತತೇ ॥"**

ಗೀ. ಭಾ. ೧೨–೧೩ರ ಅವತರಣಿಕೆ.

ಇದರ ಅರ್ಥವೇನೆಂದರೆ "ಇಲ್ಲಿ (೧೨-೬ ರಿಂದ ೧೧ ರವರೆಗೆ) ಆತ್ಮನಿಗೂ ಈಶ್ವರನಿಗೂ ಭೇದವಿರುವಂತೆ ಇಟ್ಟುಕೊಂಡು ವಿಶ್ವರೂಪನಾದ ಈಶ್ವರನಲ್ಲಿ ಚಿತ್ತವನ್ನು ಸಮಾಧಾನಪಡಿಸಿಕೊಳ್ಳುವ ಯೋಗವನ್ನೂ ಈಶ್ವರನಿಗಾಗಿ ಮಾಡಬೇಕಾದ ಕರ್ಮಾನುಷ್ಠಾನವೇ ಮುಂತಾದವುಗಳನ್ನೂ ಹೇಳಿದ್ದಾಗಿದೆ. ಇದೇ ವಾಕ್ಯದ ಅಭಿಪ್ರಾಯವೆಂಬುದು 'ಇದೂ ನಿನ್ನ ಕೈಯಲ್ಲಾಗದಿದ್ದರೆ' (೧೨-೧೧) ಎಂಬ ಅಜ್ಞಾನದ ಕಾರ್ಯವಾದ ಅಶಕ್ತಿಯನ್ನು ಸೂಚಿಸಿದ್ದರಿಂದ ಅಭೇದದರ್ಶಿಗಳಾದ ಅಕ್ಷರೋಪಾಸಕರಿಗೆ ಕರ್ಮಯೋಗವು ಹೊಂದುವದಿಲ್ಲವೆಂದು ಹೇಳಿದಂತಾಗಿದೆ. ಹೀಗೆಯೇ ಕರ್ಮಯೋಗಿಗೆ ಅಕ್ಷರೋಪಾಸನೆಯು ಹೊಂದುವದಿಲ್ಲವೆಂಬುದನ್ನೂ "ಅವರು ನನ್ನನ್ನೇ ಹೊಂದುತ್ತಾರೆ" ಎಂದು (೧೨-೪) ಅಕ್ಷರೋಪಾಸಕರಿಗೆ ಮೋಕ್ಷಪ್ರಾಪ್ತಿಯ ಸ್ವಾತಂತ್ರ್ಯವನ್ನು ಹೇಳಿದಮೇಲೆ 'ಅವರನ್ನು ನಾನು ಉದ್ಧರಿಸುವೆನು' (೧೨-೭) ಎಂದು ಹೇಳುವದರ ಮೂಲಕ ತಿಳಿಸಿಕೊಟ್ಟಿರುತ್ತಾರೆ....ಆದಕಾರಣ (ಇನ್ನು) ಸಮ್ಯಗ್ಜ್ಞಾನಿಗಳೂ ಸರ್ವೈಷಣೆಗಳನ್ನು ತ್ಯಜಿಸಿರುವ ಸಂನ್ಯಾಸಿಗಳೂ ಆಗಿರುವ ಅಕ್ಷರೋಪಾಸಕರ ಧರ್ಮವನ್ನು ಹೇಳುವೆನೆಂದು ಭಗವಂತನು ಈಗ ಹೊರಟಿರುತ್ತಾನೆ.

ಈ ಭಾಷ್ಯಭಾಗದ ಆಧಾರದಿಂದ ನಾವು 'ಅಕ್ಷರೋಪಾಸಕರು' ಎಂದರೆ ಇಲ್ಲಿ ಪರಮಾತ್ಮನಲ್ಲಿ ಐಕ್ಯವನ್ನು ಹೊಂದಿ ಆತನಿಗೂ ತಮಗೂ ಯಾವ ಭೇದವೂ ಇಲ್ಲವೆಂಬುದನ್ನು ನಿಶ್ಚಯಿಸಿಕೊಂಡು ಬ್ರಹ್ಮಾನುಸಂಧಾನದಲ್ಲಿರುವವರು- ಎಂದು ನಿಶ್ಚಯಿಸಬೇಕಾಗುತ್ತದೆ.

ಭಗವದ್ಗೀತೆಯಲ್ಲಿ ಅಕ್ಷರೋಪಾಸಕರ ವರ್ತನೆಯನ್ನು ಹೀಗೆಂದು ವರ್ಣಿಸಿದೆ :

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಙ್ಕಾರಃ ಸಮದುಃಖಸುಖಃ ಕ್ಷಮೀ ॥**

ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥
ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥
ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ ।
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥
ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಙ್ಕ್ಷತಿ ।
ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥
ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣಸುಖದುಃಖೇಷು ಸಮಃ ಸಙ್ಗವಿವರ್ಜಿತಃ ॥
ತುಲ್ಯನಿನ್ದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥

ಗೀ. ೧೨-೧೩ ರಿಂದ ೧೯

“ಅಕ್ಷರೋಪಾಸಕರು ಎಲ್ಲರ ಆತ್ಮನಾದ ಭಗವಂತನಲ್ಲಿ ತಾದಾತ್ಮ್ಯವನ್ನು ಅನುಭವಿಸುತ್ತಿರುವದರಿಂದ ಅವರಿಗೆ ಯಾರೊಬ್ಬರಲ್ಲಿಯೂ ದ್ವೇಷವಿರುವದಿಲ್ಲ; ತಮಗೆ ದುಃಖವನ್ನು ಕೊಡುವದಕ್ಕೆ ಕಾರಣವಾಗಿರುವ ಪ್ರಾಣಿಯಲ್ಲಿಕೂಡ ಅವರಿಗೆ ಹಗೆತನವಿರುವದಿಲ್ಲ; ಎಲ್ಲರಲ್ಲಿಯೂ ಮಿತ್ರಭಾವದಿಂದ ಇರುವರು, ಕರುಣೆಯನ್ನು ತೋರುತ್ತಿರುವರು. ತಮಗೆ ಸಮಾನರಲ್ಲಿರುವ ಪ್ರೇಮವು ಮೈತ್ರಿಯು, ದುಃಖಿಗಳಲ್ಲಿರುವ ಮರುಕವು ಕರುಣೆಯು, ಅವರು ಎಲ್ಲರಿಗೂ ಅಭಯವನ್ನು ಕೊಟ್ಟ ಪರಮಸಂನ್ಯಾಸಿಗಳಾಗಿರುತ್ತಾರೆ. ಅವರಿಗೆ ‘ನಾನು’, ‘ನನ್ನದು’ ಎಂಬ ಅಭಿಮಾನವಿರುವದಿಲ್ಲ. ಸುಖದುಃಖಗಳಲ್ಲಿ ರಾಗದ್ವೇಷವನ್ನು ಮಾಡಿಕೊಳ್ಳದೆ ಸಮಭಾವದಿಂದ ಇರುತ್ತಾರೆ. ತಮ್ಮನ್ನು ಬೈಯ್ದು ಮೇಲೆಬೀಳುವವರನ್ನು ಕೂಡ ಕ್ಷಮಾಬುದ್ಧಿಯಿಂದ ನೋಡುತ್ತಿರುತ್ತಾರೆ. ಎಲ್ಲರಿಗೂ ಆತ್ಮನಾಗಿರುವ ಭಗವಂತನಲ್ಲಿಯೇ ತಮ್ಮ ಮನೋಬುದ್ಧಿಗಳನ್ನು ಇಟ್ಟಿರುವದರಿಂದ ಅವರಿಂದ ಯಾರೊಬ್ಬರಿಗೂ ತಳಮಳವಾಗುವಂತಿರುವದಿಲ್ಲ ; ಅವರಿಗೂ ಯಾರೊಬ್ಬರಿಂದಲೂ ತಳಮಳವಾಗುತ್ತಿರುವದಿಲ್ಲ. ಪ್ರಿಯವಸ್ತುವು ಸಿಕ್ಕಿದರೆ ಅವರು ಉಬ್ಬುವದಿಲ್ಲ. ಅವರಿಗೆ ಆಗದ್ದನ್ನು ಕಂಡರೆ ಅಸಹನೆ, ಅಂಜಿಕೆ, ತಳಮಳ-ಇವು ಎಂದಿಗೂ ಸಂಭವಿಸುವದಿಲ್ಲ. ಅವರಿಗೆ ಏತರಲ್ಲಿಯೂ ಅಪೇಕ್ಷೆಯಿರುವದಿಲ್ಲ. ಯಾವಾಗಲೂ ಅವರು ಬಾಹ್ಯಾಭ್ಯಂತರಶೌಚಯುಕ್ತರಾಗಿಯೇ ಇರುತ್ತಾರೆ. ಬಂದೊದಗಿದ ಕಾರ್ಯದಲ್ಲಿ ದಕ್ಷರಾಗಿರುತ್ತಾರೆ; ಯಾರೊಬ್ಬರಲ್ಲಿಯೂ ಪಕ್ಷಪಾತ

ವಿಲ್ಲಸವರಾಗಿರುತ್ತಾರೆ. ಅವರಿಗೆ ಏತರಿಂದಲೂ ವ್ಯಥೆಯಿರುವದಿಲ್ಲ. ಅವರಿಗೆ ಐಹಿಕವಾದ ಅಥವಾ ಪಾರತ್ರಿಕವಾದ ಸುಖವು ಬೇಕೆಂಬ ಆಶೆಯೇ ಇಲ್ಲದಿರುವದ ರಿಂದ ಯಾವದೊಂದು ಕರ್ಮವನ್ನೂ ಮಾಡಿಕೊಳ್ಳಬೇಕಾದ ಆವಶ್ಯಕತೆಯಿರುವ ದಿಲ್ಲ. ಇಷ್ಟಪ್ರಾಪ್ತಿಯಿಂದಾಗುವ ಹರ್ಷವಾಗಲಿ, ಅನಿಷ್ಟವು ಪ್ರಾಪ್ತವಾದಾಗ ಆಗುವ ದ್ವೇಷವಾಗಲಿ ಅವರಿಗೆ ಆಗುವದೇ ಇಲ್ಲ. ಇಂಥ ಪ್ರಿಯವಸ್ತು ಕಳೆದು ಹೋಯಿತಲ್ಲ !– ಎಂಬ ಶೋಕವಾಗಲಿ, ಇಂಥದ್ದು ಸಿಕ್ಕಲಿಲ್ಲವಲ್ಲ !– ಎಂಬ ಕಾಂಕ್ಷೆಯಾಗಲಿ ಅವರಿಗಿರುವದಿಲ್ಲ. ಅವರು ಪುಣ್ಯಕರ್ಮವಲ್ಲಾಗಲಿ ಪಾಪಕರ್ಮ ವಲ್ಲಾಗಲಿ ತೊಡಗುವದಿಲ್ಲ. 'ಇವರು ಹಗೆಗಳು, ಇವರು ಗೆಳೆಯರು'– ಎಂಬ ಬುದ್ಧಿಯಿಂದಾಗಲಿ, ಇವರಿಂದ ಗೌರವವನ್ನು ತೋರಿಸಿದಂತಾಯಿತು, ಅಥವಾ 'ಇವರಿಂದ ನಮಗೆ ಅವಮಾನವಾಯಿತು'–ಎಂಬುದರಿಂದಲಾಗಲಿ ಅವರ ಮನಸ್ಸಿ ನಲ್ಲಿ ವಿಕಾರಗಳಾಗುತ್ತಿರುವದಿಲ್ಲ. ಶೀತೋಷ್ಣವೇ ಮುಂತಾದ ದ್ವಂದ್ವಗಳಿಂದಲೂ ಅವುಗಳಿಂದಾಗುವ ಸುಖದುಃಖಗಳಿಂದಲೂ ಹರ್ಷವಿಷಾದಗಳು ಅವರಿಗೆ ಆಗುತ್ತಿ ರುವದಿಲ್ಲ. ಅವರ ಮನಸ್ಸು ಎಷ್ಟು ಸಿಕ್ಕಿದರೆ ಅಷ್ಟರಿಂದ ಸಂತುಷ್ಟಿಯನ್ನು ಹೊಂದಿಕೊಂಡಿರುತ್ತದೆ. ಯಾವದೊಂದು ವಸ್ತುವಿನಲ್ಲಿಯೂ ಅವರಿಗೆ ಆಸಕ್ತಿ ಇರುವದಿಲ್ಲ; ನಿಂದಾಸ್ತುತಿಗಳೆರಡೂ ಅವರಿಗೆ ಸಮಾನವಾಗಿರುತ್ತವೆ. ಜೀವನಕ್ಕೆ ಎಷ್ಟು ಸಿಕ್ಕಿದರೆ ಅಷ್ಟರಿಂದಲೇ ತೃಪ್ತರಾಗಿರುತ್ತಾರೆ. ಅವರಿಗೆ ಇಂಥದ್ದೊಂದು ನಿವಾಸವೆಂಬ ವ್ಯವಸ್ಥೆಯಿರುವದಿಲ್ಲ. ಪರಮಾರ್ಥದಲ್ಲಿ ಸ್ಥಿರವಾದ ನಿಶ್ಚಯ ಬುದ್ಧಿಯಿರುತ್ತದೆ" ಇದಿಷ್ಟೂ ಮೇಲೆ ಉದಾಹರಿಸಿರುವ ಶ್ಲೋಕಗಳ ಭಾವಾರ್ಥವು.

ಇಲ್ಲಿ ಶ್ಲೋಕಗಳ ಕೊನೆಯಲ್ಲಿ 'ಇಂಥ ಭಕ್ತನು ನನಗೆ ಪ್ರಿಯನು' ಎಂಬ ಅರ್ಥದ (ಯೋ ಮದ್ಭಕ್ತಃ ಸ ಮೇ ಪ್ರಿಯಃ) ವಾಕ್ಯವೊಂದು ಪಲ್ಲವಿ ಯಾಗಿ ಮತ್ತೆಮತ್ತೆ ಬಂದಿರುವದನ್ನು ಲಕ್ಷಿಸಬೇಕು. ಹಿಂದೆ ಆರ್ತ. ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ–ಎಂಬ ನಾಲ್ಕುಬಗೆಯ ಭಕ್ತರನ್ನು ಪ್ರಸ್ತಾಪಿಸಿ ಅವರಲ್ಲಿ ಜ್ಞಾನಿಯು ನಿತ್ಯಯುಕ್ತನೂ ಏಕಭಕ್ತನೂ ಆಗಿರುತ್ತಾನೆಂದೂ ( ೭–೧೭ ) ಅವನು ಭಗವಂತನಿಗೆ ಪ್ರಿಯನು, ಭಗವಂತನೂ ಅವನಿಗೆ ಪ್ರಿಯನು (ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ) ಎಂದೂ ವರ್ಣಿ ಸಿತ್ತು. ಇದಕ್ಕೆ ಕಾರಣವೇನೆಂದರೆ : ಜ್ಞಾನಿಯು ನನ್ನ ಆತ್ಮನೇ ಎಂಬುದು ನನ್ನ ಮತವು (ಜ್ಞಾನೀ ತ್ವಾತ್ಮೈವ ಮೇ ಮತಮ್) ಎಂದು (೭–೧೮) ಭಗವಂತನು ಹೇಳಿರುತ್ತಾನೆ. ಅದರ ವಿವರವನ್ನೇ ಇಲ್ಲಿ ಹೇಳಿರುತ್ತನೆ; ಆದ್ದ ರಿಂದ ಅಕ್ಷರೋಪಾಸಕರೆಂದರೆ ಜ್ಞಾನಿಭಕ್ತರೇ ಎಂದು ಸ್ಫುಟವಾಯಿತು.

ಶ್ರುತಿಯಲ್ಲಿ "ಆತ್ಮನ ಕಾಮುಕ್ಕಾಗಿ ಎಲ್ಲವೂ ಪ್ರಿಯವಾಗಿರುತ್ತದೆ" (ಬೃ. ೨-೪-೫) ಎಂಬ ಮೈತ್ರೇಯೀಬ್ರಾಹ್ಮಣದಲ್ಲಿ ಹೇಳಿರುವದು ಜೀವಾತ್ಮನ ವಿಷಯವೆಂದೇ ತಟ್ಟನೆ ತೋರುತ್ತದೆ. ಏಕೆಂದರೆ ತನಗಾಗಿಯೇ ಹೆಂಡತಿ, ಮಕ್ಕಳು, ಹಣ-ಮುಂತಾದವೆಲ್ಲವೂ ಪ್ರಿಯವಾಗಿರುತ್ತದೆ-ಎಂಬುದು ಲೌಕಿಕ ನ್ಯಾಯ. ಆದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಮೈತ್ರೇಯೀಬ್ರಾಹ್ಮಣಕ್ಕಿಂತ ಹಿಂದೆಯೇ "**ಆತ್ಮಾನಮೇವ ಪ್ರಿಯಮುಪಾಸೀತ ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ನ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ**" (ಬೃ. ೧-೪-೮) ಆತ್ಮನನ್ನೇ ಪ್ರಿಯನೆಂದು ಉಪಾಸನೆಮಾಡಬೇಕು. ಯಾವನು ಆತ್ಮನನ್ನೇ ಪ್ರಿಯನೆಂದು ಉಪಾಸನೆಮಾಡುತ್ತಿರುವನೋ ಅವನಿಗೆ ಪ್ರಿಯವಾದದ್ದು ನಾಶವಾಗುತ್ತಿರುವದಿಲ್ಲ- ಎಂದಿದೆ. ಅದು ಪರಮಾತ್ಮನ ವಿಷಯ. ನಮಗೆಲ್ಲರಿಗೂ ನಾನೇ ನಿಜವಾದ ಆತ್ಮನು ; ನನಗಾಗಿಯೇ ಮಿಕ್ಕದ್ದೆಲ್ಲವೂ ಪ್ರಿಯವಾಗಿದೆ ಎಂಬ ಅಭಿಮಾನವಿರುತ್ತದೆ. ಆದರೂ ಈ ನಾನೇ ನಿಜವಾದ ಆತ್ಮನಲ್ಲ; ಇದರ ಪರಮಾರ್ಥಸ್ವರೂಪವೇ "ಪರಮಾತ್ಮನು"; ನಮ್ಮೆಲ್ಲರಿಗೂ ಆತ್ಮನಾಗಿರುವ ನಿಜವಾದ ಆತ್ಮನವನು. ಈ ನಿಜವನ್ನು ಲೌಕಿಕರು ಅರಿಯರು ; ಅಕ್ಷರೋಪಾಸಕನಾದವನು ಮಾತ್ರ ಈ ಪರಮಾರ್ಥವಾದ ಆತ್ಮನನ್ನೇ ತಾನೆಂದು ತಿಳಿದುಕೊಂಡಿರುತ್ತಾನೆ. ಭಗವಂತನು "ಜ್ಞಾನಿಯು ನನ್ನ ಆತ್ಮನೇ" ಎಂದೂ "ಅಕ್ಷರೋಪಾಸಕನಾದ ಭಕ್ತನು ನನಗೆ ಪ್ರಿಯನು" ಎಂದೂ ಹೇಳಿರುವದು ಈ ಪರಮಾರ್ಥಾತ್ಮನ ದೃಷ್ಟಿಯಿಂದಲೇ.

ಅಕ್ಷರೋಪಾಸಕನೇ ನಿಜವಾದ **ಪರಭಕ್ತನು** ; ಆತನ ವರ್ಣನೆಯನ್ನು "**ಅದ್ವೇಷ್ಟಾ ಸರ್ವಭೂತಾನಾಮ್**" ಎಂದುಮುಂತಾಗಿ ಗೀತೆಯಲ್ಲಿ ವರ್ಣಿಸಿರುವದು ಏಕೆಂದರೆ ಗೌಣಭಕ್ತಿಯನ್ನುಳಿದು ನಿಜವಾದ ಪರಭಕ್ತಿಯನ್ನು ಸಂಪಾದಿಸಿಕೊಳ್ಳಬೇಕೆಂಬ ಮುಮುಕ್ಷುಗಳು ಜ್ಞಾನಿಯ ಈ ಲಕ್ಷಣಗಳನ್ನು ಸಾಧನವಾಗಿ ಮಾಡಿಕೊಳ್ಳಬೇಕು-ಎಂಬ ದೃಷ್ಟಿಯಿಂದ. ಈ ಅರ್ಥವನ್ನು ಭಗವಂತನು ಹೀಗೆಂದಿರುತ್ತಾನೆ :

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥**

೧೨-೨೦

"ಯಾರು ಧರ್ಮಕ್ಕೂ ಹೊಂದಿಕೊಂಡಿರುವ ಈ ಅಮೃತಕ್ಕೆ ಕಾರಣವಾದ ಅದ್ವೇಷ್ಟೃತ್ವವೇ ಮುಂತಾದ ಸಾಧನಗುಣವನ್ನು ಅನುಷ್ಠಾನಮಾಡುತ್ತಿರುವರೋ, ಶ್ರದ್ಧೆಯುಳ್ಳವರಾಗಿ ನನ್ನಲ್ಲಿಯೇ ಪರಮತಾತ್ಪರ್ಯವುಳ್ಳವರಾಗಿರುವ ಆವರು

ನನಗೆ ಅತಿಪ್ರಿಯರಾಗಿರುತ್ತಾರೆ"–ಹೀಗೆಂದು ಭಗವಂತನೇ ಹೇಳಿರುವದರಿಂದ ಭಕ್ತಿಯಮೇಲಿನ ಶಿಖರಕ್ಕೆ ಏರಬೇಕೆನ್ನುವವರು ಈ ಸಾಧನಗಳನ್ನು ತಮ್ಮ ವರ್ತನೆಯಲ್ಲಿ ಸೇರಿಸಿಕೊಳ್ಳಬೇಕು. 'ಜ್ಞಾನಿ', 'ಯುಕ್ತ', 'ಭಕ್ತ', 'ತ್ರಿಗುಣಾತೀತ'–ಎಂದು ಮುಂತಾದ ಹೆಸರಿನಿಂದ ಸಿದ್ಧಪುರುಷರನ್ನು ಹೊಗಳಿರುವದು ಏಕೆಂದರೆ ಅವರನ್ನು ಅನುಕರಿಸಿ ತತ್ತ್ವಜಿಜ್ಞಾಸುಗಳು ಕೃತಾರ್ಥರಾಗಬೇಕು–ಎಂದು ತಿಳಿಯಿಸಿಕೊಡುವದಕ್ಕಾಗಿ.

ನಮಗೆ ಭಗವಂತನ ಅತ್ಯಂತಪ್ರಿಯರಾದ ಭಕ್ತಶ್ರೇಷ್ಠರು ಇಂಥವರೆಂದು ಗುರುತಿಸುವದು ಕಷ್ಟವಾಗಬಹುದು. ಆದರೆ ಯಾರು ಎಲ್ಲಾ ಪ್ರಾಣಿಗಳಲ್ಲಿಯೂ ಸಮಬುದ್ಧಿಯುಳ್ಳವರಾಗಿ ನಡೆಯುತ್ತಿರುವರೆಂದು– ಅಥವಾ ನಮಗಿಂತಲೂ ಹೆಚ್ಚಿನ ಸಮದೃಷ್ಟಿಯನ್ನು ಅಳವಡಿಸಿಕೊಂಡಿರುವರೆಂದು– ನಮಗೆ ಮನದಟ್ಟಾಗುವದೋ–ಅಂಥವರನ್ನು ಅನುಸರಿಸುವ ಪ್ರಯತ್ನವನ್ನು ಮಾಡಬೇಕು. ದಕ್ಷಿಣಆಫ್ರಿಕದಲ್ಲಿ ಮಹಾತ್ಮಗಾಂಧಿಯವರನ್ನು ಯಾರೋ ಕಲ್ಲಿನಿಂದ ಹೊಡೆದಾಗ ಅವರ ಶರೀರದಿಂದ ರಕ್ತವು ಚಿಮ್ಮಲು "ಈ ರಕ್ತವೇ ನಮಗೂ ನಿಮಗೂ ರಕ್ತಸಂಬಂಧವನ್ನುಂಟುಮಾಡುವದು"ಎಂದರಂತೆ! ಶ್ರೀರಾಮತೀರ್ಥರು ಹಿಮಾಲಯದಲ್ಲಿ ತಪಸ್ಸುಮಾಡುತ್ತಾ ಕುಳಿತಿರುವಾಗ ಹುಲಿಗಳೇ ಮುಂತಾದ ದುಷ್ಟ ಮೃಗಗಳೂ ಅವರ ಅಚಲಸ್ಥಿತಿಯನ್ನು ನೋಡಿ ಹಿಂಸ್ರತ್ವವನ್ನು ಬಿಟ್ಟು ಅತ್ತ ಸರಿಯುತ್ತಿದ್ದವಂತೆ! ಇಂಥ ಚರಿತ್ರೆಗಳನ್ನು ಕೇಳಿದಾಗಲಾದರೂ ನಮಗೆ "ಅದ್ವೇಷ್ಟಾ", "ಸರ್ವಭೂತಹಿತೇ ರತಾಃ" ಎಂಬಿವೇ ಮುಂತಾದ ಭಕ್ತರ ಧರ್ಮಗಳ ಮರ್ಮವು ಒಂದಿಷ್ಟು ಚಿತ್ತದಲ್ಲಿ ಸುಳಿದಾಡಿದರೆ ನಾವು ಅಧ್ಯಾತ್ಮ ಮಂದಿರದಲ್ಲಿ ಪ್ರವಿಷ್ಟರಾದಂತಾಯಿತು–ಎಂದು ತಿಳಿಯಬೇಕು.

# ೩೬. ಪುರುಷೋತ್ತಮಯೋಗ

( 8—9—69 )

ನಾನು ಉಪನ್ಯಾಸಕಾಲದಲ್ಲಿ ಆಗಾಗ್ಗೆ ಭಗವದ್ಗೀತೆಯ ಶ್ಲೋಕಗಳನ್ನೇ ಉಪಯೋಗಿಸುತ್ತಿರುತ್ತೇನೆ. ಆದ್ದರಿಂದ ಈ ಉಪನ್ಯಾಸಮಾಲೆಯು ಭಗವದ್ಗೀತೆಯ ಮೇಲಿನ ವ್ಯಾಖ್ಯಾನ– ಎಂದು ನೀವು ತಿಳಿಯಬಾರದು. ನಾನು ಈಗ ಹೇಳುತ್ತಿರುವದಕ್ಕೆ ಭಗವಂತನ ವಚನದ ಆಧಾರವಿದೆ ಎಂದು ತೋರಿಸಿಕೊಡುವದೇ ನನ್ನ ಉದ್ದೇಶವಾಗಿರುತ್ತದೆ.

ಇದರಂತೆ ಗೀತಾಭಾಷ್ಯದಲ್ಲಿ ಆಗಾಗ್ಗೆ ಇದು ಅವಿದ್ಯಾದೃಷ್ಟಿಯಿಂದ ಹೇಳಿದ್ದು-ಎಂದು ಬರೆದಿರುತ್ತದೆ. ಅದರಮಾತ್ರದಿಂದ ಅದು ಕಡಿಮೆಯ ಅಂತಸ್ತಿನ ಉಪದೇಶವೆಂದು ಭಾವಿಸಬಾರದು. ಮುಂದೆ ಹೇಳುವ ತತ್ತ್ವದ ದೃಷ್ಟಿಯಿಂದ ಅದು ಸುಲಭವಾಗಿರುವ ಸಾಧನ ಎಂದು ಮಾತ್ರ ಅದಕ್ಕೆ ಅರ್ಥವನ್ನು ಕಲ್ಪಿಸಬೇಕು. ಅಷ್ಟೆ. ವಿಶ್ವರೂಪೋಪಾಸಕರಿಗೂ ಅಕ್ಷರೋಪಾಸಕರಿಗೂ ಭೇದವನ್ನು ಕಲ್ಪಿಸಿ ಭಗವಂತನು :

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥** ಗೀ. ೧೨-೮

"ನನ್ನಲ್ಲಿಯೇ ಸಂಕಲ್ಪವಿಕಲ್ಪಾತ್ಮಕವಾದ ಮನಸ್ಸನ್ನು ಇಟ್ಟುಕೊಂಡಿರು, ನನ್ನಲ್ಲಿಯೇ ನಿಶ್ಚಯಾತ್ಮಕವಾದ ಬುದ್ಧಿಯನ್ನಿಟ್ಟುಕೊ. ಹೀಗೆ ಮನೋಬುದ್ಧಿಗಳನ್ನು ಮತ್ತೆಲ್ಲಿಯೂ ಇಡದೆ, ನಿರಂತರವಾಗಿ ನನ್ನನ್ನು ಉಪಾಸನೆಮಾಡುತ್ತಿದ್ದರೆ ಯಾವಜ್ಜೀವವೂ ಮಾಡಿದ ಈ ಉಪಾಸನೆಯ ಫಲವಾಗಿ ನನ್ನ ರೂಪವನ್ನೇ ಹೊಂದಿ ಶರೀರಪಾತಾನಂತರದಲ್ಲಿ ನನ್ನಲ್ಲಿಯೇ ಇದ್ದುಕೊಂಡುಬಿಡುವೆ" ಎಂದು ಹೇಳಿರುತ್ತಾನೆ. ಇದಕ್ಕಿಂತ ಮೊದಲು "ಯಾರು ಸರ್ವಕರ್ಮಗಳನ್ನೂ ನನ್ನಲ್ಲಿಯೇ ಅರ್ಪಿಸಿ ನಾನೇ ಪರಗತಿಯೆಂದು ನಂಬಿರುವರೋ ಅಂಥ ಅನನ್ಯಯೋಗದಿಂದ ಧ್ಯಾನಿಸುತ್ತಿರುವವರನ್ನು ಈ ಮೃತ್ಯುಯುಕ್ತವಾದ ಸಂಸಾರಸಾಗರದಿಂದ ಉದ್ಧಾರಮಾಡುವೆನು" ಎಂದಿರುತ್ತಾನೆ. ಅಕ್ಷರೋಪಾಸಕರ ವಿಷಯವನ್ನು ಹೇಳುವಾಗ, '**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ**' ಅಕ್ಷರವು ನಿರ್ದೇಶ್ಯವಲ್ಲ, ಅವ್ಯಕ್ತವಾಗಿದೆ, ಕೂಟಸ್ಥವಾಗಿದೆ ಅಚಲವಾಗಿದೆ, ಧ್ರುವವಾಗಿರುತ್ತದೆ. ಅದನ್ನು ಇಂದ್ರಿಯನಿಗ್ರಹಪೂರ್ವಕವಾಗಿ ಉಪಾಸನೆಮಾಡುವವರು ನನ್ನನ್ನೇ ಸೇರುತ್ತಾರೆ' ( ೧೨-೪ ) ಎಂದಿರುತ್ತಾನೆ. ಹೀಗೆ ಒಂದು ಕಡೆಯಲ್ಲಿ ಅಕ್ಷರೋಪಾಸಕರು (**ತೇ ಪ್ರಾಪ್ನುವನ್ತಿ ಮಾಮೇವ**) ಸ್ವತಂತ್ರರಾಗಿ ನನ್ನನ್ನು ಸೇರುತ್ತಾರೆ; ಇನ್ನೊಂದು ಕಡೆಯಲ್ಲಿ (**ತೇಷಾಮಹಂ ಸಮುದ್ಧರ್ತಾ**) ಅವರನ್ನು ನಾನು ಸಂಸಾರಸಾಗರದಿಂದ ಹಿಡಿದೆತ್ತುವೆನು-ಎಂದಿರುವುದರಿಂದ ವಿಶ್ವರೂಪವು ಬೇರೆ, ಅಕ್ಷರವು ಬೇರೆ-ಎಂಬ ಭ್ರಾಂತಿಯುಂಟಾಗುವ ಸಂಭವವಿದೆ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಯಾವದು ನಿರ್ವಿಶೇಷವಾದ ಸರ್ವವ್ಯಾಪಿಯಾದ ಅಕ್ಷರವೋ, ಅದೇ ವಿಶ್ವರೂಪನಾದ ಪರಮೇಶ್ವರನು, ನಿಲುವಂಗಿಯನ್ನು ಹಾಕಿಕೊಂಡಿರುವ ರಾಯರು ಬೇರೆ. ಬರಿಮೈಯಲ್ಲಿ ಸ್ನಾನದ ಪಂಚೆಯನ್ನುಟ್ಟುಕೊಂಡಿರುವ ರಾಯರು ಬೇರೆ- ಎನ್ನುವದು ಹೇಗೆ ಸರಿಯಲ್ಲವೋ ಹಾಗೆಯೇ, ಸಕಲವಿಶ್ವರೂಪದಿಂದ ತೋರಿಕೊಂಡಿರುವ ಭಗವಂತನೇ

ಪರಿಶೇಷರೂಪದಿಂದ ಇಟ್ಟುಕೊಂಡಿರುವ ಅಜಾವ್ಯಕ್ತೀಭೂತವಾದ ಅಕ್ಷರತತ್ತ್ವವು: ಉಪಾಧಿಯಿಂದ ಕೂಡಿರುವುದು, ಉಪಾಧಿಯಿಲ್ಲದೆ ಇರುವುದು– ಎಂಬ ಭೇದ ಮಾತ್ರದಿಂದ ಉಪಾಸ್ಯವಾದ ವಿಶ್ವರೂಪವೂ ಅಕ್ಷರವೂ ಬೇರೆಬೇರೆಯಾಗಲಾರವು.

ಇದನ್ನೆಲ್ಲ ಏತಕ್ಕೆ ಹೇಳುತ್ತಿದ್ದೇನೆ ಎಂದರೆ ಈ ದಿನವೂ ಅದೇ ಭಗವಂತನನ್ನೇ 'ಪುರುಷೋತ್ತಮ'ರೂಪದಿಂದ ಕಂಡುಕೊಂಡು ಪುರುಷಾರ್ಥವನ್ನು ಪಡೆದುಕೊಳ್ಳುವ ಮಾರ್ಗವನ್ನು ತಿಳಿಯಿಸುವುದಕ್ಕೆ ಹೊರಟಿರುತ್ತೇನೆ. ಇಷ್ಟುಮಾತ್ರದಿಂದ ಒಂದುದಿವಸ ಹೇಳುವ ವಿಶ್ವರೂಪ, ಇನ್ನೊಂದು ದಿವಸ ಹೇಳುವ ಅಕ್ಷರರೂಪ, ಈ ದಿನ ಹೇಳಲಿರುವ ಪುರುಷೋತ್ತಮರೂಪ–ಇವು ಮೂರೂ ಬೇರೆಬೇರೆ ಎಂದು ಎಂದಿಗೂ ಭಾವಿಸಬಾರದು. ಈದಿನ ನಾನು ಒಳಗಿನ ಕೋಣೆಯಿಂದ ಹೊರಕ್ಕೆ ಬಂದು ಈ ಸಭಾಂಗಣದಲ್ಲಿ ಉಪನ್ಯಾಸಕ್ಕೆ ಸಿದ್ಧನಾಗಿರುತ್ತೇನೆ. ನೀವು ಹೊರಗಿನ ಬಾಗಿಲುಗಳ ಮೂಲಕ ಇದೇ ಸಭಾಂಗಣಕ್ಕೆ ಬಂದಿರುತ್ತೀರಿ. ಇಷ್ಟುಮಾತ್ರದಿಂದ ಸಭಾಂಗಣವೇ ಬೇರೆಬೇರೆಯದಾಗಿದೆ ಎಂದು ನಾವು ಯಾರೂ ತಿಳಿಯುವುದಿಲ್ಲವಷ್ಟೆ? ಹಾಗೆಯೇ ಭಗವತ್ಪ್ರಾಪ್ತಿಗೆ ವಿಶ್ವರೂಪೋಪಾಸನೆ, ಅಕ್ಷರೋಪಾಸನೆ, ಪುರುಷೋತ್ತಮಯೋಗ–ಇವು ಬೇರೆಬೇರೆಯ ಪ್ರವೇಶದ್ವಾರಗಳು–ಎಂದು ಅರಿಯಬೇಕು.

ಪುರುಷೋತ್ತಮಸ್ವರೂಪವನ್ನು ಅರಿತುಕೊಳ್ಳುವುದಕ್ಕೆ ನಾವು ಅನುಸರಿಸಬೇಕಾಗಿರುವ ಮಾರ್ಗವನ್ನು ಗೀತೆಯಲ್ಲಿ ಶ್ರೀಭಗವಂತನು ಸಂಸಾರವೆಂಬ ಅಶ್ವತ್ಥವೃಕ್ಷದ ವರ್ಣನೆಯ ಮೂಲಕವಾಗಿ ಹೇಳಿಕೊಟ್ಟಿರುತ್ತಾನೆ.

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥**

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬನ್ಧೀನಿ ಮನುಷ್ಯಲೋಕೇ ॥** ಗೀ. ೧೫–೧, ೨

ಅರಳಿಮರ, ಆಲದಮರ– ಇವುಗಳನ್ನು ವೇದದಲ್ಲಿ ಬಹಳವಾಗಿ ವರ್ಣಿಸಿದೆ. ಅದರಲ್ಲಿಯೂ ಅರಳಿಮರವು ಹಿಂದುಗಳಿಗೆ ಬಹಳ ಪವಿತ್ರವೆನಿಸಿಕೊಂಡಿರುತ್ತದೆ. ಈ ಮರದ ಕೆಳಗೆ ಗೌತಮಬುದ್ಧನು ಬಹುಕಾಲ ತಪಸ್ಸನ್ನುಮಾಡಿ ಸಂಸಾರದ

ದುಃಖಕ್ಕೆಲ್ಲ 'ನಾನು' ಎಂಬ ಅಲ್ಪಾತ್ಮಬುದ್ಧಿಯೇ ಕಾರಣವೆಂದೂ ಮನುಷ್ಯನು ಇದನ್ನಾಶ್ರಯಿಸಿಕೊಂಡಿರುವದರಿಂದ ತೃಷ್ಣೆ (ಆಶೆ ಎಂಬ ನೀರಡಿಕೆ)ಯಿಂದ ಸಂಸಾರಿಯಾಗಿ ಪರಿತಪಿಸುತ್ತಿರುವನೆಂದೂ ಕಂಡುಕೊಂಡನು. ಆದ್ದರಿಂದ ಇದಕ್ಕೆ 'ಬೋಧಿವೃಕ್ಷ' ಎಂದು ಹೆಸರು ಬಂದಿತೆಂದು ಬೌದ್ಧರು ಹೇಳುತ್ತಾರೆ. ಈ ಮರವು ಬ್ರಹ್ಮವಿಷ್ಣುಶಿವಾತ್ಮಕವಾಗಿರುವದೆಂದು ಭಾವಿಸಿ ಹಿಂದುಗಳು ಇವನ್ನು ನೆಟ್ಟು ಸಾಕುತ್ತಾರೆ. ಇದನ್ನು ಭಕ್ತಿಯಿಂದ ಪ್ರದಕ್ಷಿಣೆಮಾಡಿದರೆ ಪುಣ್ಯವುಂಟೆಂದು ಭಾವಿಸುತ್ತಾರೆ; ಅಶ್ವತ್ಥವೃಕ್ಷವು ಸಂಸಾರದ ಸಂಕೇತವೆಂದು ವರ್ಣಿಸಿರುವದು ಕಾಠಕೋಪನಿಷತ್ತಿನಲ್ಲಿದೆ. ಇದನ್ನೇ ಗೀತೆಯಲ್ಲಿಯೂ ವರ್ಣಿಸಿರುತ್ತದೆ. ಇತಿಹಾಸದಲ್ಲಿ ಇದನ್ನು 'ಬ್ರಹ್ಮವೃಕ್ಷ'ವೆಂದು ಕರೆದಿರುವದು ಕಂಡುಬರುತ್ತದೆ.

ಈ ಅಶ್ವತ್ಥವೃಕ್ಷಕ್ಕೆ ಊರ್ಧ್ವಮೂಲ ( ಮೇಲೆ ಬೇರು ), ಕೆಳಗಡೆಗೆ ಕೊಂಬೆಗಳು, ರೆಂಬೆಗಳು, ಎಲೆಗಳು; ಅದರ ಬಿಳಲುಗಳು ಕೆಳಗಡೆಗೂ ಹಬ್ಬಿವೆ. ಅವು ಗುಣಗಳಿಂದ ಬೆಳೆದುಕೊಂಡಿವೆ, ವಿಷಯವೆಂಬ ಚಿಗುರುಗಳು ಅದಕ್ಕಿವೆ. ಕೆಳಗಡೆಗೂ ಬೇರುಗಳು ಬಿಟ್ಟುಕೊಂಡಿವೆ; ಇವು ಕರ್ಮಕ್ಕನುಗುಣವಾಗಿ ಮನುಷ್ಯಲೋಕದಲ್ಲಿ ಹರಡಿಕೊಂಡಿವೆ– ಎಂದುಮುಂತಾಗಿ ಶ್ರುತಿಸ್ಮೃತಿಗಳಲ್ಲಿ ವರ್ಣಿಸಿರುವದನ್ನು ಕೆಲವರು ಅಕ್ಷರಶಃ ನಂಬಿ ಮೇಲುಗಡೆಗೆ ಹೆಬ್ಬೇರೂ ಕೆಳಗಡೆಗೆ ಕೊಂಬೆಗಳೂ ಇರುವಂತೆ ಒಂದು ಮರದ ಚಿತ್ರವನ್ನು ಬರೆದು ಹದಿನೈದನೆಯ ಅಧ್ಯಾಯಕ್ಕೆ ಸೇರಿಸಿ ಅಚ್ಚುಮಾಡಿಸಿರುವದೂ ಉಂಟು ! ಆದರೆ ಇಂಥ ಯಾವ ಮರವನ್ನೂ ಉದ್ದೇಶಿಸಿ ಶಾಸ್ತ್ರದಲ್ಲಿ ಬರೆದಿಲ್ಲ. ಅಶ್ವತ್ಥವು ನಮ್ಮ ಭೂಲೋಕದಲ್ಲಿ ಹೆಮ್ಮರವಾಗಿರುವದರಿಂದ ಅದರ ರೂಪಕವನ್ನು ಕೊಟ್ಟು ಸಂಸಾರವನ್ನೇ ಇಲ್ಲಿ ವರ್ಣಿಸಿರುತ್ತದೆ.

ಅಶ್ವತ್ಥ ಎಂದರೆ (ನಾಳೆಗೆ ನಿಲ್ಲುವದಲ್ಲ) ಎಂಬ ಅಕ್ಷರಾರ್ಥವೂ ಇದೆ. ಈ ಅರ್ಥವನ್ನು ಅವಲಂಬಿಸಿ ಸಂಸಾರವು ಇಷ್ಟು ದೊಡ್ಡದಾಗಿ ಹಬ್ಬಿಕೊಂಡು ಶಾಖೋಪಶಾಖೆಗಳಾಗಿ ಕಾಣಿಸಿಕೊಳ್ಳುತ್ತಾ, ಜೀವರುಗಳ ಕರ್ಮಕ್ಕೆ ತಕ್ಕಂತೆ ಬಗೆಬಗೆಯ ಫಲಗಳನ್ನು ಕೊಡುತ್ತಲಿದ್ದರೂ ಈ ಸಂಸಾರವನ್ನೇ ನೆಚ್ಚಿ ಅಜ್ಞಾನಿಗಳು ಇದನ್ನೇ ಗಟ್ಟಿಯಾಗಿ ಅವಲಂಬಿಸಿಕೊಂಡಿರುತ್ತಿದ್ದರೂ, ಇದು ತಾನು ತೋರುವ ರೂಪದಿಂದ ನಿಜವಾಗಿ ಸ್ಥಿರವಲ್ಲ. ಎಂಥ ದೊಡ್ಡ ಮರಗಳನ್ನೂ ಕೊಡಲಿಯಿಂದ ಕತ್ತರಿಸಿಹಾಕಿಬಿಡಬಹುದಾಗಿರುವಂತೆ ಇದನ್ನೂ ಇಲ್ಲವಾಗಿಸಿಕೊಳ್ಳಬಹುದು :

ನ ರೂಪಮಸ್ಯೇಹ ತಥೋಪಲಭ್ಯತೇ
  ನಾನ್ತೋ ನ ಚಾದಿರ್ನ ಚ ಸಂಪ್ರತಿಷ್ಠಾ ।
ಅಶ್ವತ್ಥಮೇನಂ ಸುವಿರೂಢಮೂಲ-
  ಮಸಙ್ಗಶಸ್ತ್ರೇಣ ದೃಢೇನ ಛಿತ್ತ್ವಾ ॥

ತತಃ ಪದಂ ತತ್ಪರಿಮಾರ್ಗಿತವ್ಯಮ್
  ಯಸ್ಮಿನ್ ಗತಾ ನಿವರ್ತನ್ತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
  ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ಗೀ. ೧೫-೩, ೪

ಈ ವೃಕ್ಷಕ್ಕೆ ಊರ್ಧ್ವಮೂಲ ( ಮೇಲುಗಡೆ ಬೇರು ) ಎಂದರೆ ಉತ್ಕೃಷ್ಟವಾದ ಅವ್ಯಕ್ತಬ್ರಹ್ಮವೇ ಮೂಲಕಾರಣವು. ಸಂಸಾರವು ಎಲ್ಲರ ಅನುಭವದಲ್ಲಿರುವದ ರಿಂದ ವ್ಯಕ್ತವಾಗಿರುತ್ತದೆ ; ಆದರೆ ಸಂಸಾರಕ್ಕೆ ಆಧಾರವಾಗಿರುವ ಪರಬ್ರಹ್ಮವು ಅವ್ಯಕ್ತವಾಗಿ ಪರಮಸೂಕ್ಷ್ಮವಾಗಿರುತ್ತದೆ. ಈ ಸಂಸಾರದ ತೋರಿಕೆಯ ರೂಪವನ್ನು ಅಸಂಗಶಸ್ತ್ರದಿಂದ ಕತ್ತರಿಸಿಹಾಕಬೇಕು, ಇದರ ಮೂಲವಾದ ಪರ ಬ್ರಹ್ಮವನ್ನು ಅರಿತುಕೊಳ್ಳಬೇಕು. ಹಾಗೆ ಅರಿತುಕೊಂಡಾತನೇ ವೇದಾರ್ಥವಿದ ನೆನಿಸುತ್ತಾನೆ-ಎಂದು ಭಗವಂತನು ಜ್ಞಾನಿಯನ್ನು ಸ್ತುತಿಸಿರುತ್ತಾನೆ. ಈ ಸಂಸಾರವೃಕ್ಷವನ್ನು ಕತ್ತರಿಸಿಹಾಕಿ ಆ ವಿಷ್ಣುವಿನ ಪರಮಪದವನ್ನು ಹುಡುಕಿ ಕಂಡುಕೊಳ್ಳಬೇಕು. ಆದ್ಯಪುರುಷನಾದ ಭಗವಂತನಿಂದಲೇ ಈ ಸಂಸಾರವೆಲ್ಲ ವೂ ಹುಟ್ಟಿ ಬೆಳೆದು ತೋರಿಕೊಳ್ಳುತ್ತಿರುವದು. 'ಆತನನ್ನೇ ನಾನು ಶರಣು ಹೊಕ್ಕಿರುತ್ತೇನೆ' ಎಂದು ದೃಢಸಂಕಲ್ಪವನ್ನು ಮಾಡಿಕೊಳ್ಳಬೇಕು-ಎಂದು ಇಲ್ಲಿ ಭಗವಂತನು ಉಪದೇಶಿಸಿರುತ್ತಾನೆ.

ಈ ಪರಮಪದವನ್ನು ಸೇರುವದಕ್ಕೆ ಯಾರು ಅಧಿಕಾರಿಗಳು ?-ಎಂದರೆ

ನಿರ್ಮಾನಮೋಹಾ ಜಿತಸಂಗದೋಷಾ
  ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-
  ರ್ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥ ಗೀ. ೧೫-೫

ಈ ಅಶ್ವತ್ಥವೃಕ್ಷವು ಯಾರನ್ನು ತನ್ನ ಕಡೆಗೆ ಸೆಳೆದುಕೊಳ್ಳುವದೋ ಅಂಥ ಅಭಿ ಮಾನಿಗಳಾದ ಸಂಗದೋಷವುಳ್ಳವರಿಗೆ ಆ ಊರ್ಧ್ವಮೂಲವಾದ ವಿಷ್ಣುಪಾದವು ಸಿಕ್ಕದಂತೆ ಮಾಡುತ್ತಿರುವದು. ಆದರೆ ಅಭಿಮಾನವಿಲ್ಲದವರು ಅಸಂಗಶಸ್ತ್ರದಿಂದ ಇದನ್ನು ಕತ್ತರಿಸಿಹಾಕಿ ಪರಮಪದವನ್ನು ಕಂಡುಕೊಳ್ಳುವದಕ್ಕೆ ಪ್ರಯತ್ನಿಸುತ್ತಿ

ದಾರೆ. ವಿಷಯಗಳಲ್ಲಿ ರಾಗದ್ವೇಷಗಳೆಂಬ ದ್ವಂದ್ವಕ್ಕೆ ಸಿಕ್ಕಿರುವವರು ಸುಖ ದುಃಖಗಳೆಂಬ ಎರಡನ್ನೂ ಅನುಭವಿಸುತ್ತಾ ಈ ವೃಕ್ಷದಲ್ಲಿಯೇ ಗಜಬಜಿಸು ತ್ತಿರುವ ಹಕ್ಕಿಗಳಾಗಿರುತ್ತಾರೆ. ಯಾರು ವಿಷಯಗಳಿಂದ ಮೂಢರಾಗದೆ ತಮ್ಮೊಳಗೇ ಇರುವ ಆ ಪರಮಾತ್ಮನನ್ನು ಕಾಣುವದಕ್ಕೆಂದು ತವಕಿಸುತ್ತಿರು ವರೋ ಅವರೇ ಅವ್ಯಯವಾದ ವಿಷ್ಣುಪದವನ್ನು ಸೇರುವರು.

## 6—9—69[1]

ಈ ಪರಮಪದವು ಎಂಥ ತೇಜೋಮಯವಾಗಿರುವದೆಂದರೆ :

**ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥** ಗೀ. ೧೫–೬

ಎಲ್ಲವನ್ನೂ ತನ್ನ ಪ್ರಕಾಶದಿಂದ ಬೆಳಗಿತೋರಿಸುತ್ತಿರುವ ಸೂರ್ಯನು ಅದನ್ನು ತೋರಿಸಲಾರನು, ಚಂದ್ರನೂ ತೋರಿಸಲಾರನು, ಅಗ್ನಿಯೂ ತೋರಿಸಲಾರನು; ಏಕೆಂದರೆ ಸೂರ್ಯಾದಿಗಳಲ್ಲಿರುವ ತೇಜಸ್ಸೂ ಆ ಭಗವಂತನ ತೇಜಸ್ಸಿನ ಒಂದು ಅಂಶದ ಅನುಗ್ರಹದಿಂದ ಹೊರತೋರಿಕೊಂಡಿರುವದೆಂದು ಮುಂದೆ (೧೨) ಭಗ ವಂತನೇ ಹೇಳಿರುತ್ತಾನೆ. ಮದಮೋಹಾದಿಗಳಿಲ್ಲದ ಸಂಗದೋಷವನ್ನು ಗೆದ್ದು ಕೊಂಡು ನಿರ್ದ್ವಂದ್ವರಾಗಿರುವ ಜ್ಞಾನಿಗಳು ಈ ತೇಜೋಮಯವಾದ ಪರಮ ಪದವನ್ನು ಸೇರಿದರೆ ಮತ್ತೆ ಅವರಿಗೆ ಪುನರಾವೃತ್ತಿಯು ಎಂದೆಂದಿಗೂ ಇರುವ ದಿಲ್ಲ.

ಯಾವದನ್ನು ಹೋಗಿ ಮುಟ್ಟಿದರೂ ಅದನ್ನು ಬಿಟ್ಟು ಹಿಂತಿರುಗುವದು ನಿಶ್ಚಯ ; ಸಂಯೋಗವಾದರೆ ವಿಯೋಗವು ನಿಶ್ಚಿತವಲ್ಲವೆ ? ಹೀಗಿರುವಲ್ಲ ಆ ತೇಜೋಮಯವಾದ ವಿಷ್ಣುಪದವನ್ನು ಸೇರಿದವರು ಏಕೆ ಹಿಂತಿರುಗುವದಿಲ್ಲ ? ಎಂದರೆ ಅದಕ್ಕೆ ಕಾರಣವಿದು–ಎಂದು ಭಗವಂತನು ಹೇಳಿರುತ್ತಾನೆ :

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥** ಗೀ. ೧೫–೭

---

1. 5–9–69, 6–9–69 ಈ ದಿನಗಳಲ್ಲಿ ಮಾಡಿದ ಎರಡು ಉಪನ್ಯಾಸಗಳನ್ನೂ ಒಟ್ಟುಸೇರಿಸಿ ಇಲ್ಲಿ ಒಂದು ಉಪನ್ಯಾಸವೆಂದು ಪರಿಗಣಿಸಿದೆ. ಆದ್ದರಿಂದ ಇಲ್ಲಿರುವ ವಾಕ್ಯಗಳ ಅನುಕ್ರಮವೂ ಸ್ವಲ್ಪ ಮಾರ್ಪಟ್ಟಿರುತ್ತದೆ. ಉಪನ್ಯಾಸಗಳ ಅನುಕ್ರಮ ಸಂಖ್ಯೆಯೂ ಬೇರೆಯಾಗಿದೆ.

ಜೀವರೆಂದು ಪ್ರಸಿದ್ಧರಾಗಿರುವ ಆತ್ಮರುಗಳೆಲ್ಲರೂ ಪರಮಾತ್ಮನಾದ ನಾರಾಯಣನ ಅಂಶರೇ. ಸೂರ್ಯನ ಪ್ರತಿಬಿಂಬವು ಜಲವೆಂಬ ಉಪಾಧಿಯಿಂದ ತೋರುತ್ತಿದ್ದು, ಆ ನಿಮಿತ್ತವು ಇಲ್ಲವಾದರೆ ಸೂರ್ಯನಲ್ಲಿಯೇ ಒಂದಾಗಿ ಹೇಗೆ ಅವನ ರೂಪದಿಂದಲೇ ಇದ್ದುಕೊಂಡುಬಿಡುವದೋ; ಗಡಿಗೆ, ಮಡಕೆ, ಕುಡಿಕೆ– ಮುಂತಾದ ಉಪಾಧಿಗಳಿಂದ ಬೇರೆಬೇರೆ ತೋರುತ್ತಿದ್ದ ಘಟಾಕಾಶಕರಕಾಕಾಶವೇ ಮುಂತಾದವು ಘಟಾದಿಗಳೆಂಬ ನಿಮಿತ್ತವು ಇಲ್ಲವಾದರೆ ಹೇಗೆ ಆಕಾಶವನ್ನೇ ಸೇರಿ ಮತ್ತೆ ತಮ್ಮ ಹಿಂದಿನ ರೂಪಕ್ಕೆಮರಳಿಬರುವದಿಲ್ಲವೋ ಹಾಗೆಯೇ ಈ ಜೀವನೂ ಶ್ರೋತ್ರಚಕ್ಷುರಾದಿಕರಣಗಳ ಮೂಲಕ ವಿಷಯಗಳ ಭೋಕ್ತೃವಾಗಿ ಸಂಸಾರದಲ್ಲಿ ತೊಳಲುತ್ತಿರುವನು. ಅವನು ಪರಮಾತ್ಮನ ಅಂಶನೆಂದು ತೋರುತ್ತಿರುವಾಗಲೂ–ಹೇಗೆ ಸೂರ್ಯಬಿಂಬವು ಸೂರ್ಯನನ್ನು ಬಿಟ್ಟು ಬೇರೆಯಾಗಿಲ್ಲವೋ ಘಟಾಕಾಶವು ಮಹಾಕಾಶವನ್ನು ಬಿಟ್ಟು ಬೇರೆಯಾಗಿಲ್ಲವೋ ಹಾಗೆಯೇ–ಪರಮಾತ್ಮನಿಗಿಂತ ವ್ಯತಿರಿಕ್ತವಾಗಿ ಇರುವದೇ ಇಲ್ಲ. ಶರೀರವನ್ನು ಬಿಟ್ಟು ಉತ್ಕ್ರಾಂತಿಯನ್ನು ಹೊಂದಿ ಶರೀರಾಂತರವನ್ನು ಹೊಂದುವಾಗಲೂ ಒಂದು ಶರೀರದಲ್ಲಿದ್ದುಕೊಂಡು ಬಗೆಬಗೆಯ ವಿಷಯಗಳನ್ನು ಭೋಗಿಸುತ್ತಾ ಸುಖದುಃಖ ಮೋಹಗಳನ್ನನುಭವಿಸುವವನಂತೆ ಕಾಣಿಸುತ್ತಿದ್ದರೂ ಆಗಲೂ ಅವನು ನಿಜವಾಗಿ ತನ್ನ ಪರಮಾರ್ಥರೂಪದಿಂದ ಪರಮಾತ್ಮನಾದ ವಿಷ್ಣುಭಗವಂತನಿಗಿಂತ ಅನನ್ಯನಾಗಿಯೇ ಇರುತ್ತಾನೆ. ಈ ತತ್ತ್ವವನ್ನು ಸಾಧಕರಾಗಿ ಸಮಾಹಿತಚಿತ್ತರಾಗಿರುವ ಭಕ್ತರು ಅರಿತುಕೊಳ್ಳುವರು. ಆದರೆ ಯಾರು ಚಿತ್ತಸಂಸ್ಕಾರವಿಲ್ಲದವರೋ ಅವರು ಶಾಸ್ತ್ರಾದಿಪ್ರಮಾಣಗಳಿಂದ ಅರಿತುಕೊಳ್ಳಬೇಕೆಂದು ಪ್ರಯತ್ನಿಸಿದರೂ ಈ ತತ್ತ್ವವನ್ನು ಅರಿತುಕೊಳ್ಳಲಾರದೆ ಇರುತ್ತಾರೆ.

ಭಗವಂತನು ಈ ಅಧ್ಯಾಯದಲ್ಲಿ ಹೇಳಿದಂತೆ ಎಲ್ಲರಿಗೂ ಸ್ವರೂಪದಿಂದ ಕಂಡುಕೊಳ್ಳುವದಕ್ಕೆ ಅಗಮ್ಯನಾಗಿರುತ್ತಿದ್ದರೂ ಬಗೆಬಗೆಯ ರೂಪಗಳಿಂದ ಎಲ್ಲರಿಗೂ ಕಾಣುವಂತೆ ಅವನು ಪ್ರಕಟನೇ ಆಗಿರುತ್ತಾನೆ. ಆತನು ಸೂರ್ಯಚಂದ್ರಾದಿಗಳ ರೂಪದಿಂದ ಎಲ್ಲರ ಕಣ್ಣಿಗೂ ಹೊಳೆಯುತ್ತಾ ಕಾಣಿಸುತ್ತಿದಾನೆ; ಭೂಮಿಯೊಳಗೆ ಹೊಕ್ಕಿದ್ದು ಅದರಮೇಲೆ ವಾಸಿಸುವ ಪ್ರಾಣಿಗಳನ್ನೆಲ್ಲ ತನ್ನ ವೀರ್ಯದಿಂದ ಧರಿಸಿರುತ್ತಾನೆ. ಭೂಮಿಯು ತನ್ನ ಸ್ಥಾನದಿಂದ ಕೆಳಕ್ಕೆ ಉರುಳಿಹೋಗದೆ, ಅಥವಾ ಪುಡಿಪುಡಿಯಾಗದೆ ಇರುತ್ತಿರುವದು ಅವನ ಶಕ್ತಿಯಿಂದಲೇ. ಗಿಡಮರಗಳು ಫಲಪುಷ್ಪಭರಿತವಾಗಿರುವದೂ ರಸಾತ್ಮಕನಾಗಿರುವ ಚಂದ್ರರೂಪನಾದ ಆತನ ವಿಭೂತಿಯಿಂದಲೇ. ಚಂದ್ರಗ್ರಹಕ್ಕೆ ಹೋಗಿ ಅಲ್ಲಿಂದ ಮಣ್ಣುತಂದಿರುವ ಭೌತಿಕಶಾಸ್ತ್ರಜ್ಞರಿಗೂ ಇದರ ಗುಟ್ಟು ತಿಳಿಯದೆಇದೆ! ಪ್ರಾಣಿಗಳ ಉದರದಲ್ಲಿದ್ದ ಭಕ್ಷ್ಯಭೋಜ್ಯಚೋಷ್ಯಲೇಹ್ಯವೆಂಬ ನಾಲ್ಕು ಬಗೆಯ

ಅನ್ನವನ್ನು ಅರಗಿಸುವ ಶಕ್ತಿಯನ್ನು ಕೊಟ್ಟಿರುವ ವೈಶ್ವಾನರನೂ ಆತನೇ. ಸರ್ವರ ಹೃದಯದಲ್ಲಿದ್ದುಕೊಂಡೇ ಸ್ಮರಣಶಕ್ತಿಯನ್ನೂ ವಿಸ್ಮರಣವನ್ನೂ ಅವರವರ ಕರ್ಮಾನುಸಾರವಾಗಿ ಅನುಗ್ರಹಿಸುತ್ತಿರುವವನು ಆತನೇ. ಸರ್ವವೇದಗಳೂ ಆತನನ್ನೇ ಪ್ರತಿಪಾದಿಸುವವಕ್ಕೆಂದು ಹೊರಟಿರುತ್ತವೆ. ವೇದಾಂತದ ಪ್ರವರ್ತನೆಮಾಡಿದವಾತನು ಆ ತ ನೇ. ವೇದಾರ್ಥವನ್ನು ಯಥಾರ್ಥವಾಗಿ ಬಲ್ಲಾತನೆಂದರೆ ಆತನೇ. ಇಂಥ ವಿಭೂತಿಯುಳ್ಳವನು ಆ ಭಗವಂತನು! ಇದನ್ನಾದರೂ ಆತನ ಭಕ್ತರು ಮಾತ್ರವೇ ಅರಿಯಬಲ್ಲರು. (ಗೀ. ೧೫--೧೫).

ವಿಶ್ವರೂಪೋಪಾಸನೆಗೂ ಪುರುಷೋತ್ತಮಯೋಗಕ್ಕೂ ಇರುವ ವೈಲಕ್ಷಣ್ಯವೇನೆಂದರೆ: ವಿಶ್ವರೂಪವು ತನ್ನ ಸಕಲವಿಭೂತಿವಿಶಿಷ್ಟವಾಗಿರುವ ರೂಪದಿಂದ ಪ್ರಕಟವಾಗಿರುತ್ತದೆ; ಅದರಲ್ಲಿಯೇ ಮನೋಬುದ್ಧಿಗಳನ್ನಿಟ್ಟುಕೊಂಡು ಸಂತತವಾಗಿ ಉಪಾಸನೆಮಾಡಿ ಸಾಕ್ಷಾತ್ಕಾರವನ್ನು ಹೊಂದಿದವರು ಶರೀರವು ಬಿದ್ದುಹೋದಬಳಿಕವೂ ಆ ಭಗವಂತನನ್ನೇ ಮುಟ್ಟಿ ಎಂದೆಂದಿಗೂ ಆತನಲ್ಲಿಯೇ ಇದ್ದುಕೊಂಡಿರುತ್ತಾರೆ. ಆ ಭಾವನಾರೂಪವಾದ ಉಪಾಸನೆಯ ಔತ್ಕಟ್ಯವು ಅಂಥ ಉತ್ಕೃಷ್ಟಫಲವನ್ನು ಕಾಲಾನುಕಾಲಕ್ಕೆ ಕೊಡುವದು. ಆದರೆ ಇಲ್ಲಿ ಹಾಗಲ್ಲ. ಪರಮಾತ್ಮನ ಉಪಾಧಿಯ ಮರೆಯನ್ನು ತೆಗೆದುಹಾಕಿ–ಕೋಟು, ಪೇಟ, ಷರ್ಟು–ಮುಂತಾದವುಗಳನ್ನು ಕಳಚಿದ ರಾಯರನ್ನು ಅವರ ನಿಜರೂಪದಿಂದಲೇ ಕಾಣುವಂತೆ–ಆ ಭಗವಂತನ ನೈಜಸ್ವರೂಪವನ್ನು ಇದ್ದದ್ದು ಇದ್ದಂತೆ ಇಲ್ಲಿಯೇ ಈಗಲೇ ನೇರಾಗಿ ಕಂಡುಕೊಳ್ಳುವ ಅನುಭವಯೋಗವೇ ಈ ಪುರುಷೋತ್ತಮಯೋಗವು. ಇದನ್ನು ಭಗವಂತನು ವಿವರಿಸಿ ತಿಳಿಯಿಸಿರುವದು ಹೇಗೆಂದರೆ :

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**
**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**
**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥** ೧೫–೧೬ ರಿಂದ ೧೯

ಭಗವಂತನಿಗೆ ಕ್ಷರ, ಅಕ್ಷರ–ಎಂದು ಎರಡು ಪ್ರಕಟರೂಪ. ಕ್ಷರವೆಂಬುದು ಸರ್ವಭೂತಗಳ ರೂಪದಿಂದ ಕಾಣುತ್ತಿರುವ ರೂಪ. ಬೇರೆಬೇರೆಯ ರೂಪದಿಂದ ಕಾಣುತ್ತಿರುವ ರೂಪವೂ ಆತನದೇ.

**ಈಶ್ವರೋ ಜೀವಕಲಯಾ ಪ್ರವಿಷ್ಟೋ ಭಗವಾನಿತಿ ।**

ಭಾಗ. ೩-೨೯-೩೪

**ಪ್ರಣಮೇದ್ದಂಡವದ್ಭೂಮಾ ಆ ಶ್ವಚಾಂಡಾಲಗೋಖರಮ್ ॥**

ಭಾಗ. ೧೧-೨೯-೧೬

ಈಶ್ವರನು ಜೀವನೆಂಬ ತನ್ನ ಅಂಶದಿಂದ ಇಲ್ಲಿ ಪ್ರವಿಷ್ಟನಾಗಿರುತ್ತಾನೆಂಬ ಭಾವನೆಯಿಂದ – ಸಂನ್ಯಾಸಿಯಾದವನು – ನಾಯಿ, ಚಂಡಾಲ, ಗೋವು, ಕತ್ತೆ-ಮುಂತಾದ ಕೀಳುಪ್ರಾಣಿಗಳವರೆಗೂ ಎಲ್ಲಾ ಭೂತಗಳಿಗೂ ನಮಸ್ಕಾರಮಾಡಬೇಕು–ಎಂದು ಭಾಗವತದಲ್ಲಿ ಉಪದೇಶಿಸಿರುವದು ಈ ವ್ಯಾಕೃತಜಗತ್ತೆಲ್ಲವೂ ಭಗವಂತನ ರೂಪವೇ ಎಂಬ ದೃಷ್ಟಿಯಿಂದಲೇ ಆಗಿರುತ್ತದೆ. ಇನ್ನು 'ಅಕ್ಷರ' ಎಂದರೆ ಈ ವ್ಯಾಕೃತದ ಮಾಯಾಬೀಜರೂಪವು; ಇದು ಕಾಲದಲ್ಲಿ ನಾಶವಾಗುವದಲ್ಲವಾದ್ದರಿಂದ **ಅಕ್ಷರ**ವೆನಿಸುತ್ತದೆ. ಈ ಎರಡು ರೂಪಗಳಿಗಿಂತಲೂ ವಿಲಕ್ಷಣವಾಗಿರುವ ಸದ್ರೂಪದಿಂದ ಮೂರು ಲೋಕಗಳನ್ನೂ ವ್ಯಾಪಿಸಿಕೊಂಡು ತನ್ನ ಚೈತನ್ಯ-ಬಲ-ಶಕ್ತಿಯಿಂದ ಜಗತ್ತನ್ನು ಧಾರಣೆಮಾಡುತ್ತಿರುವ ಈಶ್ವರನು **ಪುರುಷೋತ್ತಮನು** ; ಇವನೇ 'ಅನ್ಯಪುರುಷನು' ಎಂದು ಹಿಂದೆ (೧೫-೧೭ರಲ್ಲಿ) ಹೇಳಿರುವ ನಿರುಪಾಧಿಕನಾದ ಪರಮಾತ್ಮನು. ಈ ಪುರುಷೋತ್ತಮನನ್ನು ಯಥಾರ್ಥಸ್ವರೂಪದಿಂದ ಅರಿತುಕೊಂಡು ಆ ಭಗವಂತನನ್ನು ಸರ್ವಭಾವದಿಂದಲೂ ಆತನೇ ಸರ್ವಾತ್ಮನೆಂದು ಭಜಿಸುವವನೇ ಪರಮಭಕ್ತನು ಎಂದೂ ಇದೇ ಸರ್ವಶಾಸ್ತ್ರರಹಸ್ಯವೆಂದೂ ಭಗವಂತನು ಹೇಳಿರುತ್ತಾನೆ.

## ೩೭. ಅವಸ್ಥಾತ್ರಯ

( 7—9—69 )

ವೇದದ ವೇದತ್ವವು ಏತರಲ್ಲಿದೆ ?–ಎಂದರೆ ನಮ್ಮನ್ನು ಬಾಹ್ಯದೃಷ್ಟಿಯಿಂದ ಹಿಂತಿರುಗಿಸಿ ಒಳನೋಟವನ್ನು ಕೊಟ್ಟು ತತ್ತ್ವವನ್ನು ಅನುಭವಕ್ಕೆ ತಂದುಕೊಳ್ಳುವದಕ್ಕೆ ಸಹಾಯಮಾಡುವದರಲ್ಲಿ.

ಛಾಂದೋಗ್ಯೋಪನಿಷತ್ತಿನಲ್ಲಿ ಇಂದ್ರವಿರೋಚನರಿಗೆ ಪ್ರಜಾಪತಿಯು ಮಾಡಿದ ಉಪದೇಶದಲ್ಲಿ ಈ ರಹಸ್ಯವು ಎದ್ದುಕಾಣುವದು. ಪ್ರಜಾಪತಿಯ ವಾಕ್ಯರೂಪದಿಂದ–

ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ॥ ಛಾಂ. ೮-೭-೧

ಎಂದು ಪ್ರಾರಂಭವಾಗಿರುವ ಏಳನೆಯ ಖಂಡದಲ್ಲಿ ಹೀಗೆಂದಿದೆ : ಪಾಪರಹಿತನೂ ಮುಪ್ಪಿಲ್ಲದವನೂ ಸಾವಿಲ್ಲದವನೂ ಶೋಕರಹಿತನೂ ಹಸಿವಿಲ್ಲದವನೂ ನೀರಡಿಕೆಯಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವ ಆತ್ಮನಿರುತ್ತಾನಲ್ಲ, ಅವನನ್ನು ಹುಡುಕಬೇಕು, ಅವನನ್ನೇ ಅರಿತುಕೊಳ್ಳಬೇಕು. ಆ ಆತ್ಮನನ್ನು ಸರಿಯಾಗಿ ಅರಿತುಕೊಂಡು ಅನುಭವಕ್ಕೆ ತಂದುಕೊಳ್ಳುವಾತನಿಗೆ ಸರ್ವಲೋಕಗಳೂ ಸರ್ವಕಾಮಗಳೂ ದೊರಕುವವು—ಎಂದು ಪ್ರಜಾಪತಿಯು ಒಮ್ಮೆ ನುಡಿದನು. ಈ ಸುದ್ದಿಯನ್ನು ಕೇಳಿದ ದೇವತೆಗಳೂ ಅಸುರರೂ 'ನಾವು ಆತ್ಮನನ್ನು ಅರಿತುಕೊಂಡು ಸರ್ವಲೋಕಗಳನ್ನೂ ಪಡೆದುಕೊಳ್ಳೋಣ'—ಎಂದುಕೊಂಡರು. ದೇವತೆಗಳೊಳಗೆ ಇಂದ್ರನೂ, ಅಸುರರೊಳಗೆ ವಿರೋಚನನೂ ಸ್ಪರ್ಧೆಯಿಂದ ಒಬ್ಬರಿಗೊಬ್ಬರು ತಮ್ಮ ಭಾವವನ್ನು ತಿಳಿಸದೆಯೇ ಸಮಿತ್ಪಾಣಿಗಳಾಗಿ ಪ್ರಜಾಪತಿಯ ಬಳಿಗೆ ಬಂದು ಅವನಲ್ಲಿ ಶಿಷ್ಯವೃತ್ತಿಗೆ ನಿಂತರು. ಮೂವತ್ತೆರಡು ವರ್ಷಗಳು ಬ್ರಹ್ಮಚರ್ಯದಲ್ಲಿದ್ದ ಬಳಿಕ ಅವರನ್ನು ಬಂದ ಕಾರ್ಯವೇನೆಂದು ಪ್ರಜಾಪತಿಯು ಕೇಳಿದನು. ಅವರ ಅಭಿಪ್ರಾಯವನ್ನು ಅರಿತಮೇಲೆ ಅವನು ಅವರಿಗೆ ಅವಸ್ಥಾತ್ರಯಪರೀಕ್ಷಣಪ್ರಕ್ರಿಯೆಯ ಮೂಲಕ ಆತ್ಮವಿದ್ಯೆಯನ್ನು ಹೇಳುವದಕ್ಕೆ ಪ್ರಾರಂಭಿಸಿದನು.

ಪ್ರಜಾಪತಿಯು ಮೊಟ್ಟಮೊದಲು ಕಣ್ಣಿನಲ್ಲಿ ಕಾಣುವ ಪುರುಷನೇ ಆತ್ಮನೆಂದೂ ಅವನೇ ಅಮೃತವಾದ, ಅಭಯವಾದ ಬ್ರಹ್ಮವು—ಎಂದೂ ಹೇಳಿದನು. ಅದನ್ನು ಕೇಳಿ ಅವರು ಕಣ್ಣಿನಲ್ಲಿರುವ ಪ್ರತಿಬಿಂಬವೇ ಬ್ರಹ್ಮವಿರಬೇಕು ಎಂದು ಭಾವಿಸಿಕೊಂಡು ನೀರಿನಲ್ಲಿಯೂ ಕನ್ನಡಿಯಲ್ಲಿಯೂ ಕಾಣಿಸುತ್ತಿರುವನಲ್ಲ, ಅವರುಗಳಲ್ಲಿ ಯಾವನು ಆತ್ಮನು ?—ಎಂದು ಪ್ರಶ್ನಿಸಿದರು. ಆಗ ಅವನು 'ಈ ಎಲ್ಲಾ ಸ್ಥಾನಗಳಲ್ಲಿಯೂ ಇರುತ್ತಾನೆ' ಎಂದು ಉತ್ತರವಿತ್ತನು. ಮತ್ತೆ ಪ್ರಜಾಪತಿಯು 'ನೀರಿನಲ್ಲಿ ನಿಮ್ಮ ರೂಪವನ್ನು ನೋಡಿಕೊಳ್ಳಿ' ಎಂದನು. ಆಗ "ಇಲ್ಲಿಯೂ ನಮ್ಮ ರೂಪವೇ ಕಾಣಿಸುತ್ತಿದೆ" ಎಂದು ಅವರೆಂದರು. ಈ ಉತ್ತರದಲ್ಲಿ ಅಡಗಿರುವ ತತ್ತ್ವವೇನೆಂದರೆ : ಜಾಗ್ರದವಸ್ಥೆಯಲ್ಲಿ ನಾವು ನೋಡುತ್ತಿರುವ ವಸ್ತುಗಳೆಲ್ಲವೂ 'ಇದೆ, ಇದೆ' ಎಂದೇ ನಮಗೆ ಕಾಣಿಸುತ್ತಿರು

ವವು. ಆದರೆ ಅವು ನೀರಿನಲ್ಲಿ ಕಾಣುವ ಹಕ್ಕಿಗಳ ನೆರಳಿನಂತೆ ಬರಿಯ ತೋರಿಕೆಯೇ ಸರಿ. ಇವುಗಳೊಳಗೆಲ್ಲ ಸದ್ರೂಪದಿಂದ ಅನುಸರಿಸಿಕೊಂಡುಬಂದಿರುವ ತತ್ತ್ವವೇ ನಿಜವಾಗಿ ಆತ್ಮನು. ಈ ತತ್ತ್ವವನ್ನು ಸ್ಪಷ್ಟಪಡಿಸಿ ಅವರಿಬ್ಬರ ತಪ್ಪುಕಲ್ಪನೆಯನ್ನು ಕಳೆಯುವದಕ್ಕಾಗಿ ಪ್ರಜಾಪತಿಯು 'ಚೆನ್ನಾಗಿ ಮೈಗೂದಲು, ಉಗುರು—ಮುಂತಾದವುಗಳನ್ನು ಕತ್ತರಿಸಿಕೊಂಡು ಪರಿಷ್ಕೃತರಾಗಿ ಶುಭ್ರವಾದ ಬಟ್ಟೆಯನ್ನು ಧರಿಸಿಕೊಂಡು ಅಲಂಕಾರಯುಕ್ತರಾಗಿ ಮತ್ತೊಮ್ಮೆ ನೀರಿನ ಶರಾವೆಯಲ್ಲಿ ನಿಮ್ಮ ರೂಪವನ್ನು ನೋಡಿಕೊಂಡು ಏನು ಕಾಣಿಸುತ್ತದೆಯೋ ಹೇಳಿರಿ' ಎಂದನು. ಆಗಲೂ ಅವರಿಗೆ ಆತ್ಮನ ನಿಜವು ಗೊತ್ತಾಗಲಿಲ್ಲ. ನೀರಿನಲ್ಲಿ ಕಾಣುವ ಪ್ರತಿಬಿಂಬವು ಶರೀರದಂತೆಯೇ ಹೆಚ್ಚುಕಡಿಮೆಯದಾಗುತ್ತಿರುತ್ತದೆ ; ನಮ್ಮ ಸ್ವರೂಪವಾಗಿರುವ ಆತ್ಮನು ಮಾತ್ರ ತನ್ನ ಸ್ವರೂಪದಲ್ಲಿ ಯಾವ ಹೆಚ್ಚುಕಡಿಮೆಯೂ ಇಲ್ಲದೆ ಇರುತ್ತಾನೆ. ಇವರ ಗುಟ್ಟನ್ನರಿಯದೆ ದೇಹವೇ ಆತ್ಮನೆಂದು ವಿರೋಚನನೂ ಶರೀರದ ಛಾಯೆಯೇ ಆತ್ಮನೆಂದು ಇಂದ್ರನೂ ಭಾವಿಸಿಕೊಂಡರು. ವಿರೋಚನನು ತಾನು ಅರಿತುಕೊಂಡದ್ದರಿಂದ ತೃಪ್ತನಾಗಿ ತನ್ನ ರಾಜಧಾನಿಗೆ ಹೋಗಿ 'ದೇಹವೇ ಆತ್ಮನು ; ಇದನ್ನು ಸರಿಯಾಗಿ ನೋಡಿಕೊಂಡರೆ ಸರ್ವಲೋಕಗಳೂ ಸರ್ವಕಾಮಗಳೂ ದೊರೆತಂತೆ' ಎಂದು ತನ್ನ ವಾದವನ್ನು ಅಸುರರಿಗೆಲ್ಲ ಸಾರಿ ಹೇಳಿದನು. ಇದೇ ಆಸುರಸಂಪತ್ತಿನವರ ಭಾವನೆ. ದೇಹದಲ್ಲಿ ಅಹಂಕಾರವನ್ನಿಟ್ಟುಕೊಂಡು ಬಲ, ದರ್ಪ, ಕಾಮ, ಕ್ರೋಧ—ಮುಂತಾದವುಗಳನ್ನವಲಂಬಿಸಿ, ದೇಹಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುವದರಲ್ಲಿಯೇ ಜೀವನವನ್ನು ಕಳೆಯುತ್ತಾ ಕಾಮಕ್ರೋಧಲೋಭಪರಾಯಣರಾಗಿರುವದೇ ಪುರುಷಾರ್ಥ ; ನಿಜವಾಗಿ ಈಶ್ವರನಾಗಲಿ, ಧರ್ಮಾಧರ್ಮವಿವೇಕವಾಗಲಿ ಇಲ್ಲ, ಆಚಾರಾದಿಗಳಿಂದ ಏನೂ ಪ್ರಯೋಜನವಿಲ್ಲ ಎಂಬುದೇ ಆಸುರರ ವಾದ.

ಇತ್ತ ಇಂದ್ರನು ತಾನು ಕಂಡಿದ್ದ ಛಾಯಾತ್ಮನಲ್ಲಿರುವ ಅನಿತ್ಯತ್ವವನ್ನು ಕಂಡುಕೊಂಡು ನಡುದಾರಿಯಲ್ಲಿಯೇ 'ಇದು ಪ್ರಜಾಪತಿಯ ಅಭಿಪ್ರಾಯವಾಗಿರಲಾರದು' ಎಂದುಕೊಂಡು ಮತ್ತೆ ಆಚಾರ್ಯನ ಬಳಿಗೆ ಬಂದು ತನ್ನ ಸಂಶಯವನ್ನು ಹೇಳಿಕೊಂಡನು. ಪ್ರಜಾಪತಿಯು ಅವನಿಗೆ ಮತ್ತೊಮ್ಮೆ ಕನಸಿನಲ್ಲಿ ಕಾಣುವ ಆತ್ಮನನ್ನು ಬೋಧಿಸಿದನು ; ಅದರೆ ಆತ್ಮನ ತತ್ತ್ವವನ್ನು ಬಿಟ್ಟು ಅಲ್ಲಿಯೂ ಭಯಾದಿದೋಷಗಳಿರುವವೆಂಬುದನ್ನರಿತ ಇಂದ್ರನು ಮತ್ತೊಮ್ಮೆ ಪ್ರಜಾಪತಿಯ ಬಳಿಗೆ ಬಂದು ತನ್ನ ಆಶಯವನ್ನು ವಿವರಿಸಿ ನಿಜವಾದ ಆತ್ಮತತ್ತ್ವವನ್ನು ಹೇಳಬೇಕೆಂದು ಕೇಳಿಕೊಂಡನು. ಹಿಂದೆ ಎರಡುಸಲ ಬ್ರಹ್ಮಚರ್ಯವನ್ನು ಮಾಡಿದ್ದಂತೆ ಮತ್ತೂ ದೀರ್ಘಕಾಲ ಬ್ರಹ್ಮಚರ್ಯವಾಸವನ್ನು ಮಾಡಿ

ಕೊಂಡಿದ್ದ ಬಳಿಕ, ಪ್ರಜಾಪತಿಯು ಸ್ಥೂಲಶರೀರದ ಹಂಗಾಗಲಿ ಸೂಕ್ಷ್ಮಶರೀರದ ಹಂಗಾಗಲಿ ಇಲ್ಲದ ಸುಷುಪ್ತಿಯಲ್ಲಿರುವ ಆತ್ಮತತ್ತ್ವವನ್ನು ಬೋಧಿಸಿದನು. ಪ್ರತಿಪರ್ಯಾಯದಲ್ಲಿಯೂ ಆತ್ಮನು ಅವನೇ ಆಗಿದ್ದರೂ ಆಯಾ ಅವಸ್ಥೆಯಲ್ಲಿ ಕಾಣುವ ದೋಷವನ್ನು ಆತ್ಮನಿಗೇ ಅಂಟಿಸಿಕೊಂಡು ಇಂದ್ರನು ತತ್ತ್ವವನ್ನು ಅರಿತುಕೊಳ್ಳಲಾರದೆ ಒದ್ದಾಡುತ್ತಿದ್ದನು. ತನಿನಿದ್ರೆಯಲ್ಲಿಕೂಡ ಯಾವ ದೋಷವೂ ಇಲ್ಲದ ಆತ್ಮನ ರೂಪವನ್ನು ಕಂಡರೂ ಅರಿಯಲಾರದೆ ಅವನು "ಈ ಅವಸ್ಥೆಯು ಆತ್ಮನಲ್ಲಿ ಯಾವ ಸುಖವನ್ನೂ ಕಾಣೆನು : ಅಲ್ಲಿ 'ನಾನು' ಎಂದಾಗಲಿ, 'ಇವನು' ಎಂದಾಗಲಿ ಯಾವ ಅರಿವೂ ಇರುವದೇ ಇಲ್ಲವಲ್ಲ!" ಎಂದು ಶಂಕಿಸಿದನು. ಪ್ರಜಾಪತಿಯು 'ನಿನ್ನ ದೃಷ್ಟಿಯಿಂದ ನೋಡಿದರೆ ಇದು ಹೀಗೆಯೇ ಸರಿ; ಆದರೂ ನನ್ನ ಅಭಿಪ್ರಾಯವನ್ನು ತಿಳಿಯಿಸಿಕೊಡುವದಕ್ಕಾಗಿ ಮತ್ತೊಮ್ಮೆ ಈ ಆತ್ಮರೂಪವನ್ನೇ ನಿನಗೆ ತಿಳಿಯಹೇಳುವೆನು. ಇನ್ನೂ ಕೆಲವು ಕಾಲ ಬ್ರಹ್ಮಚರ್ಯದಲ್ಲಿರು' ಎಂದನು. ಕೊನೆಗೆ ಇದೇ ಪರಮಾರ್ಥಾತ್ಮನ ತತ್ತ್ವವನ್ನು ಮತ್ತೊಮ್ಮೆ ಇಂದ್ರನಿಗೆ ಬೋಧಿಸಿದನು. ಇಂದ್ರನು ಈವರೆಗೆ ಒಟ್ಟು ನೂರೊಂದು ವರ್ಷಗಳಕಾಲ ಬ್ರಹ್ಮಚರ್ಯವನ್ನು ಮಾಡಿದಂತಾಗಿತ್ತು. 'ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ' (ಗೀ. ೪-೩೪) ಎಂಬ ಗೀತೋಕ್ತಿಯಂತೆ ಆಚಾರ್ಯಸೇವೆಯಿಂದ ಪರಿಪೂರಿತನಾಗಿದ್ದದ್ದರಿಂದ ಈ ಸಲ ಅವನಿಗೆ ತತ್ತ್ವವು ಹೊಳೆಯಿತು. ಪ್ರಜಾಪತಿಯು ದೇವೇಂದ್ರನಿಗೆ ಉಪದೇಶಿಸಿದ್ದನ್ನು ಈ ಕೆಳಗಿನ ಉಪನಿಷದ್ವಾಕ್ಯಗಳಲ್ಲಿ ಕಾಣಬಹುದು :

ಮಘವನ್ ಮರ್ತ್ಯಂ ವಾ ಇದಂ ಶರೀರಂ ಆತ್ತಂ ಮೃತ್ಯುನಾ ತದಸ್ಯಾಮೃತಸ್ಯಾಶರೀರಸ್ಯ ಆತ್ಮನೋಽಧಿಷ್ಠಾನಮಾತ್ತೋ ವೈ ಸಶರೀರಃ ಪ್ರಿಯಾಪ್ರಿಯಾಭ್ಯಾಂ ನ ವೈ ಸಶರೀರಸ್ಯ ಪ್ರಿಯಾಪ್ರಿಯಯೋರಪಹತಿರಸ್ತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ॥ ಛಾ. ೮-೧೨-೧.

ಅಶರೀರೋ ವಾಯುರಭ್ರಂ ವಿದ್ಯುತ್-ಸ್ತನಯಿತ್ನುರಶರೀರಾಣ್ಯೇತಾನಿ ತದ್ಯಥೈತಾನ್ಯಮುಷ್ಮಾದಾಕಾಶಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ ॥

ಛಾಂ ೮-೧೨-೨.

ಏವಮೇವೈಷ ಸಂಪ್ರಸಾದೋಽಸ್ಮಾತ್ ಶರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ॥ ಛಾಂ. ೮-೧೨-೩

ಈ ವಾಕ್ಯಗಳ ಅರ್ಥದ ಸಾರವೇನೆಂದರೆ[1] ಶರೀರಾಭಿಮಾನವಿರುವವರಿಗೂ ಮನುಷ್ಯನಿಗೆ ಪ್ರಿಯಾಪ್ರಿಯಗಳ ಸೋಂಕು ತಪ್ಪಿದ್ದಲ್ಲ. ಅವರೆ ಆತ್ಮನು ತನ್ನ ಸ್ವರೂಪದಿಂದ ಅಶರೀರನೇ ಆಗಿರುತ್ತಾನೆ. ಈ ಶರೀರದಲ್ಲಿದ್ದರೂ ಅವನಿಗೆ ಸ್ಥೂಲಸೂಕ್ಷ್ಮಶರೀರಗಳ ಧರ್ಮಗಳು ನಿಜವಾಗಿ ಅಂಟುವದೇ ಇಲ್ಲ. ಇವನೇ ಅಮೃತವಾದ ಬ್ರಹ್ಮಾತ್ಮನು. ಶರೀರಾಭಿಮಾನವನ್ನು ಬಿಟ್ಟಿದ್ದಾತನು ಈ ಆತ್ಮಜ್ಯೋತಿಯಲ್ಲಿ ಒಂದಾಗಿ ತನ್ನ ಸ್ವರೂಪವನ್ನು ಪಡೆದುಕೊಳ್ಳುವನು.

ಅವಸ್ಥಾತ್ರಯಪರೀಕ್ಷಾಪ್ರಕ್ರಿಯೆಗೆ ಒಂದು ದಿವ್ಯದೃಷ್ಟಿ ಬೇಕಾಗಿದೆ. ಆಯಾ ಅವಸ್ಥೆಯನ್ನೇ ಪ್ರಧಾನವಾಗಿ ಹಿಡಿದುನೋಡುವದೇ ಈ ದೃಷ್ಟಿ. ಜಾಗ್ರದವಸ್ಥೆಯು ವ್ಯವಹಾರಾವಸ್ಥೆ ; ಜಾಗ್ರದವಸ್ಥೆಯು ಶರೀರವನ್ನು ಪ್ರಧಾನವಾಗಿ ಇಟ್ಟುಕೊಂಡು ಬಳಸುವ ಪ್ರತ್ಯಯ, ಶಬ್ದ, ಮತ್ತು ಪ್ರವೃತ್ತಿಯು— ಇವು ವ್ಯವಹಾರವೆನಿಸುವವು. ಈ ವ್ಯವಹಾರದ ದೃಷ್ಟಿಯಿಂದಲೇ ಸ್ವಪ್ನವನ್ನೂ ಸುಷುಪ್ತಿಯನ್ನೂ ನೋಡುವದರಿಂದ ಅವಸ್ಥೆಗಳಲ್ಲಿರುವ ಆತ್ಮನು ಯಾವಾಗಲೂ ಅಶರೀರನಾಗಿ, ಅಮೃತನಾಗಿ, ಬ್ರಹ್ಮಸ್ವರೂಪನೇ ಆಗಿರುತ್ತಾನೆಂಬ ನಿಜವು ನಮಗೆ ಹೊಳೆಯದೆ ಇರುತ್ತದೆ. ಜಾಗ್ರತ್ತೆಂದರೆ ಎಚ್ಚರವು ; ಕನಸೂ ಆಗ್ಗೆ ಎಚ್ಚರವೆಂದೇ ತೋರುತ್ತಿದ್ದರೂ ಅದು ಎಚ್ಚರಕ್ಕೆ–ಪಟಕ್ಕೆ ಜಾಲಂಗವು ಸೇರಿರುವಂತೆ–ಸೇರಿಕೊಂಡಿರುವದೆಂದು ತಿಳಿಯುವದು ಎಚ್ಚರಕ್ಕೆ ಕೊಟ್ಟಿರುವ ಪ್ರಾಧಾನ್ಯದಿಂದಲೇ ಆಗಿದೆ. ಹೀಗೆಯೇ ಸುಷುಪ್ತಿಯನ್ನು ನಾವು ಎಚ್ಚರಕ್ಕೆ ಸೇರಿಕೊಂಡಿರುವ ಒಂದು ಅಂಗವೆಂದು ಭಾವಿಸುತ್ತಿರುತ್ತೇವೆ. "ಆಗ ಕನಸು ಕಂಡೆನು, ಅಥವಾ ನಿದ್ರಿಸಿದೆನು", "ಈಗ ಎಚ್ಚತ್ತಿದ್ದೇನೆ" ಎಂಬ ಭಾವನೆಯೂ ಈ ಜಾಗ್ರದ್ವ್ಯವಹಾರದ ದೃಷ್ಟಿಯಿಂದಲೇ ಆಗಿರುತ್ತದೆ. ಸರಿಯಾಗಿ ನೋಡಿದರೆ ಎಚ್ಚರಕ್ಕೂ ಕನಸಿಗೂ, ಅಥವಾ ಎಚ್ಚರಕ್ಕೂ ತನಿನಿದ್ರೆಗೂ ಆಧಾರವಾಗಿರುವ ಒಂದು ಸಮಾನಕಾಲವು ಇರುವದೇ ಇಲ್ಲ ; ಹೀಗಿರುವಲ್ಲಿ 'ಆಗ ನಿದ್ರಿಸಿದೆನು' ಎಂದು ಎಚ್ಚರದ ಭೂತಕಾಲದಲ್ಲಿ ನಿದ್ರೆಯನ್ನಿಡುವದಕ್ಕೆ ನಮಗೆ ಯಾವ ಪ್ರಮಾಣದ ಆಧಾರವಿದೆ ?

ಈ ಜಾಗ್ರದ್ದೃಷ್ಟಿಯು ವ್ಯವಹಾರಜೀವನಕ್ಕೆ ಎಷ್ಟೇ ಉಪಯೋಗವಾಗಿದ್ದರೂ ನಿಜವಾದ ದೃಷ್ಟಿಯನ್ನು ಅವಲಂಬಿಸಿನೋಡಿದರೆ ಎಚ್ಚರದಲ್ಲಿ ಕಾಣಿಸುತ್ತಿರುವದೆಲ್ಲವೂ ಆತ್ಮನನ್ನು ಬಿಟ್ಟರೆ ಉಳಿದದ್ದೆಲ್ಲವೂ ಆತ್ಮಚೈತನ್ಯ

1. ಪ್ರಜಾಪತಿಯ ಉಪದೇಶದ ಸಾರವನ್ನು ವಿವರಿಸುವದಕ್ಕಾಗಿ ಶ್ರೀಶ್ರೀಗಳವರು ಸಂಸ್ಕೃತದಲ್ಲಿ 'ಬ್ರಹ್ಮವಿದ್ಯಾರಹಸ್ಯವಿವೃತಿಃ' ಎಂಬ ಹೆಸರಿನಿಂದ ಒಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಇದು ನಮ್ಮಲ್ಲಿ ಸಿಕ್ಕುತ್ತದೆ.

ವಿಷಯವಾಗಿರುತ್ತದೆ. ಅಮೃತನಾಗಿರುವ ಆತ್ಮನಿಗೆ ಈ ಮರ್ತ್ಯನಾದ ಶರೀರವು ಅಧಿಷ್ಠಾನವು, ಆಶ್ರಯವು; ಆತ್ಮನಲ್ಲಿ ಜಾಗ್ರತ್ತಾಗಲಿ, ಅದರಲ್ಲಿ ಆತ್ಮನಿಗೆ ಸಂಬಂಧಿಸಿರುವಂತೆ ತೋರುವ ಶರೀರದ ಸಂಬಂಧವಾಗಲಿ ಇರುವದೇ ಇಲ್ಲ. ಆವನು ನಿಜವಾಗಿ ಅಶರೀರನಾಗಿರುತ್ತಾನೆ.

ಪ್ರಜಾಪತಿಯು ಈ ತತ್ತ್ವವನ್ನು ಒಂದು ದೃಷ್ಟಾಂತದಿಂದ ಇಂದ್ರನಿಗೆ ಉಪದೇಶಿಸಿರುತ್ತಾನೆ. ವಾಯು, ಮೋಡ, ಮಿಂಚು- ಮುಂತಾದವುಗಳಿಗೆ ಯಾವ ಆಕಾರವೂ ಇಲ್ಲದೆ ಇದ್ದದ್ದು ಮಳೆಗಾಲ ಬಂದಾಗ ಆಕಾಶರೂಪವನ್ನು ಬಿಟ್ಟಿದ್ದು ಸಾಕಾರವೇಷವನ್ನು ತಾಳಿ ಮತ್ತೆ ತಮ್ಮ ಕಾರ್ಯವನ್ನು ನೆರವೇರಿ ಸಿದಬಳಿಕ ಆಕಾಶರೂಪವನ್ನೇ ತಾಳುವಂತೆಯೇ ಈ ಆತ್ಮನೂ ಶರೀರಾಭಿಮಾನ ದೃಷ್ಟಿಯಿಂದ ಶರೀರಾಂಗದ ವೈಕಲ್ಯ, ದುಃಖಾನುಭವ, ಅಜ್ಞಾನದಿಂದ ಸ್ವರೂಪ ನಾಶ, ಹೀಗೆ ದೋಷಗ್ರಸ್ತನಾದರೂ ತತ್ತ್ವಜ್ಞಾನವಾದಕೂಡಲೆ, ಸ್ವಯಂ ಜ್ಯೋತಿಸ್ಸ್ವರೂಪನಾದ ತನ್ನ ಪರಮಾತ್ಮಸ್ವರೂಪದಿಂದ ಕೂಡಿದವನಾಗುತ್ತಾನೆ. ಜಾಗ್ರತ್ಸ್ವಪ್ನರೂಪಗಳಲ್ಲಿ ಸಶರೀರನಾಗಿಯೂ ಸುಷುಪ್ತಿಯಲ್ಲಿ ಶರೀರರಹಿತನಾಗಿ ಯೂ ಮತ್ತೆಮತ್ತೆ ಆಗುವಂತೆ ತೋರಿದರೂ ಅವನು ಯಾವಾಗಲೂ ಅಶರೀರ ನಾಗಿಯೇ ಇರುತ್ತಾನೆ. ವಾಯ್ವಾದಿಗಳು ಸಾಕಾರವಾಗಿ ತೋರುವಾಗಲೂ ಮತ್ತೆ ಆಕಾಶವನ್ನು ಸೇರಿಕೊಂಡಾಗಲೂ ನಿಜವಾಗಿ ಆಕಾಶರೂಪದಿಂದಲೇ ಇರುವಂತೆಯೇ ಇದು.

ಜಾಗ್ರತ್ಸ್ವಪ್ನಗಳಲ್ಲಿ ಬಗೆಬಗೆಯ ಜೀವರೊಡನೆ ವ್ಯವಹರಿಸುತ್ತಿರುವಂತೆ ತೋರುವ ವ್ಯಾಕೃತರೂಪ, ಸುಷುಪ್ತಿಯಲ್ಲಿ ಮತ್ತೆ ಯಾವದೊಂದರ ಸಂಪರ್ಕವೂ ಇಲ್ಲದ ಅವ್ಯಾಕೃತರೂಪ- ಈ ಎರಡು ರೂಪಗಳಿಗೆ ಹೋಲಿಸಿದರೆ ಈ ಅಶರೀರ ರೂಪವನ್ನು ಉತ್ತಮಪುರುಷನೆನ್ನಬಹುದು. ಈ ರೂಪವನ್ನೇ ಪುರುಷೋತ್ತ ಮನೆಂದು ಗೀತೆಯಲ್ಲಿ ಹೇಳಿರುವದು. ಆದ್ದರಿಂದಲೇ ಛಾಂದೋಗ್ಯಭಾಷ್ಯದಲ್ಲಿ

**ಅಕ್ಷಿಸ್ವಪ್ನಪುರುಷೌ ವ್ಯಕ್ತೌ, ಅವ್ಯಕ್ತಶ್ಚ ಸುಷುಪ್ತಃ ಸಮಸ್ತಃ ಸಂಪ್ರಸನ್ನೋಽಶರೀರಶ್ಚ ಸ್ವೇನ ರೂಪೇಣ ಇತ್ಯೇಷಾವೇವ ಸ್ವೇ ನ ರೂಪೇಣಾವಸ್ಥಿತೌ ಕ್ಷರಾಕ್ಷರೌ ವ್ಯಾಕೃತಾವ್ಯಾಕೃತೌ ಅಪೇಕ್ಷ್ಯ ಉತ್ತಮಪುರುಷಃ । ಕೃತನಿರ್ವಚನೋ ಹ್ಯಯಂ ಗೀತಾಸು ||**

(ಕಣ್ಣಿನಲ್ಲಿ ತೋರುವ ಪುರುಷ ಮತ್ತು ಸ್ವಪ್ನದ ಪುರುಷ-ಇವರಿಬ್ಬರೂ ವ್ಯಕ್ತರು; ಸುಷುಪ್ತಿಯಲ್ಲಿ ಕರಣಗಳೆಲ್ಲವೂ ಅಸ್ತವಾಗಲು ಉಳಿಯುವ ಪುರುಷನು ಅವ್ಯ ಕ್ತನು. ಇವರಿಬ್ಬರಿಗೆ ಹೋಲಿಸಿದಾಗ ತನ್ನ ಸ್ವರೂಪದಿಂದ ಕಾಣುವವನು

ಉತ್ತಮಪುರುಷನು ; ಕ್ಷರಪುರುಷನು ವ್ಯಾಕೃತ; ಅಕ್ಷರಪುರುಷನು ಅವ್ಯಾಕೃತ; ಇವರಿಬ್ಬರಿಗೆ ಹೋಲಿಸಿದರೆ ಇವನು ಉತ್ತಮಪುರುಷನು- ಎಂದು ಗೀತೆಯಲ್ಲಿ ನಿರ್ವಚನಮಾಡಿ ಹೇಳಿರುತ್ತದೆಯಷ್ಟೆ ") ಎಂದು ಬರೆದಿರುತ್ತಾರೆ.

ಈ ಪ್ರಕಾರದಿಂದ ನಾವು ಜಾಗ್ರತ್ಸ್ವಪ್ನಸುಷುಪ್ತಿಗಳನ್ನು ಪರೀಕ್ಷಿಸಿದಾಗ ಆಯಾ ಅವಸ್ಥೆಯ ಪ್ರಪಂಚವೆಲ್ಲವೂ ಆಯಾ ಅವಸ್ಥೆಗೇ ಸೇರಿರುವದರಿಂದ ಸೃಷ್ಟಿ ಸ್ಥಿತಿಲಯಗಳಲ್ಲಿ ಆತ್ಮನು ವ್ಯಾಕೃತಾವ್ಯಾಕೃತರೂಪಭೇದಗಳನ್ನು ತಳೆದಂತೆ ತೋರುತ್ತಿದ್ದರೂ ನಿಜವಾಗಿ ಯಾವಾಗಲೂ ಆ ರೂಪಭೇದಗಳಿಲ್ಲದ ಶುದ್ಧಪುರುಷನೇ ಆಗಿರುತ್ತಾನೆ- ಎಂಬ ತತ್ತ್ವವು ಅನುಭವದಲ್ಲಿ ತೋರಿಕೊಳ್ಳುವದು. ಇದೇ ನಾವು ಹಿಂದೆ ವಿಚಾರಮಾಡಿ ನಿಶ್ಚಯಿಸಿದ ಪುರುಷೋತ್ತಮಯೋಗವು

ಪುರುಷೋತ್ತಮನು ಕ್ಷರ, ಅಕ್ಷರ- ಇವುಗಳಿಗಿಂತ ಬೇರೆ ಎಂದಷ್ಟರಿಂದ ಅವು ಈ ಆತ್ಮನಿಗಿಂತ ಬೇರೆಯಾಗಿವೆ ಎಂದು ಭಾವಿಸಬಾರದು. ನಮ್ಮ ಆತ್ಮನು ಸಶರೀರನಾಗಿ ಸಂಸಾರಿಯಾಗಿರುವಂತೆ ಕಂಡರೂ ಅವನಿಗೆ ಪರಿಶುದ್ಧವಾದ ಆತ್ಮಸ್ವರೂಪವೇ ಯಾವಾಗಲೂ ಸೇರಿರುತ್ತದೆಯಲ್ಲವೆ? ಆತ್ಮನಿಗೆ ಅವಿದ್ಯೆಯಿಂದ ರೂಪಾಂತರವು ಬಂದಂತೆಯೂ ವಿದ್ಯೆಯಿಂದ ಆ ರೂಪವು ಹುಸಿಯೆಂದಾಗಿ ನಮ್ಮ ಪರಮಾರ್ಥಸ್ವರೂಪವೇ ತೋರಿದರೂ ನಾವೂ ಯಾವಾಗಲೂ ನಮ್ಮ ಪರಿಶುದ್ಧ ರೂಪದಿಂದಲೇ ಇರುತ್ತೇವೆ. ಅದರಲ್ಲಿ ಈ ಅವಸ್ಥಾತ್ರಯರೂಪವು ಕಲ್ಪಿತವಾಗಿರುತ್ತದೆ. ಅದು ಆತ್ಮನಿಗಿಂತ ಬೇರೆಯಾಗಿಲ್ಲವೇ ಇಲ್ಲ, ಹೀಗೆಂದು ವಾರ್ತಿಕಕಾರರು ಹೇಳಿರುತ್ತಾರೆ :

ತತ್ತ್ವಮಸ್ಯಾದಿವಾಕ್ಯೋತ್ಥಸಮ್ಯಗ್ಧೀಜನ್ಮಮಾತ್ರತಃ |
ಅವಿದ್ಯಾ ಸಹಕಾರ್ಯೇಣ ನಾಸೀದಸ್ತಿ ಭವಿಷ್ಯತಿ || ಸಂ. ವಾ. ೧೮೩

("ತತ್ತ್ವಮಸಿ" ಮುಂತಾದ ವಾಕ್ಯದಿಂದುಂಟಾದ ಸಮ್ಯಗ್ಜ್ಞಾನವು ಹುಟ್ಟಿದ ಮಾತ್ರದಿಂದ ಅವಿದ್ಯೆಯೂ ಅದರ ಕಾರ್ಯವೂ ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆಯೂ ಇರುವದಿಲ್ಲ).

# ೩೮. ಕ್ಷೇತ್ರಕ್ಷೇತ್ರಜ್ಞಯೋಗ

( 8—9—69 )

ವೇದಾಂತವಿಚಾರವನ್ನು ಮಾಡುವಾಗ ಸಂದರ್ಭಕ್ಕೆ ತಕ್ಕಂತೆ ವ್ಯವಹಾರಪ್ರಧಾನದೃಷ್ಟಿ, ಯುಕ್ತಿಪ್ರಧಾನದೃಷ್ಟಿ, ಅನುಭವಪ್ರಧಾನದೃಷ್ಟಿ- ಎಂದು ಮೂರು ಬಗೆಯ ದೃಷ್ಟಿಗಳನ್ನು ಅವಲಂಬಿಸಬೇಕಾಗುವದು.

**ವ್ಯವಹಾರಪ್ರಧಾನದೃಷ್ಟಿ** ಎಂದರೆ ಎಚ್ಚರದಲ್ಲಿ ಇಂದ್ರಿಯಗಳಿಂದ ವಿಷಯಗಳನ್ನು ಕಂಡು ಪರಿಶೀಲಿಸುವ ದೃಷ್ಟಿ. ಭೌತಿಕಶಾಸ್ತ್ರದಂತೆ ವಿಚಾರವನ್ನು ಮಾಡುವಾಗ, ಈ ದೃಷ್ಟಿಗೇ ಪ್ರಾಧಾನ್ಯ ; ಇಂದ್ರಿಯಗಳಿಂದಲಾಗಲಿ ಇಂದ್ರಿಯಗಳಿಗೆ ನೆರವಾಗುವ ಯಂತ್ರವಿಶೇಷಗಳಿಂದಾಗಲಿ, ಬಾಹ್ಯವಿಷಯಗಳನ್ನು ಪರಿಶೀಲಿಸುವದೇ ಆ ದೃಷ್ಟಿಯ ಗುರಿ. ಆದರೆ ಇದೇ ಕೊನೆ, ಇದರ ವಿಚಾರಕ್ಕೆ ಮತ್ತೆ ಯಾವ ದೃಷ್ಟಿಯೂ ಇಲ್ಲ–ಎಂದರೆ ತಪ್ಪಾಗುವದು. ವಿಷಯದ ತತ್ತ್ವವನ್ನು ನಿರ್ಧರಿಸುವಾಗ ಕೊನೆಯವರೆಗೂ ಎಲ್ಲೆಲ್ಲಿಯೂ ಇಂದ್ರಿಯಗಳನ್ನೇ ಆಶ್ರಯಿಸುವದಕ್ಕೆ ಆಗುವದಿಲ್ಲ. ಬೆಳಕಿರುವಾಗ ನಾವು ಕಣ್ಣಿನಿಂದಲೇ ವಸ್ತುಗಳನ್ನು ನೋಡಬಹುದಾದರೂ ಕತ್ತಲೆಯಲ್ಲಿ ಚಂದ್ರನ ಅಥವಾ ದೀಪದ ಸಹಾಯವು ಬೇಕಾಗುವದು ; ಇದರಂತೆಯೇ ಪರೋಕ್ಷವಾಗಿ, ದೇಶಕಾಲವಸ್ತುಗಳಿಂದ ವ್ಯವಹಿತವಾಗಿರುವ ವಸ್ತುಗಳ ಪರಿಶೀಲನೆಗೆ ಕೇವಲ ಮನಸ್ಸಿನ ತರ್ಕದೃಷ್ಟಿಯೇ ಬೇಕಾಗುವದು. ಸ್ವಪ್ನವನ್ನು ಅನುಭವಿಸುತ್ತಿರುವಾಗ ಎಚ್ಚರದಲ್ಲಿ ಕಾಣುವ ಪ್ರಪಂಚವಾಗಲಿ, ಪದಾರ್ಥಗಳಾಗಲಿ–ಕಾಣಿಸುವದಿಲ್ಲ ; ಆದರೂ ಅಲ್ಲಿ ನಾವು ಮನಸ್ಸಿನ ಸಹಾಯದಿಂದಲೇ ಕಲ್ಪಿತವಾದ ಪ್ರಪಂಚವೊಂದನ್ನು ಕಾಣುತ್ತಿರುತ್ತೇವೆ ; ಎಚ್ಚತ್ತಬಳಿಕ "ಅದೆಲ್ಲ ಬರಿಯ ಹುಸಿತೋರಿಕೆ" ಎಂದು ತರ್ಕದಿಂದ ನಿರ್ಣಯಿಸುತ್ತೇವೆ. ಇಲ್ಲಿ ಯುಕ್ತಿಪ್ರಧಾನವಾದ ದೃಷ್ಟಿಯು ಬೇಕಾಗುತ್ತದೆ. ಇಂದ್ರಿಯಾದಿಪ್ರಮಾಣಗಳು ಇಲ್ಲದ ವಸ್ತುಗಳನ್ನೇನೂ ಸೃಷ್ಟಿಮಾಡುವದಿಲ್ಲ ; ಅವು ಇರುವ ವಸ್ತುಗಳನ್ನು–ಕತ್ತಲೆಯನ್ನು ತೊಲಗಿಸಿ ದೀಪವು ವಸ್ತುಗಳನ್ನು ತೋರಿಸುವಂತೆ–ವ್ಯಕ್ತಗೊಳಿಸುವದೇ ಹೊರತು ಹೊಸದಾಗಿ ಅವನ್ನೇನೂ ಹುಟ್ಟಿಸುವದಿಲ್ಲ. **'ವ್ಯಞ್ಜಕಾನಿ ಪ್ರಮಾಣಾನಿ, ನ ಕಾರಕಾಣಿ'** ಎಂಬ ಸೂತ್ರವನ್ನು ಇಲ್ಲಿ ನೆನಪಿನಲ್ಲಿಡಬೇಕು. ಇದರಂತೆಯೇ ಸುಷುಪ್ತಿಯಲ್ಲಿ ನಮಗೆ ಒಳಗು, ಹೊರಗು- ಎಂಬ ವಿವೇಕವಿಲ್ಲದೆ ಇರುತ್ತದೆ; ಅಲ್ಲಿ ನಮ್ಮ ಸ್ವರೂಪಕ್ಕಿಂತ ಬೇರೆಯಾಗಿ ಏನೊಂದೂ ಇರುವದೇಇಲ್ಲ. ಇದನ್ನು ನಾವು ಇಂದ್ರಿಯಗಳಿಂದಲಾಗಲಿ, ಮನಸ್ಸಿನಿಂದಲಾಗಲಿ ಅರಿತುಕೊಳ್ಳುವದಿಲ್ಲ ; ಕೇವಲ

ಅನುಭವದಿಂದಲೇ ಗೊತ್ತುಪಡಿಸಿಕೊಳ್ಳುತ್ತೇವೆ. ಶಾಸ್ತ್ರದಲ್ಲಿ ಹೇಳಿರುವಂತೆ ವಿಚಾರಮಾಡಿದಾಗ ಬಾಹ್ಯಜಗತ್ತಾಗಲಿ, ಮನೋವಾಸನಾರೂಪವಾದ ಜಗತ್ತಾಗಲಿ ತನಿನಿಷ್ಠೆಯಲ್ಲಿರುವದೇ ಇಲ್ಲ; ಅವರೂ ನಮ್ಮ ಆತ್ಮನು ಅಲ್ಲಿಯೂ ಇರುತ್ತಾನೆ. ಆದ್ದರಿಂದ ಆತ್ಮನಿಗೆ ಹೋಲಿಸಿದರೆ ಅನಾತ್ಮವಾದ ಜಗತ್ತೆಂಬುದು ಮಿಥ್ಯೆ, ಹುಸಿತೋರಿಕೆಯೇ—ಎಂದು ತರ್ಕದಿಂದ ನಾವು ನಿರ್ಣಯಿಸಿಕೊಳ್ಳಬಹುದಾಗಿರುತ್ತದೆ. ಇಲ್ಲಿ ಶಾಸ್ತ್ರದಿಂದಾದ ಜ್ಞಾನವು ಪ್ರಪಂಚವನ್ನು ಹೊಸದಾಗಿ ಹುಸಿಯೆನಿಸುವದಿಲ್ಲ; ಅನುಭವದಿಂದಲೂ ಯುಕ್ತಿಯ ಬಲದಿಂದಲೂ ಅದು ಮಿಥ್ಯೆಯೆಂದು ನಿಶ್ಚಯಿಸುವಂತೆ ಮಾಡುತ್ತದೆ. 'ಜ್ಞಾಪಕಂ ಶಾಸ್ತ್ರಮ್, ನ ಕಾರಕಮ್' ಎಂಬುದೇ ಇಲ್ಲಿ ಸೂತ್ರ.

ವಿಭೂತಿಯೋಗಕ್ಕೂ ವಿಶ್ವರೂಪದ ಜ್ಞಾನಕ್ಕೂ ಮನಸ್ಸು ಬೇಕು. ಈ ಇಡಿಯ ಜಗತ್ತು ಭಗವಂತನ ರೂಪವೇ ಎಂಬ ಭಾವನೆಯು ಮೂಡಿಕೊಳ್ಳುವದಕ್ಕೆ ಮನಸ್ಸೇ ಮುಖ್ಯವಾಗಿದೆ: ಆದರೆ ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುವ ವ್ಯಾಕೃತಾವ್ಯಾಕೃತರೂಪಗಳಿಗಿಂತ ವಿಲಕ್ಷಣವಾದ ಪುರುಷೋತ್ತಮನ ಜ್ಞಾನಕ್ಕೆ ಅನುಭವಪ್ರಧಾನವೃತ್ತಿಯೇ ಬೇಕು.

ಅನುಭವವೆಂಬುದು ಆತ್ಮನ ಧರ್ಮವಲ್ಲ; ಆತ್ಮನ ಸ್ವರೂಪವೇ ಅನುಭವ: ಮನೆಯ ಹೊರಗಿರುವ ಸೂರ್ಯನನ್ನು ಮನೆಯ ಕಿಟಕಿಯಮೂಲಕ ನಾವು ಕಾಣುವಾಗಲೂ ಸೂರ್ಯನಿಗೆ ಕಿಟಕಿಯು ಅಥವಾ ನಮ್ಮ ಮನೆಯು ಪರಿಚ್ಛೇದವು ಹೇಗೆ ಇರುವದಿಲ್ಲವೋ, ಹಾಗೆಯೇ ನಮ್ಮ ಹೃದಯವೆಂಬ ಕಿಟಕಿಯಿಂದ ನಾವು ಆತ್ಮನನ್ನು ಕಂಡುಕೊಳ್ಳುವಾಗಲೂ ಆ ಆತ್ಮನು ನಮ್ಮ ಹೃದಯಕ್ಕಾಗಲಿ ಶರೀರಕ್ಕಾಗಲಿ ಕಟ್ಟುಬಿದ್ದಿರುವದಿಲ್ಲ, ಅವನು ಸ್ವತಂತ್ರನಾಗಿರುತ್ತಾನೆ; ಅಥವಾ ಹೃದಯವೆಂಬ ಕಿಟಕಿಯಾಗಲಿ ಶರೀರವಾಗಲಿ ಬೇರೆಯಾಗಿರುವವೆಂದೇಕೆ ತಿಳಿಯಬೇಕು? ಆತ್ಮನಿಗಿಂತ ಬೇರೆಯಾಗಿರುವದೆಲ್ಲವೂ ಆತ್ಮನು ಅನುಭವದಿಂದ ವ್ಯಾಪ್ತವಾಗಿ ಎಲ್ಲವೂ ಆತ್ಮನೇ ಆಗಿರುತ್ತದೆ—ಎನ್ನುವದೇ ಯುಕ್ತತರ. ಅವಸ್ಥಾದೃಷ್ಟಿಯಿಂದ ಅಥವಾ ಸೃಷ್ಟಿಸ್ಥಿತಿಪ್ರಲಯಗಳ ದೃಷ್ಟಿಯಿಂದ ತತ್ತ್ವವನ್ನು ಪರೀಕ್ಷಿಸಿದಾಗ ಅವಸ್ಥೆಗಳೂ ಸೃಷ್ಟಿಸ್ಥಿತಿಪ್ರಲಯಗಳೂ ಆತ್ಮನ ಜ್ಞಾನಕ್ಕೆ ದ್ವಾರವಾಗಿದ್ದರೂ ಅವು ಪರಮಾತ್ಮನಿಗಿಂತ ಬೇರೆಯಾಗಿರುವದೇ ಇಲ್ಲ.

ಗೀತೆಯ ಏಳನೆಯ ಅಧ್ಯಾಯದಲ್ಲಿ 'ಪರಾ ಪ್ರಕೃತಿ', 'ಅಪರಾ ಪ್ರಕೃತಿ'—ಎಂಬ ಎರಡು ಪ್ರಕೃತಿಗಳು ಪರಮೇಶ್ವರನಿಗೆ ಸೇರಿರುವವೆಂದು ಹೇಳಿದೆಯಷ್ಟೆ? ಅಲ್ಲಿ:

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ಗೀ. ೭-೬**

ಎಂದರೆ 'ಎಲ್ಲಾ ಭೂತಗಳೂ ಈ ಎರಡು ಪ್ರಕೃತಿಗಳ ಕಾರ್ಯವೆಂದೇ ನಿಶ್ಚಯಿಸಿಕೊ' ಎಂದು ಶ್ಲೋಕದ ಪೂರ್ವಾರ್ಧದಲ್ಲಿ ಹೇಳಿದಮೇಲೆ ಭಗವಂತನು ಉತ್ತರಾರ್ಧದಲ್ಲಿಯೇ 'ನಾನು ಇಡಿಯ ಜಗತ್ತಿನ ಉತ್ಪತ್ತಿಗೂ ಪ್ರಲಯಕ್ಕೂ ಕಾರಣನಾಗಿರುತ್ತೇನೆ' ಎಂದಿರುತ್ತಾನೆ. ತಟ್ಟನೆ ನೋಡಿದರೆ ಈ ಎರಡು ವಾಕ್ಯಗಳೂ ಪರಸ್ಪರ ವಿರುದ್ಧವೆಂದು ತೋರಿದರೂ ಭಾಷ್ಯಕಾರರು 'ಪ್ರಕೃತಿದ್ವಯದ್ವಾರೇಣಾಹಂ ಸರ್ವಜ್ಞಃ ಈಶ್ವರೋ ಜಗತಃ ಕಾರಣಮ್ ಇತ್ಯರ್ಥಃ' (ಸರ್ವಜ್ಞನಾದ ಈಶ್ವರನಾದ ನಾನೇ ಈ ಪ್ರಕೃತಿದ್ವಯದ ಮೂಲಕ ಜಗತ್ತಿಗೆ ಕಾರಣನು) ಎಂದು ವಾಕ್ಯಗಳಿಗೆ ಸಾಮರಸ್ಯವನ್ನು ಕಲ್ಪಿಸಿರುತ್ತಾರೆ. ಪರಮೇಶ್ವರನು ಸ್ವತಃ ಕಾರಣವೂ ಅಲ್ಲ, ಕಾರ್ಯವೂ ಅಲ್ಲ; ಅವಿದ್ಯಾಕಲ್ಪಿತವಾದ ಪರಾಪರಪ್ರಕೃತಿಗಳೆಂಬ ದ್ವಾರಗಳಿಂದ ಜಗತ್ತಿಗೆ ಕಾರಣನೆಂಬ ವ್ಯವಹಾರಕ್ಕೆ ಆಸ್ಪದನಾಗಿರುತ್ತಾನೆ-ಎಂಬುದು ಆಚಾರ್ಯರ ಆಶಯ. ಈ ಅಭಿಪ್ರಾಯವನ್ನೇ ಹದಿಮೂರನೆಯ ಅಧ್ಯಾಯದಲ್ಲಿ ವಿಸ್ತರಿಸಿ ತಿಳಿಸಿರುತ್ತಾರೆ. ಆದ್ದರಿಂದ ಈಗ ಈ ಅಧ್ಯಾಯದ ಕ್ಷೇತ್ರಕ್ಷೇತ್ರಜ್ಞವಿವೇಕಜ್ಞಾನವನ್ನು ಹೇಳುವದಕ್ಕೆ ಹೊರಟಿರುತ್ತೇನೆ.

**ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ಗೀ. ೧೩-೧**

ಕ್ಷೇತ್ರ, ಕ್ಷೇತ್ರಜ್ಞ-ಎಂಬೀ ಎರಡನ್ನೇ ಪ್ರಕೃತಿಗಳು ಎಂದು ಹಿಂದೆ (೭ನೆಯ ಅಧ್ಯಾಯದಲ್ಲಿ) ಹೇಳಿರುವದು.) ತ್ರಿಗುಣಾತ್ಮಕವಾದ ಎಂಟು ಬಗೆಯಾಗಿ ವಿಂಗಡಿಸಿಕೊಂಡಿರುವ ಅಪರಪ್ರಕೃತಿಯನ್ನು 'ಕ್ಷೇತ್ರ'ವೆಂದೂ ಜೀವರೂಪವಾಗಿರುವ ಪರಪ್ರಕೃತಿಯನ್ನು 'ಕ್ಷೇತ್ರಜ್ಞ'ನೆಂದೂ ಇಲ್ಲಿ ಕರೆದಿದೆ. ಈ ಪ್ರಕೃತಿಗಳ ತತ್ತ್ವವನ್ನು ನಿರೂಪಣಮಾಡಿ ಈಶ್ವರಸ್ವರೂಪವನ್ನು ನಿರ್ಧಾರಣೆಮಾಡುವದಕ್ಕಾಗಿ ಈ ಗ್ರಂಥಭಾಗವು ಹೊರಟಿದೆ. ಇಲ್ಲಿ ಸಾಂಖ್ಯರ ಪ್ರಕ್ರಿಯೆಯನ್ನು ಅವಲಂಬಿಸಿ ಇವೆರಡನ್ನೂ ಮೊದಲು ವಿವರಿಸಿರುತ್ತದೆ. ಇವನ್ನು ಸಾಂಖ್ಯರು "ಪ್ರಕೃತಿ", "ಪುರುಷ"-ಎಂದು ಕರೆಯುತ್ತಾರೆ. ಅವರ ದರ್ಶನದಲ್ಲಿ ಪ್ರಕೃತಿಯು ಸ್ವತಂತ್ರವಾಗಿರುತ್ತದೆ. ಪ್ರಕೃತಿಯೇ ಶರೀರೇಂದ್ರಿಯವಿಷಯಗಳ ರೂಪದಿಂದ ಪರಿಣಮಿಸಿ ಪುರುಷನ ಭೋಗಕ್ಕೂ ಅಪವರ್ಗಕ್ಕೂ ಕಾರಣವಾಗಿರುತ್ತದೆ. ಕ್ಷೇತ್ರವೆಂದರೆ "ಹೊಲ" ಎಂಬರ್ಥವನ್ನು ಕೆಲವರು ಹೇಳುತ್ತಾರೆ; ಪ್ರಕೃತಿಯು ಪುರುಷನ ಕ್ರೀಡಾರಂಗವಾಗಿದೆ ಎಂದು ಅವರ ಅಭಿಪ್ರಾಯವಾದರೆ ಆ ಅರ್ಥ

ವನ್ನು ಇಟ್ಟುಕೊಳ್ಳಬಹುದು. ವೇದಾಂತವಂತೆ, ಸಾಂಖ್ಯರು ಹೇಳುವಂತೆ ಪುರುಷರು ಅನೇಕರು ಎಂಬುದು ವ್ಯವಹಾರದೃಷ್ಟಿಯಿಂದ ಸರಿ. ವಿದ್ಯುಚ್ಛಕ್ತಿಯು ಒಂದೇ ಆದರೂ ಆಯಾ ಬಲ್ಬುಗಳಲ್ಲಿ ಬೇರೆಬೇರೆಯಾಗಿ ತೋರುತ್ತಿರುವಂತೆ ಕಾಣುತ್ತಿರುತ್ತದೆಯಲ್ಲವೆ? ಹಾಗೆಯೇ–

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ||** ಗೀ. ೧೩–೨

ಎಲ್ಲಾ ಕ್ಷೇತ್ರಗಳಲ್ಲಿಯೂ ಬೇರೆಬೇರೆಯಾಗಿ ತೋರುತ್ತಿರುವ ಕ್ಷೇತ್ರಜ್ಞನು ಪರಮಾರ್ಥವಾಗಿ ಭಗವಂತನಾದ ನಾನೇ ಎಂದು ತಿಳಿ–ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಗೀತಾಶ್ಲೋಕಗಳನ್ನು ಕಂಠಪಾಠಮಾಡಿ ಹೇಳಿಕೊಂಡಮಾತ್ರ ದಿಂದ ಈ ಕ್ಷೇತ್ರಜ್ಞೇಶ್ವರೈಕತ್ವಜ್ಞಾನವು ನಮ್ಮ ಅನುಭವಕ್ಕೆ ಬರಲಾರದು. ಕುಂಟನೂ ಕುರುಡನೂ ಆಗಿರುವವನು ತನಗೆ ಆದಷ್ಟುದೂರ ನಡೆದು 'ಈಗ ಕಾಶಿಗೆ ಹೋಗಿದ್ದೇನು' ಎಂದು ಭಾವಿಸುವುದು ಎಷ್ಟರಮಟ್ಟಿಗೆ ಸರಿಯೋ ಅಷ್ಟರಮಟ್ಟಿಗೆ ಶ್ಲೋಕಾರ್ಥಗಳನ್ನು ಹೇಳಿಕೊಂಡಮಾತ್ರದಿಂದ ಕ್ಷೇತ್ರಜ್ಞೇಶ್ವರೈ ಕತ್ವಜ್ಞಾನವಾಗುವುದು.

ಈವರೆಗೆ ಧ್ಯಾನ, ಭಕ್ತಿ, ಜಪ, ನಮಸ್ಕಾರ, ಪೂಜೆ–ಮುಂತಾದವುಗಳನ್ನು ಹೇಳಿದ್ದಾಗಿದೆ. ಈಗ ಭಗವಂತನು 'ನಿಜವಾಗಿ ನಿನ್ನ ಪರಮಾರ್ಥಾತ್ಮನು ನಾನೇ' ಎಂದು ಉಪದೇಶಿಸಿರುತ್ತಾನೆ. ಕ್ಷೇತ್ರಜ್ಞನೂ ಈಶ್ವರನೂ ಒಬ್ಬನೇ ಎಂಬ ಅನುಭವವು ಶ್ರದ್ಧಾಭಕ್ತಿಧ್ಯಾನಯೋಗಾದಿಗಳನ್ನು ಅನುಷ್ಠಾನಮಾಡಿದ ಅಧಿಕಾರಿಗೆ ಲಭಿಸುವುದು ಎಂಬುದನ್ನು ಇದರಿಂದ ನಿಶ್ಚಯಿಸಿಕೊಳ್ಳಬೇಕು.

ಪ್ರಕೃತಿಯೆಂಬುದು ಸಾಂಖ್ಯರು ಹೇಳುವಂತೆ ಪುರುಷನೆಂಬ ರೈಲುಕಂಬಿಯ ಜೊತೆಗೆ ತಾನೂ ಹರಿಯುವ ಮತ್ತೊಂದು ಕಂಬಿಯಲ್ಲ. ಪುರುಷನು ಅನೇಕ, ಪ್ರಕೃತಿಯು ಎಲ್ಲರಿಗೂ ಒಂದೇ–ಎಂಬ ಸಾಂಖ್ಯರ ಸಿದ್ಧಾಂತವನ್ನು ಇಲ್ಲಿ ಒಪ್ಪಿಲ್ಲ. **'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್'** ( ಶ್ವೇ. ೪–೧೦ ) ಎಂಬ ಶ್ರುತಿವಾಕ್ಯದಂತೆ ಪ್ರಕೃತಿಯು ಈಶ್ವರನ ಅಧೀನವಾಗಿ ತೋರಿಕೊಳ್ಳುವ ಮಾಯಾಶಕ್ತಿಯಾಗಿರುತ್ತದೆ.

ಕ್ಷೇತ್ರಜ್ಞನು ಅಥವಾ ಕ್ಷೇತ್ರಿಯು ಪ್ರತಿಯೊಂದು ಕ್ಷೇತ್ರದಲ್ಲಿಯೂ ಒಬ್ಬನೇ ಆಗಿರುತ್ತಾನೆ.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ |**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ||**

ಗೀ. ೧೩–೩೩

ಕ್ಷೇತ್ರಜ್ಞನು ಒಂದು ಮನೆಯ ಒಂದು ಮೂಲೆಯಲ್ಲಿ ಮಿನುಗುತ್ತಿರುವ ಹಣತೆಯ ದೀಪದಂತೆ ಇರುವದಿಲ್ಲ. ಸೂರ್ಯನು ಲೋಕವೆಲ್ಲವನ್ನೂ ಏಕಕಾಲದಲ್ಲಿ ತನ್ನ ಸ್ವರೂಪಪ್ರಕಾಶದಿಂದ ಬೆಳಗುತ್ತಿರುವಂತೆ, ಆತನು ತನ್ನ ಚೈತನ್ಯಪ್ರಕಾಶದಿಂದ ಕ್ಷೇತ್ರಗಳನ್ನು ಒಟ್ಟಿಗೇ ಒಳಗೆ, ಹೊರಗೆ, ನಡುವೆ–ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿಕೊಂಡು ಬೆಳಗುತ್ತಿರುತ್ತಾನೆ. ತತ್ತ್ವದೃಷ್ಟಿಯಿಂದ ನೋಡಿದರೆ ಆ ಕ್ಷೇತ್ರಜ್ಞನ ತತ್ತ್ವವಾಗಿ ಭಗವಂತನ ಚೈತನ್ಯವೇ ಬಗೆಬಗೆಯ ಕ್ಷೇತ್ರಗಳಾಗಿ ಕಾಣಿಸಿಕೊಳ್ಳುತ್ತಿರುತ್ತದೆ–ಎಂಬ ತತ್ತ್ವವು ಅನುಭವಕ್ಕೆ ಗೋಚರವಾಗುವದು. ಇದೇ ಕ್ಷೇತ್ರಕ್ಷೇತ್ರಜ್ಞವಿವೇಕ.

## ೪೯. ಪ್ರಕೃತಿಪುರುಷರ ಸಂಯೋಗವಿಯೋಗಗಳು

(9—9—69)

ಆತ್ಮತತ್ತ್ವವು ಕ್ಷರಾಕ್ಷರ(ವ್ಯಾಕೃತಾವ್ಯಾಕೃತ)ಗಳಿಗಿಂತ ವಿಲಕ್ಷಣವಾಗಿದೆ–ಎಂಬುದನ್ನು ಪುರುಷೋತ್ತಮಯೋಗದ ವಿವರಣೆಯಲ್ಲಿ ತಿಳಿಸಿದ್ದಾಗಿದೆ. ಅವಸ್ಥಾತ್ರಯನಿರೂಪಣಪೂರ್ವಕವಾಗಿ ನೋಡಿದರೆ ಆತ್ಮನು ಸರ್ವಾವಸ್ಥಾವಿಲಕ್ಷಣನಾಗಿರುತ್ತಾನೆ– ಎಂಬುದನ್ನೂ ಸ್ಪಷ್ಟಪಡಿಸಿದ್ದಾಗಿದೆ. ನಾವು ಸಾಮಾನ್ಯವಾಗಿ ತಿಳಿದುಕೊಂಡಿರುವ 'ನಾನು' ಎಂಬುದಕ್ಕಿಂತಲೂ ವಿಲಕ್ಷಣವಾಗಿ ಅದರ ತೋರಿಕೆಗೆ ಆಸ್ಪದವಾಗಿರುವ ಒಂದು 'ಹಿರಿಯನಾನು' ಬೇರೆಯಿದೆ; ಇದನ್ನು ತಿಳಿಯಿಸಿಕೊಡುವದಕ್ಕಾಗಿ ಬಾಲ್ಯಾದ್ಯವಸ್ಥೆಗಳ ವಿಚಾರವನ್ನು ಭಗವಂತನು ಹೇಳಿರುತ್ತಾನೆ.

ನಮ್ಮೆಲ್ಲರ ವ್ಯವಹಾರದ ಭಾವನೆಯಲ್ಲಿ–ಬೀಜವು ಮರವಾಗಿ ಪರಿಣಮಿಸುವಂತೆ ನಮ್ಮ ಬಾಲ್ಯದ ಶರೀರವು ಕೌಮಾರದ ಶರೀರವಾಗಿ, ಯೌವನದ ಶರೀರವಾಗಿ ಪರಿಣಮಿಸುತ್ತದೆ. ಅದೂ ಪರಿಣಾಮವಾಗಿ ವಾರ್ಧಕಶರೀರವಾಗಿ ಕೊನೆಗೆ ನಾಶವಾಗಿಬಿಡುತ್ತದೆ. ಹೀಗೆ ಮಾರ್ಪಡುವ ವಸ್ತುವನ್ನು ಪರಿಣಾಮಿನಿತ್ಯ–ಎಂದು ಕರೆಯುತ್ತಾರೆ. ಆದರೆ ವಸ್ತುತತ್ತ್ವವು ಹೀಗಿಲ್ಲ. ಬಾಲ್ಯಶರೀರವು ಪೂರ್ಣವಾಗಿ ನಷ್ಟವಾದಬಳಿಕ ಕೌಮಾರಶರೀರವು ತೋರಿಕೊಳ್ಳುತ್ತದೆ. ಕನಸಿನ ಶರೀರವು ಮಾರ್ಪಟ್ಟು ಎಂದಿಗೂ ಎಚ್ಚರದ ಶರೀರವಾಗುವದಿಲ್ಲವಷ್ಟೆ? ಹಾಗೆಯೇ ಒಂದೊಂದು ಅವಸ್ಥೆಯಲ್ಲಿ ನಮಗೆ ಆಗುತ್ತಿರುವ ಇಂದ್ರಿಯಾರ್ಥಗಳ ಸಂಬಂಧದಿಂದ ಆಗುವ ಶೀತೋಷ್ಣಗಳೂ, ಅವುಗಳಿಂದುಂಟಾಗುವ ಸುಖದುಃಖಗಳೂ, ಆದರಿಂದ ನಾವು ಅನುಭವಿಸುವೆವೆಂದು ಭಾವಿಸಿಕೊಂಡಿರುವ ಹರ್ಷ

ವಿಕಾರಗಳೂ ಅಲ್ಲಲ್ಲಿಗೇ ತೋರಿ ಹಾರುವವುಗಳಾಗಿರುತ್ತವೆ. ವ್ಯಭಿಚರಿತ ಸ್ವರೂಪವುಳ್ಳವುಗಳಾಗ್ದರಿಂದ ಸ್ಥೂಲಸೂಕ್ಷ್ಮಶರೀರಗಳೆರಡೂ ಅಸತ್ತು (ಮಿಥ್ಯಾ) ಎನಿಸುತ್ತವೆ. ಆತ್ಮನು ಯಾವ ಬಾಲ್ಯಾದಿಗಳನ್ನೂ ಅನುಭವಿಸದೆ ಅವನ್ನು ತಟಸ್ಥನಾಗಿ ತನ್ನ ಚೈತನ್ಯದಿಂದ ಬೆಳಗುತ್ತಾ ಕೂಟಸ್ಥನಿತ್ಯನಾಗಿರುತ್ತಾನೆ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥**

ಗೀ. ೨-೧೬

ಎಂದಿರುವಂತೆ ಎಂದೆಂದಿಗೂ ಮಾರ್ಪಡದೆ ತಾನು ಇದ್ದಂತೆ ಇರುವ ಆತ್ಮನು **ಕೂಟಸ್ಥನಿತ್ಯನು**; ದೇಹೇಂದ್ರಿಯಮನಆದಿಗಳು ತನ್ನ ಸ್ವರೂಪವನ್ನು ಮಾರ್ಪಡಿಸಿಕೊಳ್ಳುತ್ತಾ-ಪರೀಕ್ಷಿಸಿದಮಾತ್ರದಿಂದ ತಮಗೆ ಆಶ್ರಯವಾಗಿರುವ ಕಾರಣಕ್ಕಿಂತ ವ್ಯತಿರಿಕ್ತವಾಗಿಲ್ಲದೆ ಇರುವ ಅಸದ್ರೂಪವಾದ ಬರೀ ತೋರಿಕೆ ಯಾಗಿರುತ್ತವೆ. ಹೀಗಿದ್ದರೂ ಈ ಸಾಂಖ್ಯದೃಷ್ಟಿಯನ್ನವಲಂಬಿಸಲಾರದವರಿ ಗಾಗಿ '**ಯೋಗೇ ತ್ವಿಮಾಂ ಶೃಣು**' (ಯೋಗದೃಷ್ಟಿಯಿಂದಲಾದರೆ ಈಗ ಹೇಳುವದನ್ನು ಕೇಳು) ಎಂದು ಭಗವಂತನು ಮಂದಮಧ್ಯಮದೃಷ್ಟಿಗಳನ್ನವ ಲಂಬಿಸಿ ಉಪದೇಶಿಸಿರುತ್ತಾನೆ. ಈಗ ನಾವು ಸಾಧಕರಿಗೆ ಪ್ರಾಮುಖ್ಯವನ್ನು ಕೊಟ್ಟು ವಿಚಾರಮಾಡುತ್ತಿರುವದೂ ಈ ದೃಷ್ಟಿಯಿಂದಲೇ. ಪ್ರಕೃತದಲ್ಲಿ ನಾವು ವಿಮರ್ಶಿಸುತ್ತಿರುವ ಕ್ಷೇತ್ರವು ಸಾಂಖ್ಯರು ಹೇಳುವ ಪ್ರಕೃತಿಯ ಸ್ಥಾನದಲ್ಲಿದೆ; ಕ್ಷೇತ್ರಜ್ಞನು ಪುರುಷನ ಸ್ಥಾನದಲ್ಲಿರುತ್ತಾನೆ. ವ್ಯವಹಾರದೃಷ್ಟಿಯಿಂದ ಪ್ರಕೃತಿ ಪುರುಷರ ವಿವೇಕವನ್ನು ಮಾಡುತ್ತಿದ್ದೇವೆ ಎಂದು ತಿಳಿಯಬೇಕು.

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥**
**ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ॥** ಗೀ. ೧೩-೨೦

ಕಾರ್ಯವೆಂದರೆ ಶರೀರವು, ಕರಣಗಳೆಂದರೆ ಅದರಲ್ಲಿರುವ ಇಂದ್ರಿಯಗಳು; ಕರಣ ವೆಂಬ ಮಾತಿನಲ್ಲಿ ಕರಣಾಶ್ರಯವಾಗಿ ತೋರಿಕೊಳ್ಳುವ ಸುಖದುಃಖಮೋಹಗಳ ನ್ನೂ ಸೇರಿಸಿಕೊಳ್ಳಬೇಕು. ಕಾರ್ಯಕರಣಗಳು ಉತ್ಪನ್ನವಾಗುವದಕ್ಕೆ ಉತ್ಪಾದಕವಾದ ಪರಿಣಾಮಕಾರಣವೇ ಪ್ರಕೃತಿ; ಪುರುಷನು ಈ ಕಾರ್ಯಕರಣ ಗಳ ಸಂಬಂಧದಿಂದ ಆಗುವ ಸುಖದುಃಖಗಳನ್ನು ಅನುಭವಿಸುವದಕ್ಕೆ ಕಾರಣ ವಾಗಿರುತ್ತಾನೆ. ಪುರುಷನು ಪ್ರಕೃತಿಯಲ್ಲಿ ನಾನೆಂಬ ಅಭಿಮಾನದಿಂದ ಸುಖ ದುಃಖಮೋಹಗಳನ್ನು ಅನುಭವಿಸುತ್ತಿರುವನು. ಗುಣಗಳಲ್ಲಿ 'ನಾನೇ ಅವು'

ಎಂಬ ಭ್ರಾಂತಿಯ ರೂಪವಾದ ಸಂಗವೇ, ಕಾಮವೇ ಭೋಕ್ತೃವಾಗಿ ಸಜ್ಜನ್ಮ ಗಳು, ಅಸಜ್ಜನ್ಮಗಳು, ಸದಸಜ್ಜನ್ಮಗಳು–ಎಂಬ ವಿವಿಧಜನ್ಮಗಳನ್ನು ಪಡೆಯು ವದಕ್ಕೆ ಕಾರಣವಾಗಿರುವದು. ಹೀಗೆ ಪ್ರಕೃತಿಯಲ್ಲಿ ತಾನೆಂಬ ಅಭಿಮಾನರೂಪ ವಾದ ಅವಿದ್ಯೆ, ಮತ್ತು ಗುಣಗಳಲ್ಲಿ ಸಂಗರೂಪವಾಗಿರುವ ಕಾಮ–ಇವೇ ಸಂಸಾರಕ್ಕೆಲ್ಲ ಕಾರಣವಾಗಿರುತ್ತವೆ. ಇಲ್ಲಿಯವರೆಗೆ ಸಾಂಖ್ಯದರ್ಶನದ ಪ್ರಕ್ರಿಯೆ ಯನ್ನು ಅನುಸರಿಸಿ ನಿರೂಪಿಸಿದ್ದಾಗಿದೆ. ಆದರೆ ವೇದಾಂತಪ್ರಸ್ಥಾನದ ಪ್ರಕ್ರಿಯೆ ಯಂತೆ ನೋಡಿದರೆ ಆತ್ಮನಿಗಿಂತ ಬೇರೆಯಾಗಿ ಯಾವದೊಂದು ವಸ್ತುವೂ ಇಲ್ಲವೇಇಲ್ಲ ; ಆದರೂ ಲೋಕದಲ್ಲಿರುವ ಜೀವರುಗಳು ಬೇರೆಬೇರೆಯಾಗಿರುತ್ತಾ ರೆಂದು ವ್ಯವಹಾರದಲ್ಲಿ ಕಾಣುತ್ತಿರುವದಕ್ಕೆ ಕಾರಣವೇನೆಂದರೆ :

**ಯಾವತ್ ಸಞ್ಜಾಯತೇ ಕಿಞ್ಚಿತ್ ಸತ್ತ್ವಂ ಸ್ಥಾವರಜಙ್ಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥** ಗೀ. ೧೩–೨೬

ಕ್ಷೇತ್ರಜ್ಞನು ಸ್ವರೂಪದಿಂದ ಪರಮಾರ್ಥಸದ್ರೂಪನಾದ ಚೈತನ್ಯಮಾತ್ರನಾಗಿರು ತ್ತಾನೆ. ಕ್ಷೇತ್ರವೆಂಬುದೇ ಮೊದಲು ಇಲ್ಲ; ಆದರೂ "**ಕ್ಷೇತ್ರಕ್ಷೇತ್ರಜ್ಞಯೋ ರ್ವಿಷಯವಿಷಯಿಣೋರ್ಭಿನ್ನಸ್ವಭಾವಯೋರಿತರೇತರತದ್ಧರ್ಮಾಧ್ಯಾಸ ಲಕ್ಷಣಃ ಸಂಯೋಗೋ ಕ್ಷೇತ್ರಕ್ಷೇತ್ರಜ್ಞಸ್ವರೂಪವಿವೇಕಾಭಾವನಿಬನ್ಧ ನೋ ರಜ್ಜುಶುಕ್ತಿಕಾದೀನಾಂ ತದ್ವಿವೇಕಜ್ಞಾ** [illegible] **ಸರ್ಪರಜತಾದಿಸಂಯೋಗವತ್ । ಸೋಽಯಮಧ್ಯಾಸಸ್ವರೂಪಃ ಕ್ಷೇತ್ರ ಕ್ಷೇತ್ರಜ್ಞಸಂಯೋಗೋ ಮಿಥ್ಯಾಜ್ಞಾನಲಕ್ಷಣಃ।**" (ಸತ್ಯವಾಗಿರುವ ಹಗ್ಗ, ಹುಸಿಯಾಗಿರುವ ಹಾವು; ಸತ್ಯವಾಗಿರುವ ಕಪ್ಪೆಯಚಿಪ್ಪು, ಹುಸಿಯಾಗಿರುವ ಬೆಳ್ಳಿ–ಇವುಗಳ ಸ್ವರೂಪವನ್ನು ವಿಂಗಡಿಸಿ ಅರಿತುಕೊಳ್ಳದೆ ಇರುವದರಿಂದ ಹಾವು, ಬೆಳ್ಳಿ–ಮುಂತಾದವುಗಳನ್ನು ಅಧ್ಯಾರೋಪಮಾಡಿಕೊಳ್ಳುವಂತೆ ಪರಮಾರ್ಥಸತ್ಯ ವಾದ ಕ್ಷೇತ್ರಜ್ಞ, ಮಿಥ್ಯೆಯಾದ ಕ್ಷೇತ್ರ– ಇವೆರಡನ್ನೂ ವಿಂಗಡಿಸಿ ಅರಿತುಕೊಳ್ಳ ದ್ದೆಂಬ ಕಾರಣದಿಂದ ಪರಮಾತ್ಮನಲ್ಲಿ ಸ್ಥಾವರಜಂಗಮಾತ್ಮಕವಾದ ಬಗೆಬಗೆಯ ಪ್ರಾಣಿಗಳು ಒಂದಕ್ಕಿಂತ ಒಂದು ವಿಲಕ್ಷಣವಾಗಿರುವಂತೆ ತೋರುತ್ತಿರುವವು. ಯಾವಾಗ ಇವೆರಡನ್ನೂ ವಿಂಗಡಿಸಿ ತಿಳಿದುಕೊಳ್ಳುವೆವೋ ಆಗ 'ಕ್ಷೇತ್ರಜ್ಞನು ಪರಮಾತ್ಮನೇ, ಅವನು ಅದ್ವಿತೀಯನೇ; ಅವನಿಗಿಂತ ವ್ಯತಿರಿಕ್ತವಾಗಿ ಕ್ಷೇತ್ರ ವಾಗಲಿ, ಜೀವರುಗಳಾಗಲಿ ಇಲ್ಲವೇಇಲ್ಲ' ಎಂಬ ಸಮ್ಯಗ್ಜ್ಞಾನವುಂಟಾಗಲು ಈ ಮಿಥ್ಯಾಜ್ಞಾನವು ತೊಲಗುವದು ) ಆಗ :

**ಉಪದ್ರಷ್ಟಾಽನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥**

ಗೀ. ೧೩–೨೨

ಕ್ಷೇತ್ರಜ್ಞನು ಒಂದೊಂದು ದೇಹಕ್ಕೆ ಒಬ್ಬೊಬ್ಬನಂತೆ ಅನೇಕ ಜೀವರಾಗಿ ತೋರು ತ್ತಿದ್ದರೂ ನಿಜವಾಗಿ ಇವನು :

**ಉಪದ್ರಷ್ಟೃ**:–ಯಜ್ಞಮಾಡುವಾಗ ಋತ್ವಿಜರುಗಳೂ ಯಜಮಾನನೂ ಯಜ್ಞಕರ್ಮದಲ್ಲಿ ತೊಡಗಿರುವಲ್ಲಿ ಕೂಟಸ್ಥನಾಗಿ ಯಜ್ಞವಿದ್ಯಾಕುಶಲನಾದ ಉಪ ದ್ರಷ್ಟೃವು ಹೇಗೆ ಅವರ ಕರ್ಮದ ಗುಣದೋಷಗಳನ್ನು ನೋಡುತ್ತಿರುವನೋ, ಹಾಗೆ ಸಾಕ್ಷಿಯಾಗಿರುವದರಿಂದ ಇವನು ಉಪದ್ರಷ್ಟೃವು. ಅಥವಾ, ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ–ಎಂಬ ಕಲ್ಪಿತದ್ರಷ್ಟೃಗಳು ಹೊರಗೆ ಇದ್ದರೂ ಅವುಗಳಲ್ಲಿ ದೇಹಕ್ಕಿಂತ ಇಂದ್ರಿಯಗಳೂ ಇಂದ್ರಿಯಗಳಿಗಿಂತ ಮನಸ್ಸೂ ಮನಸ್ಸಿಗಿಂತ ಬುದ್ಧಿಯೂ ಹತ್ತಿರಹತ್ತಿರವಿರುವ ದ್ರಷ್ಟೃಗಳಾದರೂ, ಅವೆಲ್ಲ ಕ್ಕಿಂತಲೂ ತೀರ ಹತ್ತಿರವಿರುವ ದ್ರಷ್ಟೃವಾಗಿರುವದರಿಂದ ಈತನು ಉಪದ್ರಷ್ಟೃ –ಎನಿಸಿಕೊಂಡಿರುತ್ತಾನೆ.

**ಅನುಮಂತ್ೃ** :– ದೇಹೇಂದ್ರಿಯಗಳು ತಮ್ಮತಮ್ಮ ಕೆಲಸದಲ್ಲಿ ವ್ಯಾಪೃತ ವಾಗಿರುವಲ್ಲಿ ಅವುಗಳಿಗೆ ಅನುಕೂಲನಾಗಿರುವಂತೆ ತೋರುತ್ತಾ, ಅವುಗಳ ವ್ಯಾಪಾರಕ್ಕೆ ಅನುಮೋದನವನ್ನು ಮಾಡುವವನಂತೆ ಇರುವದರಿಂದ ಅನುಮಂತೃ.

**ಭರ್ತೃ**:– ದೇಹೇಂದ್ರಿಯಾದಿಗಳು ಅಚೇತನವಾಗಿರುವದರಿಂದ ಅವುಗಳು ಒಂದಾಗಿ ತಮ್ಮತಮ್ಮ ಸ್ವರೂಪದಿಂದ ನಿಂತಿರುವದಕ್ಕೆ ಕಾರಣನಾಗುವಾತನು.

**ಭೋಕ್ತೃ**:– ಎಂದರೆ ಅಂತಃಕರಣದ ವೃತ್ತಿಗಳು ವಿಷಯಗಳ ಸಂಬಂಧ ದಿಂದ ಉಂಟಾಗುತ್ತಿರುವಲ್ಲಿ ಈ ಆತ್ಮನ ನಿತ್ಯಚೈತನ್ಯದ ಆಧಾರದಿಂದಲೇ ಹುಟ್ಟಿ ಅದರಿಂದಲೇ ವ್ಯಾಪ್ತವಾಗಿ ಚಿದಾತ್ಮಕವಾಗಿರುವಂತೆ ತೋರುತ್ತಿರುವದರಿಂದ ಇವನೇ ಭೋಕ್ತೃ.

**ಮಹೇಶ್ವರ**:– ಸರ್ವಾತ್ಮನಾಗಿಯೂ ಸ್ವತಂತ್ರನಾಗಿಯೂ ಇರುವದ ರಿಂದ ಈ ಆತ್ಮನು ಮಹೇಶ್ವರನು.

**ಪರಮಾತ್ಮ**:– ಹೀಗೆ ದೇಹದಲ್ಲಿರುವ ಈ ಆತ್ಮನು ಉಪದ್ರಷ್ಟೃವೂ ಅನುಮಂತೃವೂ ಭರ್ತೃವೂ ಭೋಕ್ತೃವೂ ಆಗಿರುವದಲ್ಲದೆ, ದೇಹಾದಿಬುದ್ಧ್ಯಂತ ವಾಗಿರುವ ಅನಾತ್ಮಗಳು ಕಲ್ಪಿತರೂಪದಿಂದ ಪ್ರತ್ಯಗಾತ್ಮರೂಪರೆಂದು ತೋರು ತ್ತಿದ್ದರೂ ಅವಕ್ಕೆಲ್ಲಕ್ಕೂ ಇವನೇ ಆತ್ಮನಾಗಿರುವದರಿಂದ ಪರಮಾತ್ಮನು ; ಅಂದರೆ ಪರಮಾರ್ಥಸ್ವರೂಪನಾದ ಆತ್ಮನು. ಈ ದೃಷ್ಟಿಯಿಂದಲೇ 'ಕ್ಷೇತ್ರಗಳಲ್ಲೆಲ್ಲ ಇರುವ ಕ್ಷೇತ್ರಜ್ಞನನ್ನು ನಾನೇ ಎಂದು ತಿಳಿ' ಎಂದು ಹಿಂದೆ ಹೇಳಿರುವದು.

ನಮ್ಮ ಆತ್ಮನು ಇಂಥ ವೈಭವವುಳ್ಳವನಾಗಿ ಎಲ್ಲಾ ಬಗೆಯಿಂದಲೂ ಅದ್ವಿತೀಯನಾಗಿದ್ದರೂ ಹುಸಿಯಾಗಿರುವ ಪ್ರಕೃತಿಯ ತಾದಾತ್ಮ್ಯದಿಂದ ನಾವು ಸುಖದುಃಖಮೋಹಾತ್ಮಕಗುಣಗಳನ್ನು ಅನುಭವಿಸುತ್ತಿರುವ ಜೀವರೆಂದು ತಪ್ಪಾಗಿ ಗ್ರಹಿಸಿಕೊಂಡು ತಾರತಮ್ಯದಿಂದಿರುವ ಉತ್ತಮಮಧ್ಯಮಾಧಮ ಜನ್ಮಗಳಲ್ಲಿ ಹುಟ್ಟುವೆವೆಂಬ ಭ್ರಾಂತಿಯ ಸಂಸಾರಕ್ಕೆ ವಶ್ಯರಾಗಿರುತ್ತೇವೆ. ಈಗ ನಮಗು ಕೆಲವರು ನಮಗೆ ಜನ್ಮಾಂತರದ ನೆನಪಿಲ್ಲವಲ್ಲ! ನಮಗೆ ಅನೇಕ ಜನ್ಮ ಮರಣಗಳು ಆಗುತ್ತಿರುವವೆಂಬುದಕ್ಕೆ ಯಾವ ಪ್ರಮಾಣವಿದೆ ?— ಎಂದು ಕುತರ್ಕ ವನ್ನು ಮಾಡುತ್ತಿರುತ್ತಾರೆ. ಆದರೆ ಕೆಲವರಿಗಾದರೂ ಅವರ ಭೂತಕಾಲದ ಜನ್ಮದ ಸ್ಮರಣೆಯು ಗಟ್ಟಿಯಾಗಿ ಇದ್ದದ್ದು ಈಗ ಅನೇಕ ಕಡೆಗಳಲ್ಲಿ ಹೊರಬಿದ್ದಿದೆ ಮನಃಶಾಸ್ತ್ರಜ್ಞರೂ ಅದನ್ನು ಪರೀಕ್ಷಿಸಿ ಜನ್ಮಾಂತರಗಳುಂಟೆಂಬ ನಂಬಿಕೆಗೆ ಬಂದಿರು ತ್ತಾರೆ. ನಮಗೆ ಜನ್ಮಾಂತರಗಳ ನೆನಪು ಇಲ್ಲದಿರುವುದು ಒಂದು ಭಾಗ್ಯವೆನ್ನ ಬೇಕು; ಇಲ್ಲದಿದ್ದರೆ ಈ ಜನ್ಮದ ಸುಖದುಃಖಗಳ ರಾಶಿಯ ಜೊತೆಗೆ ಆ ಜನ್ಮದವೂ ಗಂಟು ಬಿದ್ದಿರುತ್ತಿದ್ದವು! ಇದಂತಿರಲಿ. ಜನ್ಮಾಂತರದಮಾತು ಹೇಗೆ ಇದ್ದರೂ ವೇದಾಂತದ ಪರಮಾರ್ಥದೃಷ್ಟಿಯಿಂದ ನೋಡಿದರೆ ಜನ್ಮವಾಗಲಿ ಮರಣವಾಗಲಿ ಆತ್ಮನಿಗೆ ನಿಜವಾಗಿರುವುದೇ ಇಲ್ಲ. ಅನೃತವಾದ ಪ್ರಕೃತಿಯ ತಾದಾತ್ಮ್ಯದಿಂದ ನಮಗೆ ಜನ್ಮಮರಣಗಳ ಬುದ್ಧಿಯಾಗಿರುತ್ತದೆ. ನಿಜವಾಗಿ ನೋಡಿದರೆ ಜೀವರು ಅನೇಕ ರಿಲ್ಲ, ಇವರಲ್ಲಿ ತಾರತಮ್ಯವೂ ಇಲ್ಲ. ಇವರ ನಿಜವಾದ ಆತ್ಮನು ಎಲ್ಲಾ ಶರೀರ ಗಳಲ್ಲಿಯೂ ಒಬ್ಬನೇ, ಒಂದೇ ರೂಪದಿಂದ ಇರುತ್ತಿದಾನೆ; ಅವನು ಸರ್ವಸ್ವತಂತ್ರ ನಾದ ಪರಮೇಶ್ವರನೇ.

ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।
ವಿನಶ್ಯತ್ಸ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ॥
ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥

ಗೀ. ೧೩–೨೭, ೨೮

ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಪ್ರಾಣಿಗಳಲ್ಲಿ ಒಬ್ಬನೇ ಒಬ್ಬ ಪರಮೇಶ್ವರನೇ ಆತ್ಮರೂಪದಿಂದ ಇರುತ್ತಾನೆ. ಆ ಪ್ರಾಣಿಗಳು ನಾನಾವಿಕಾರಗಳನ್ನು ಹೊಂದಿ ವಿನಾಶವಾಗುತ್ತಿದ್ದರೂ ಅವನು ಮಾತ್ರ ಸ್ವಲ್ಪವೂ ವಿಕಾರವಿಲ್ಲದೆ ಇರುತ್ತಾನೆ. ಇದೇ ಪರಮಾರ್ಥಜ್ಞಾನ. ಈ ಜ್ಞಾನವನ್ನು ಹೊಂದಿದವರಿಗೆ ಆತ್ಮಹತ್ಯಾ ದೋಷವಿಲ್ಲ. ಮಿಕ್ಕವರು ಅನ್ಯಾತ್ಮವಾದ ಶರೀರಾದಿಗಳನ್ನೇ ಆತ್ಮನೆಂದು ಭಾವಿಸಿ ಕೊಂಡು ಪರಸ್ಪರವಾಗಿ ರಾಗದ್ವೇಷಗಳಿಂದ ಒಬ್ಬರಿಗೊಬ್ಬರು ಹಂತಕರಾಗಿರು ತ್ತಾರೆ. ಅನಾತ್ಮವಾದ ಶರೀರಾದಿಸಂಘಾತವೇ ತಾವೆಂದುಕೊಂಡು ಕರ್ಮಗಳನ್ನು

ಮಾಡಿ ಅವರ ಫಲವಾಗಿ ಬೇರೆಬೇರೆಯ ಶರೀರಗಳನ್ನು ಧರಿಸಿ ಹುಟ್ಟಿಸಾಯುತ್ತಾ ತಮ್ಮನ್ನು ತಾವೇ ಕೊಂದುಕೊಳ್ಳುತ್ತಿರುತ್ತಾರೆ. ಆದರೆ ಅವಿದ್ಯಾಕಲ್ಪಿತವಾದ ಪ್ರಕೃತಿಯೇ ಕರ್ಮವನ್ನು ಮಾಡುತ್ತಿರುವದೆಂದೂ ಪ್ರಕೃತಿಯೂ ಅದರ ಕರ್ಮಗಳೂ ಅನೃತವಾಗಿರುವದರಿಂದ ತಮ್ಮ ಆತ್ಮನಿಗೆ ಯಾವ ಕರ್ಮವೂ ಇಲ್ಲವೆಂದೂ ತಿಳಿದವರೇ ನಿಜವಾಗಿ ತಿಳಿದವರು.

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥** ಗೀ, ೧೩-೩೦

ಪರಮಾರ್ಥವೇನೆಂದರೆ: ಇರುವದೆಲ್ಲ ಒಬ್ಬನೇ ಒಬ್ಬ ಅದ್ವಿತೀಯನಾದ ಆತ್ಮನು; ಆ ಪರಮಾತ್ಮನಿಂದಲೇ ಎಲ್ಲಾ ಭೂತಗಳೂ ಉಂಟಾಗಿ ತೋರಿಕೊಳ್ಳುವವು. ಎಲ್ಲವೂ ಆತನ ಸ್ವರೂಪದಿಂದಲೇ ಇರುವವು.

**ಅಥಾತ ಆತ್ಮಾದೇಶ ಏವಾಽಽತ್ಮೈವಾಧಸ್ತಾದಾತ್ಮೋಪರಿಷ್ಟಾದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈವೇದಂ ಸರ್ವಮ್ ......................॥ ಆತ್ಮತಃ ಪ್ರಾಣ ಆತ್ಮತ ಆಶಾಽಽತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾವತಿರೋಭಾವಾವಾತ್ಮತೋಽನ್ನಮಾತ್ಮತೋ ಬಲಮಾತ್ಮತೋ ವಿಜ್ಞಾನಮಾತ್ಮತೋ ಧ್ಯಾನಮಾತ್ಮತಶ್ಚಿತ್ತಮಾತ್ಮತಃ ಸಂಕಲ್ಪ ಆತ್ಮತೋ ಮನ ಆತ್ಮತೋ ವಾಗಾತ್ಮತೋ ನಾಮಾತ್ಮತೋ ಮನ್ತ್ರಾ ಆತ್ಮತಃ ಕರ್ಮಾಣ್ಯಾತ್ಮತ ಏವೇದಗ್ಂ ಸರ್ವಮಿತಿ ॥**

ಛಾಂ. ೭-೨೫-೨, ೭-೨೬-೧

"ಇನ್ನು ಶುದ್ಧಾತ್ಮಸ್ವರೂಪದಿಂದಲೇ ಅದನ್ನು ಉಪದೇಶಮಾಡಲಾಗುವದು: ಆತ್ಮನೇ ಕೆಳಗೆ, ಆತ್ಮನೇ ಮೇಲೆ, ಆತ್ಮನೇ ಹಿಂದೆ, ಆತ್ಮನೇ ಮುಂದೆ, ಆತ್ಮನೇ ಬಲಕ್ಕೆ, ಆತ್ಮನೇ ಎಡಕ್ಕೆ, ಆತ್ಮನೇ ಇದೆಲ್ಲವೂ....ಆತ್ಮನಿಂದಲೇ ಪ್ರಾಣ, ಆತ್ಮನಿಂದಲೇ ಆಶೆ, ಆತ್ಮನಿಂದಲೇ ಸ್ಮರಣೆ, ಆತ್ಮನಿಂದಲೇ ಆಕಾಶ, ಆತ್ಮನಿಂದಲೇ ತೇಜಸ್ಸು, ಆತ್ಮನಿಂದಲೇ ಅಪ್ಪು, ಆತ್ಮನಿಂದಲೇ ಹೊರತೋರುವದು, ಆತ್ಮನಿಂದಲೇ ಮರೆಯಾಗುವದು, ಆತ್ಮನಿಂದಲೇ ಅನ್ನ, ಆತ್ಮನಿಂದಲೇ ಬಲ, ಆತ್ಮನಿಂದಲೇ ವಿಜ್ಞಾನ, ಆತ್ಮನಿಂದಲೇ ಧ್ಯಾನ, ಆತ್ಮನಿಂದಲೇ ಚಿತ್ತ, ಆತ್ಮನಿಂದಲೇ ಸಂಕಲ್ಪ, ಆತ್ಮನಿಂದಲೇ ಮನಸ್ಸು, ಆತ್ಮನಿಂದಲೇ ವಾಕ್ಕು, ಆತ್ಮನಿಂದಲೇ ನಾಮವು ಆತ್ಮನಿಂದಲೇ ಮಂತ್ರಗಳು, ಆತ್ಮನಿಂದಲೇ ಕರ್ಮಗಳು, ಇದೆಲ್ಲವೂ ಆತ್ಮನಿಂದಲೇ' (ಛಾಂ. ೭-೨೫-೨ ; ೨೬-೧)- ಎಂದು ಹೇಳಿರುವಂತೆ ನಮ್ಮೊಳಗೆ ಇರುವ ಪರಮಪುರುಷನಾದ ಕ್ಷೇತ್ರಜ್ಞನೇ ಸರ್ವವೂ, ಸರ್ವಾತ್ಮಕನೂ ಆಗಿರುತ್ತಾನೆ- ಎಂದು ತಿಳಿದವನು ಬ್ರಹ್ಮಸಂಪತ್ತಿಯನ್ನು ಪಡೆದುಕೊಳ್ಳುತ್ತಾನೆ.

# ೪೦. ಜ್ಞಾನಸಾಧನಗಳು

(10—9—69)

ಉಪನಿಷತ್ತುಗಳಲ್ಲಿರುವ ತತ್ತ್ವಜ್ಞಾನದ ಸಾರವನ್ನೆಲ್ಲ ಒಳಗೊಂಡಿರುವ ಭಗವದ್ಗೀತೆಯ ಅಧ್ಯಾಯವು ಯಾವುದೆಂದು ಕೇಳಿದರೆ, ಹದಿಮೂರನೆಯ ಅಧ್ಯಾಯವೇ ಎಂದು ಹೇಳಬೇಕು. ಅವಕಾಶವು ಸಿಕ್ಕಿದರೆ ಈ ಅಧ್ಯಾಯವನ್ನೇ ಸವ್ಯಾಖ್ಯಾನವಾಗಿ ಬರೆದು ಪ್ರಕಟಿಸಬೇಕೆಂಬುದು ನನ್ನ ಆಶೆ.

ಈಗ್ಗೆ ಜನರು ಬುದ್ಧಿಪ್ರಧಾನರು. ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಪುರುಷೋತ್ತಮವಿಚಾರವನ್ನು ಮಾಡಿದೆ; ಏಳರಲ್ಲಿ ಪರಾಪರಪ್ರಕೃತಿಗಳ ನಿರೂಪಣೆ, ಹದಿಮೂರನೆಯ ಅಧ್ಯಾಯದಲ್ಲಿ ಕ್ಷೇತ್ರಕ್ಷೇತ್ರಜ್ಞವಿವೇಕ– ಹೀಗೆ ನಾವು ಸಂಕ್ಷೇಪಿಸಿ ಹೇಳಿಕೊಳ್ಳುತ್ತೇವೆ. ಆದರೆ ಇದೆಲ್ಲ ಚುಟಿಗೆಚಪ್ಪರ. 'ಹೀಗೊಂದು ಗಳು' ಹಾಗೊಂದು ಗಳು– ಹಾಕಿ ಮೇಲೆ ಸೋಗೆಹೊದಿಸಿದರೆ ಚಪ್ಪರವಾಯಿತು' ಎಂತ ಚುಟಿಗೆಹಾಕಿದಮಾತ್ರದಿಂದ ನಿಜವಾದ ಚಪ್ಪರವಾದೀತೆ ? 'ಅಧ್ಯಾತ್ಮಜ್ಞಾನವು ಇಂದ್ರಿಯಗಳಿಗೆ ನಿಲುಕುವದಲ್ಲ, ಅಧ್ಯಾತ್ಮತತ್ತ್ವವು ಇಂದ್ರಿಯಾತೀತ'ಎಂದು ಬಾಯಲ್ಲಿ ಹೇಳುತ್ತಿದ್ದರೆ ಅಧ್ಯಾತ್ಮಜ್ಞಾನವಾಗಲಾರದು. ಒಮ್ಮೆ ಸ್ತ್ರೀಯರ ಪ್ರೌಢಶಾಲೆಯಲ್ಲಿ ಇನ್‌ಸ್ಪೆಕ್ಟರು ಬಂದಾಗ ಪಾಕಶಾಸ್ತ್ರಜ್ಞಾನದ ಪರೀಕ್ಷೆಯಾಯಿತು. ಹುಡುಗಿಯರಿಗೆ 'ಒಂದು ಬಟ್ಟಲು ಕಾಫಿಯನ್ನು ಮಾಡಿರಿ' ಎಂದು ಪರೀಕ್ಷಕರು ಹೇಳಲು ವಿದ್ಯಾರ್ಥಿನಿಯರು ಕಾಫಿಯನ್ನೇನೋ ಬೇಗ ಮಾಡಿದರು. ಅದನ್ನು ಸೋಸಿಕೊಡುವದಕ್ಕೆಂದು ಹೊರಟಾಗ ಆ ಪಾತ್ರೆಯನ್ನು ಬಟ್ಟೆಯಲ್ಲಿ ಹಿಡಿದುಕೊಳ್ಳುವದನ್ನು ಮರೆತುಬಿಟ್ಟಿದ್ದರಿಂದ ಕೈಸುಟ್ಟುಕೊಂಡು ಕಾಫಿಯನ್ನು ಚೆಲ್ಲಿಬಿಟ್ಟರು. ಆಗ ಇನ್‌ಸ್ಪೆಕ್ಟರು 'ಕಷಾಯವನ್ನಿಟ್ಟಿರುವ ಪಾತ್ರೆಯುಅಲ್ಯುಮಿನಿಯಮ್ ಪಾತ್ರೆಯಾದರೆ ಬಟ್ಟೆಯಿಲ್ಲದೆ ಹಿಡಿದುಕೊಳ್ಳಬಾರದೆಂದು ನಿಮ್ಮ ಪುಸ್ತಕದಲ್ಲಿ ಬರೆದಿಲ್ಲವೇನೊ !' ಎಂದು ಹಾಸ್ಯಮಾಡಿದರಂತೆ ! ಶಾಸ್ತ್ರಪಾಠವೇ ಬೇರೆ, ಅಡುಗೆಯ ಕಲೆಯೇ ಬೇರೆ: ಹೀಗೆಯೇ ಗೀತಾಪಾರಾಯಣವೇ ಬೇರೆ, ಗೀತೋಕ್ತಜ್ಞಾನವನ್ನು ಸಂಪಾದಿಸುವ ಅಭ್ಯಾಸದ ಕ್ರಮವೇ ಬೇರೆ !

'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ' ಎಂದಿರುವಂತೆ ನಮ್ಮನಮ್ಮ ಸ್ಥಾನಕ್ಕೆ ಉಕ್ತವಾಗಿರುವ ಕರ್ಮವನ್ನು ಈಶ್ವರನ ಅಭ್ಯರ್ಚನೆ ಎಂಬ ಭಾವನೆಯಿಂದ ಮಾಡಿ ಅಂತಃಕರಣಶುದ್ಧಿಯನ್ನು ಮೊದಲು ಸಂಪಾದಿಸಿಕೊಳ್ಳಬೇಕು. ಆ ಬಳಿಕ ಜ್ಞಾನಸಹಕಾರಿಕಾರಣಗಳೆಂದು ಗೀತೆಯಲ್ಲಿ ಹೇಳಿರುವ ಸಾಧನಗಳ ಅಭ್ಯಾಸವನ್ನು ಮಾಡಿ ಮನಸ್ಸಿಗೆ ಸಂಸ್ಕಾರವನ್ನುಂಟುಮಾಡಿಕೊಂಡಿರಬೇಕು.

ಭಗವಂತನು ಕ್ಷೇತ್ರವನ್ನು :

ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।
ಇನ್ದ್ರಿಯಾಣಿ ದಶೈಕಂ ಚ ಪಞ್ಚ ಚೇನ್ದ್ರಿಯಗೋಚರಾಃ ॥
ಇಚ್ಛಾ ದ್ವೇಷಃ ಸುಖಂ ದುಃಖಂ ಸಙ್ಘಾತಶ್ಚೇತನಾ ಧೃತಿಃ ।
ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ಗೀ. ೧೩–೫,೬

ಎಂದು ವಿಸ್ತರಿಸಿ ಹೇಳಿದಬಳಿಕ ಕ್ಷೇತ್ರಜ್ಞನ ತತ್ತ್ವವನ್ನು ತಿಳಿಯಿಸಬೇಕಾಗಿತ್ತಷ್ಟೆ? ಆದರೆ ಅವಕ್ಕೆ ಬೇಕಾಗಿರುವ ಸಾಧನಗಳಿಲ್ಲದೆ ಅದನ್ನು ಅರಿತುಕೊಳ್ಳುವವರಾಗಲಾರರೆಂಬ ಕಾರಣದಿಂದ ಸಾಧನಗಳನ್ನು ಮೊದಲು ಹೇಳಿರುತ್ತಾನೆ :

ಅಮಾನಿತ್ವಮದಮ್ಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥
ಇನ್ದ್ರಿಯಾರ್ಥೇಷು ವೈರಾಗ್ಯಮನಹಙ್ಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥
ಅಸಕ್ತಿರನಭಿಷ್ವಙ್ಗಃ ಪುತ್ರದಾರಗೃಹಾದಿಷು ॥
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥
ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥
ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥
ಗೀ. ೧೩–೭ರಿಂದ ೧೧ ವರೆ

ಈ ಇಪ್ಪತ್ತು ಸಾಧನಗಳೂ ಬೇಕೆ ? ಕ್ಷೇತ್ರಜ್ಞನನ್ನು ಬಿಡಿಸಿ ಅರಿತುಕೊಳ್ಳುವದಕ್ಕೆ ಇದಕ್ಕಿಂತ ಸುಲಭವಾದ ಉಪಾಯವಿಲ್ಲವೆ ?–ಎಂದು ಯಾರಾದರೂ ಕೇಳಬಹುದು. ಹಿಂದಕ್ಕೆ ಗ್ರೀಸ್‌ದೇಶದಲ್ಲಿ ಒಬ್ಬ ದೊರೆಯು ಯೂಕ್ಲಿಡ್ ಎಂಬ ಗಣಿತಜ್ಞನನ್ನು 'ರೇಖಾಗಣಿತಜ್ಞಾನಕ್ಕೆ ನಮ್ಮಂಥವರು ಅನುಸರಿಸುವದಕ್ಕೆ ಸುಲಭತರವಾದ ಮಾರ್ಗವು ಯಾವದಾದರೂ ಇದೆಯೆ ?' ಎಂದು ಕೇಳಿದ್ದಕ್ಕೆ 'ಪ್ರಭುವೆ, ರೇಖಾಗಣಿತಕ್ಕೆ ರಾಜಮಾರ್ಗವೆಂಬುದು ಬೇರೆಯಿಲ್ಲ' ಎಂದನಂತೆ ! ಅಧ್ಯಾತ್ಮಜ್ಞಾನಕ್ಕೆ ಅಧ್ಯಾತ್ಮಸಾಧನಗಳೇ ಬೇಕು; ಬೇರೆ ಯಾವ ಸೀಳುಹಾದಿಯೂ ಇರುವದಿಲ್ಲ. ಕ್ಷೇತ್ರಜ್ಞನು ಪರಮಾತ್ಮನಾದ್ದರಿಂದ ಅವನ ಜ್ಞಾನಕ್ಕೆ ಅಧ್ಯಾತ್ಮಸಾಧನವು ಅತ್ಯವಶ್ಯ.

ಈ ಸಾಧನಗಳ ವಿಷಯಕ್ಕೆ ಶ್ರೀಶಂಕರಭಗವತ್ಪಾದರವರು ಹೀಗೆಂದು ಅವತರಣಿಕೆಯನ್ನು ಬರೆದಿರುತ್ತಾರೆ :

ಅಧುನಾ ತು ತಜ್ಜ್ಞಾನಸಾಧನಗಣಮ್ ಅಮಾನಿತ್ವಾದಿಲಕ್ಷಣಮ್ ಯಸ್ಮಿನ್ ಸತಿ ತಜ್ಜ್ಞೇಯವಿಜ್ಞಾನೇ ಯೋಗ್ಯೋಽಧಿಕೃತೋ ಭವತಿ, ಯತ್ಪರಃ ಸಂನ್ಯಾಸೀ 'ಜ್ಞಾನನಿಷ್ಠ' ಉಚ್ಯತೇ ತಮ್ ಅಮಾನಿತ್ವಾದಿಗಣಮ್— ಜ್ಞಾನಸಾಧನತ್ವಾತ್ ಜ್ಞಾನಶಬ್ದವಾಚ್ಯಂ ವಿದಧಾತಿ ಭಗವಾನ್ ॥

"ಕ್ಷೇತ್ರವನ್ನು ವಿಸ್ತರಿಸಿದ್ದಾಯಿತು; ಕ್ಷೇತ್ರಜ್ಞನ ಪರಮಾರ್ಥಸ್ವರೂಪವನ್ನು, ಭಗವಂತನೇ 'ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ' ಎಂದು ಮುಂದೆ ಹೇಳುವನು. ಈಗ ಯಾವದನ್ನು ಅರಿತುಕೊಂಡರೇ ಅಮೃತನಾಗುವನೋ ಆ ಜ್ಞೇಯವನ್ನು ಅರಿಯುವ ಜ್ಞಾನಕ್ಕೆ ಸಾಧನವಾಗಿರುವ ಅಮಾನಿತ್ವಾದಿಗಳ ಗುಂಪನ್ನು—ಯಾವದಿದ್ದರೇ ಜ್ಞೇಯವನ್ನು ಅನುಭವಕ್ಕೆ ತಂದುಕೊಳ್ಳುವದಕ್ಕೆ ಯೋಗ್ಯನಾದ ಅಧಿಕಾರಿಯಾಗುತ್ತಾನೋ, ಯಾವದರಲ್ಲಿಯೇ ತತ್ಪರನಾಗಿರುವ ಸಂನ್ಯಾಸಿಯನ್ನು 'ಜ್ಞಾನನಿಷ್ಠ' ನೆನ್ನುವರೋ ಆ ಅಮಾನಿತ್ವಾದಿಗಣವನ್ನು—ಭಗವಂತನು ವಿಧಿಸುತ್ತಿದಾನೆ. ಇವು ಜ್ಞಾನಕ್ಕೆ ಸಾಧನವಾಗಿರುವದರಿಂದ ಇವನ್ನೂ ಜ್ಞಾನವೆಂಬ ಶಬ್ದದಿಂದ ಕರೆದಿರುತ್ತದೆ."

ಈ ಅವತರಣಿಕೆಯಲ್ಲಿರುವ ಕೆಲವು ಶಬ್ದಗಳ ಅರ್ಥವನ್ನು ವಿಚಾರಮಾಡಿಕೊಳ್ಳುವದು ಅವಶ್ಯ. ಅಮಾನಿತ್ವಾದಿಗಳು 'ಜ್ಞಾನ'ಶಬ್ದಕ್ಕೆ ವಾಚ್ಯಾರ್ಥವಾಗಿಲ್ಲದಿರುವದಕ್ಕೆ ಆ ಶಬ್ದವನ್ನು ಇಲ್ಲಿ ಕರಣಾರ್ಥದಲ್ಲಿ ಪ್ರಯೋಗಿಸಿರುವದೇ ಕಾರಣ. ಜ್ಞಾನವೆಂಬ ಕೃದಂತವನ್ನು ಭಾವಾರ್ಥದಲ್ಲಿ ಪ್ರಯೋಗಿಸಿದಾಗ ಅರಿವು ಎಂದು ಅರ್ಥವಾಗುತ್ತದೆ; ಕ್ಷೇತ್ರಜ್ಞನ ಜ್ಞಾನಕ್ಕೆ ಅಮಾನಿತ್ವಾದಿಗಳು ಸಾಧನವಾಗಿರುವದರಿಂದ('ಜ್ಞಾಯತೇ ಅನೇನ ಇತಿ ಜ್ಞಾನಮ್' ಎಂದು ಕರಣಾರ್ಥದಲ್ಲಿ ಅವನ್ನು ಜ್ಞಾನಶಬ್ದದಿಂದ ಕರೆದಿರುತ್ತದೆ. ಈ ಜ್ಞಾನ(ಸಾಧ)ನವು ಇದ್ದರೇ ಕ್ಷೇತ್ರಜ್ಞಜ್ಞಾನಕ್ಕೆ ಬೇಕಾದ ಯೋಗ್ಯತೆಯಿದ್ದಂತೆ ಆಯಿತು. ಇದೂ ಅಲ್ಲದೆ ಮುಮುಕ್ಷುವಾದ ಸಂನ್ಯಾಸಿಯು ಇವುಗಳನ್ನು ತತ್ಪರತೆಯಿಂದ ಅಭ್ಯಾಸಮಾಡಿದರೆ ಮಾತ್ರವೇ ಅವುಗಳಿಂದ ಅವನ ಅರಿವು ಪಕ್ವವಾಗಿ ನಿಜವಾದ ಬ್ರಹ್ಮಜ್ಞಾನವು ಫಲಿಸುತ್ತದೆ. ಹೀಗೆ ತಾತ್ಪರ್ಯದಿಂದ ಮಾಡುವ ಅಭ್ಯಾಸಕ್ಕೆ 'ಜ್ಞಾನನಿಷ್ಠೆ' ಎಂದು ಹೆಸರು; ಹಾಗೆ ಮಾಡುವ ಅಧಿಕಾರಿಯನ್ನು 'ಜ್ಞಾನನಿಷ್ಠ'ನೆಂದು ಕರೆಯುತ್ತಾರೆ. "ಕರ್ಮನಿಷ್ಠ, ತಪೋನಿಷ್ಠ" ಮುಂತಾದ ಶಬ್ದಗಳಂತೆಯೇ ಈ 'ಜ್ಞಾನನಿಷ್ಠ'ಶಬ್ದದ ವ್ಯುತ್ಪತ್ತಿಯನ್ನೂ ಅರಿಯಬೇಕು. 'ಜ್ಞಾನನಿಷ್ಠೆ' ಎಂಬುದು ಪರ್ಯವಸಾನದಲ್ಲಿ ನೆಲೆನಿಲ್ಲುವ ಅನುಭವಕ್ಕೂ ಹೆಸರಾಗುತ್ತದೆ. ಮುಮುಕ್ಷುವಾದವನು ಜ್ಞಾನಸಾಧನಗಳನ್ನು ಸರಿಯಾಗಿ ಮಾಡಿ

ವರೆ ಅವನಿಗೆ ನಿಜವಾದ ಕ್ಷೇತ್ರಜ್ಞಜ್ಞಾನದ ಅನುಭವವುಂಟಾಗುತ್ತದೆ. ಇದನ್ನೇ ಹದಿನೆಂಟನೆಯ ಅಧ್ಯಾಯದಲ್ಲಿ 'ನಿಷ್ಠಾ ಜ್ಞಾನಸ್ಯ ಯಾ ಪರಾ' (ಗೀ. ೧೮-೫೦) ಎಂದು ಭಗವಂತನು ಪರಾಮರ್ಶಿಸಿರುತ್ತಾನೆ. ಆ ನಿಷ್ಠೆಯು -ಊಟಮಾಡಿದವನಿಗೆ ತೃಪ್ತಿಯಾಗುವಂತೆ-ತಾನೇ ಆಗುವದಾದ್ದರಿಂದ ಅದನ್ನು ಮತ್ತೊಬ್ಬರು ಹೇಳಿಕೊಡುವದಕ್ಕಾಗುವದಿಲ್ಲ, ಅದಕ್ಕೆ ಸಾಧನವನ್ನು ಮಾತ್ರ ಇಲ್ಲಿ ಹೇಳಿರುತ್ತದೆ. ಇದರಲ್ಲಿ ತತ್ಪರನಾದವನನ್ನು "ಜ್ಞಾನನಿಷ್ಠನು" ಎಂದು ಕರೆಯುತ್ತಾರೆ. (ಒಬ್ಬ ಮಹನೀಯರು ತಮ್ಮ ಶಿಷ್ಯನಿಗೆ ಒಂದೆರಡು ಪಕ್ಷಗಳಲ್ಲಿ ಜ್ಞಾನನಿಷ್ಠೆಯನ್ನು ಮಾಡಿಸಿಕೊಡುವೆನೆಂದು ಹೇಳಿದರೆಂದು ನನಗೆ ತಿಳಿದು ಬಂದಿತು. ಜ್ಞಾನಾಭ್ಯಾಸರೂಪವಾದ ನಿಷ್ಠೆಯನ್ನುಕೂಡ ಒಂದೆರಡು ಪಕ್ಷಗಳಲ್ಲಿ ಹೇಳಿಕೊಡುವೆನೆಂದಿದ್ದರೆ ಅದು ದಿಟ್ಟರೇಸರಿ. ಫಲವಾದ ಜ್ಞಾನನಿಷ್ಠೆ ಯಂತೂ ಪುರುಷತಂತ್ರವೇ ಅಲ್ಲವೆಂಬುದು ಸ್ಫುಟವಾಗಿರುತ್ತದೆ). ಅಮಾನಿತ್ವಾದಿ ಸಾಧನಗಳು ಯಾರಿಗೆ ಅಳವಟ್ಟಿಲ್ಲವೋ, ಜನರು ಈ ಸಾಧನಗಳ ಅವಶ್ಯಕತೆ ಯನ್ನು ಒತ್ತಿಹೇಳದೆ ತತ್ತ್ವಜ್ಞಾನೋಪದೇಶವನ್ನು ಮಾಡುವೆನೆಂದು ಒದರಿದರೂ ಅಂಥವರನ್ನು ಮೋಸಗಾರರೆಂದು ತಿಳಿಯಬೇಕು. ಅಂಥ ಶಕ್ತರಿಗೆ ಲೌಕಿಕವಾದ ವಿವೇಕಜ್ಞಾನವೇ ಇರುವದಿಲ್ಲ; ಇನ್ನು ಅಧ್ಯಾತ್ಮಜ್ಞಾನದ ಸೋಂಕಾದರೂ ಎಲ್ಲಿಂದ ಬರಬೇಕು ? ಇಲ್ಲಿ ನಾನು ಅಮಾನಿತ್ವಾದಿಸಾಧನಗಳ ಸ್ವರೂಪವನ್ನೆಲ್ಲ ವಿವರಿಸುವದು ಶಕ್ಯವಿಲ್ಲ; * ಕೆಲವು ಸಾಧನಗಳ ಸ್ವರೂಪವನ್ನು ಮಾತ್ರ ಇಲ್ಲಿ ನಿರ್ದೇಶಮಾಡುವೆನು.

ಅಮಾನಿತ್ವಮ್- ಈ ಶಬ್ದಕ್ಕೆ ಮಾನಿತ್ವವು-ತನ್ನನ್ನುತಾನೇ ಹೆಚ್ಚಿನವ ನೆಂದು ತಿಳಿಯುವ ದುರಭಿನಿವೇಶವು- ಇಲ್ಲದಿರುವಿಕೆ ಎಂಬುದು ಅಕ್ಷರಾರ್ಥವು. ಮಾನಿತ್ವಕ್ಕೆ ವಿರುದ್ಧವಾಗಿ-ನಾನೇನು ಬಲ್ಲೆನು? ನಾನೆಷ್ಟರವನು? ಬೇರೆಬೇರೆಯ ವಿಷಯಗಳಲ್ಲಿ ನನ್ನನ್ನು ಮೀರಿಸಿರುವ ಮಹನೀಯರು ಎಷ್ಟೋ ಜನರು ಇರು ತ್ತಾರೆ-ಎಂಬ ವಿನಯವನ್ನು ಸಂಪಾದಿಸಿರುವದನ್ನು "ಅಮಾನಿತ್ವ"ವೆಂದು ಕರೆ ಯುವರು. ಈ ಸಾಧನವು ನಮ್ಮ ಸ್ವರೂಪವನ್ನು ಒಂದಿಷ್ಟು ಮನಸ್ಸಿಗೆ ಹತ್ತುವಂತೆ ಮಾಡುತ್ತದೆ. ವಿಷ್ಣುಸಹಸ್ರನಾಮದಲ್ಲಿ "ಅಮಾನೀ ಮಾನ ದೋ ಮಾನ್ಯೋ" ಎಂದು ಭಗವಂತನನ್ನು ವರ್ಣಿಸಿರುವದರಿಂದ ಇದರ ಪರಾಕಾಷ್ಠೆಯು ಸಾಮಾನ್ಯರಲ್ಲಿರುವ ಸಂಭವವೇ ಇಲ್ಲವೆನ್ನಬಹುದು. ಹೀಗಿರು ವದರಿಂದ ತಾವು ಜ್ಞಾನನಿಷ್ಠರು ಎಂದು ತಿಳಿದುಕೊಂಡು ಆತ್ಮಶ್ಲಾಘನೆಯನ್ನು

* ಶ್ರೀಗಳವರ ಕೃತಿಯಾದ 'ಭಗವದ್ಗೀತೆಯ ಉಪನ್ಯಾಸ'ಗಳಲ್ಲಿ ಇವುಗಳ ವಿವರೆ ವನ್ನು ವಾಚಕರು ಕಾಣಬಹುದು, ಸಂ. ಅ. ಪ್ರ.

ಅರಿತೋ ಅರಿಯದೆಯೋ ಮಾಡಿಕೊಳ್ಳದೆ ಇರುವ ಮಹನೀಯನು ಬಹುವಿರಳ.

ಅದಮ್ಭಿತ್ವಮ್—ಇದು ಸಂಕ್ಷಿಪ್ತವಾದ ಅಭಿಮಾನವನ್ನೂ ಅದರ ವಿರುದ್ಧವಾದ ಗುಣವನ್ನೂ ಹೇಳುತ್ತದೆ. ದಂಭವೆಂದರೆ ತಾನು ಧರ್ಮನಿಷ್ಠನೆಂಬುದನ್ನು ಹೊರಗೆ ತೋರಿಸಿಕೊಳ್ಳುತ್ತಿರುವುದೇ ಆಗಿದೆ. ಇವನು ಸತ್ಪುರುಷನು, ಧರ್ಮದ ತತ್ತ್ವವನ್ನು ಅರಿತಿರುವವನು— ಎಂಬುದನ್ನು ಯಾರು ತನ್ನ ನಡತೆಯಿಂದಲೋ ಅಥವಾ ತನ್ನ ಕಟ್ಟಿಕೊಳ್ಳುವ ಮಾತಿನಿಂದಲೋ ಅರಿಯಲಾಗದಂತೆ ಇರುವನೋ ಅವನೇ ಅದಂಭಿ.

ಅಹಿಂಸಾ— ಮನೋವಾಕ್ಕಾಯಗಳಿಂದ ಯಾವ ಪ್ರಾಣಿಗೂ ಪೀಡೆಯನ್ನುಂಟುಮಾಡುವ ಪ್ರವೃತ್ತಿಯಿಲ್ಲದೆ ದಯಾಳುವಾಗಿರುವುದೇ ಅಹಿಂಸೆ. 'ಅಹಿಂಸಾ ಪರಮೋ ಧರ್ಮಃ' ಎಂದು ಹೇಳಿಕೊಳ್ಳುತ್ತಾ ಸ್ವಪ್ರೀತಿಯಿಂದ ನಡೆಯುವವರನ್ನೂ ಮೂಕಪ್ರಾಣಿಗಳಿಗೂ ಅನವಶ್ಯವಾಗಿ ಕಿರುಕುಳವನ್ನುಂಟು ಮಾಡುತ್ತಿರುವವರನ್ನೂ ಅಹಿಂಸಾಪರರೆಂದು ಬಗೆಯುವಂತಿಲ್ಲ. ಗೃಹಸ್ಥರಾದವರಿಗೆ ಯಾವುದಾದರೊಂದು ನಿಮಿತ್ತದಿಂದ ಹಿಂಸೆಯನ್ನು ಮಾಡುವುದು ಅನಿವಾರ್ಯವಾಗಬಹುದು; ಆದರೂ ಬೇಕೆಂತ ಹಿಂಸೆಮಾಡದೆ ಅತ್ಯಲ್ಪಹಿಂಸೆಯನ್ನು ಮಾಡುವ ಸಂಕಲ್ಪವನ್ನು ಮಾಡಿಕೊಳ್ಳಬೇಕು. ಆದರೆ ಯತಿಯಾದವನು "ದೃಷ್ಟಿಪೂತಂ ನ್ಯಸೇತ್ ಪಾದಂ ವಸ್ತ್ರಪೂತಂ ಪಿಬೇಜ್ಜಲಮ್" (ಕಣ್ಣಿಟ್ಟುನೋಡಿ ಹೆಜ್ಜೆಹಾಕಬೇಕು, ವಸ್ತ್ರದಿಂದ ಶೋಧಿಸಿದ ನೀರನ್ನೇ ಕುಡಿಯಬೇಕು) ಎಂಬ ಉಕ್ತಿಯಂತೆ ಅನವಶ್ಯಕವಾಗಿ ಕ್ರಿಮಿಕೀಟಾದಿಗಳಿಗೆ ಕೂಡ ಹಿಂಸೆಯಾಗದಂತೆ ಪ್ರಯತ್ನಿಸುತ್ತಿರಬೇಕು. ಬಿರುನುಡಿಗಳನ್ನಾಡಬಾರದು; ಮನಸ್ಸಿನಲ್ಲಿ ಯಾರೊಬ್ಬರಿಗೂ ಕೇಡನ್ನು ಬಗೆಯಬಾರದು. ಹಿಂಸೆಗೆ ಬದಲಾಗಿ ಕರುಣೆಯನ್ನು ಸಾಧಿಸಬೇಕು.

ಕ್ಷಾನ್ತಿಃ—ಮತ್ತೊಬ್ಬರು ಎಷ್ಟೇ ಅಪರಾಧವನ್ನು ಮಾಡಿರಲಿ, ಅದನ್ನೆಲ್ಲ ಮನ್ನಿಸಿಬಿಡುವ ಸಹನೆ. ಇದನ್ನು ಅಳವಡಿಸಿಕೊಳ್ಳುವದಕ್ಕೆ ಕ್ರೋಧವು ಎದ್ದುಕೊಂಡಾಗಲೆಲ್ಲ, ಅದನ್ನು ಅಲ್ಲಲ್ಲಿಗೇ ತಡೆಗಟ್ಟುವ ಅಭ್ಯಾಸವಿರಬೇಕು. ಶ್ರೀಮದ್ರಾಮಾಯಣದಲ್ಲಿ ಕಾಕಾಸುರನು ಅಕ್ಷಮ್ಯವಾದ ಅಪರಾಧವನ್ನು ಮಾಡಿದ್ದರೂ ಶ್ರೀರಾಮಚಂದ್ರನು ಅವನು ಮತ್ತೆ ಶರಣುಬಂದಾಗ ಅವನ ದೋಷವನ್ನು ಸ್ವಲ್ಪವೂ ಎತ್ತದೆ ಕ್ಷಮಿಸಿದ್ದನ್ನು ಮನದಂದುಕೊಳ್ಳುವದು ಈ ಶಬ್ದದ ಅರ್ಥವನ್ನು ಮನದಟ್ಟುಮಾಡಿಕೊಳ್ಳುವದಕ್ಕೆ ಸಹಕಾರಿಯಾಗಿರುವದು. ಮತ್ತೊಬ್ಬನು ನಮ್ಮನ್ನು ಏನೇ ಅನ್ನಲಿ, ತಮ್ಮ ಬಗ್ಗೆ ಯಾವ ಅಪರಾಧವನ್ನೇ ಮಾಡಿರಲಿ, ತಾಳ್ಮೆಯಿಂದ ಮನ್ನಿಸಿ ಅವನಿಗೆ ಅಭಯವನ್ನು ಕೊಡುವ ಕ್ಷಮಾಗುಣವು ನಮ್ಮನ್ನು ಕ್ಷಾಂತಿಯಲ್ಲಿ ನೆಲೆನಿಲ್ಲಿಸುವದಕ್ಕೆ ದೊಡ್ಡ ಸಹಕಾರಿ.

ಆರ್ಜವವು—ಮನೋವಾಕ್ಕರ್ಮಗಳಲ್ಲಿ ಏಕದೇಶವಾದ ವೃತ್ತಿಯಿರುವದು ಈ ಗುಣವು. ಗೃಹಸ್ಥರಿಗೆ ಅನೇಕ ಕಾರಣಗಳಿಂದ ವಕ್ರಬುದ್ಧಿಯು ಬರುತ್ತದೆ. ತಮ್ಮ ಮನಸ್ಸಿನಲ್ಲಿದ್ದದ್ದನ್ನು ಹೇಳಿಬಿಡುವದು ಅನೇಕ ವೇಳೆಯಲ್ಲಿ ಅವರಿಗೆ ಕಷ್ಟವಾಗುತ್ತದೆ. ಆದರೆ ಅಮಾಯಿಕವಾದ ವೃತ್ತಿಯಿಂದ ನಡೆಯುವದು ಮುಮುಕ್ಷುವಿಗೆ ಅತ್ಯವಶ್ಯ. ಪರಿವ್ರಾಜಕನಾದವನಿಗೆ ತನ್ನ ಗುಟ್ಟೆಂಬುದು ಯಾವದೂ ಇಲ್ಲದ್ದರಿಂದ ತ್ರಿಕರಣಗಳಲ್ಲಿಯೂ ಒಂದೇ ಬಗೆಯಾದ ವರ್ತನೆಯಿಂದ ಇರುವದು ಸಾಧ್ಯವಾಗುತ್ತದೆ; ಇದರಿಂದ ಅಂತಃಕರಣವು ಪರಿಶುದ್ಧವಾಗುತ್ತದೆ.

ವಿಷಯಗಳಲ್ಲಿ ವಿರಕ್ತನಾಗಿರುವದು, ಅನಹಂಕಾರ. ಸಂಸಾರದಲ್ಲಿ ಜನ್ಮಮೃತ್ಯುಜರಾವ್ಯಾಧಿದುಃಖಗಳೆಂಬ ದೋಷಗಳನ್ನು ಕಂಡು ಅದನ್ನೇ ಮನಸ್ಸಿನಲ್ಲಿ ಹೊರಳಾಡಿಸುತ್ತಿರುವದು— ಇವು ನಿತ್ಯಾನಂದಸ್ವರೂಪನಾದ ಭಗವಂತನ ಜ್ಞಾನಕ್ಕೆ ದೊಡ್ಡ ಸಾಧನಗಳು.

ಇಷ್ಟಾನಿಷ್ಟಗಳು ಬಂದೊದಗಿದಾಗಲೂ ಮನಸ್ಸಿನ ಸಮತೆಯನ್ನು ಕಾಯ್ದುಕೊಳ್ಳುವ ದ್ವಂದ್ವಸಹಿಷ್ಣುತೆಯು ಮನಸ್ಸಿನ ಸಮಸ್ಥಿತಿಗೆ ಕಾರಣವೆಂದು ಹೇಳಬೇಕಾದದ್ದೇ ಇಲ್ಲ. ಆಚಾರ್ಯೋಪಾಸನೆ ಮತ್ತು ಭಗವಂತನಲ್ಲಿ ಅವ್ಯಭಿಚರಿತವಾದ ಭಕ್ತಿ—ಎಂಬೀ ಎರಡು—ಈ ಸಾಧನಗಳೊಳಗೆ ಬಹಳ ಮುಖ್ಯವಾದವುಗಳೆಂದು ಬೇರೆಯಾಗಿ ಹೇಳಬೇಕಾಗಿಲ್ಲ.

ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ॥ ಶ್ವೇ. ೬-೨೩

ಯಾವಾತನಿಗೆ ಭಗವಂತನಲ್ಲಿ ಪರಮಭಕ್ತಿಯಿರುವದೋ, ಭಗವಂತನಲ್ಲಿ ಎಷ್ಟುಮಟ್ಟಿಗೋ ಅಷ್ಟುಮಟ್ಟಿಗೇ ಆಚಾರ್ಯನಲ್ಲಿಯೂ ಭಕ್ತಿಯಿರುವದೋ ಆತನಿಗೇ ಉಪನಿಷತ್ತತ್ತ್ವಗಳು ಮನಸ್ಸಿನಲ್ಲಿ ಸ್ಫುಟವಾಗಿ ಹೊಳೆಯುವವು—ಎಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ. ಭಗವಂತನ ತತ್ತ್ವವನ್ನು ಅನುಭವಕ್ಕೆ ತಂದುಕೊಳ್ಳುವದೇ ನಿಜವಾದ ಜ್ಞಾನ ; ಆದ್ದರಿಂದ ಭಗವಂತನಲ್ಲಿ ಭಕ್ತಿಯಿಲ್ಲದವನಿಗೆ ಎಂದಿಗೂ ಅವನ ತತ್ತ್ವದ ಅರಿವು ಉಂಟಾಗಲಾರದೆಂದು ಸುಸ್ಪಷ್ಟವಾಗಿರುತ್ತದೆ. ಇನ್ನು ಆಚಾರ್ಯನೆಂದರೆ, ಭಗವಂತನ ಸಾಕ್ಷಾನ್ಮೂರ್ತಿಯೇ. ಸದ್ಗುರುವಿನ ಹೃದಯದಲ್ಲಿ ನೆಲೆನಿಂತಿರುವ ಭಗವಂತನ ಅನುಗ್ರಹವು ಆ ಗುರುವಿನ ಪ್ರಸನ್ನತೆಯಿಂದಲೇ ಆದೀತು. ಆಚಾರ್ಯನ ಬಳಿಯಲ್ಲಿಯೇ ಇರುವ ಜಿಜ್ಞಾಸುವಾದ ಅಂತೇವಾಸಿಗೆ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವು ಮಾರುಹೊಳೆದು ತೋರುವಂತೆ ತನ್ನ ಗುಣದೋಷಗಳ ಸ್ಥಿತಿಯು ಮನದಟ್ಟಾಗುವದು. ಆಚಾ-ರ್ಯನಲ್ಲಿ ಭಕ್ತಿಯು ಎಷ್ಟುಮಟ್ಟಿಗೆ ಹೆಚ್ಚುವದೋ ಅಷ್ಟುಮಟ್ಟಿಗೆ ಅವರ

ವಿಜ್ಞಾನವು ಶಿಷ್ಯನ ಹೃದಯಕ್ಕೆ ಇಳಿದುಬಂದಂತೆ ಶಕ್ತಿಪಾತವಾಗುತ್ತದೆ. ಸದ್ಗುರುವನ್ನು 'ನೀನು, ತಾನು' ಎಂದು ಧಿಕ್ಕರಿಸಿ ಮಾತನಾಡುವದು, ಅಸದ್ದೃಷ್ಟಿಯಿಂದ ಕಾಣುವದು, ಅಸತ್ಕಾರಪೂರ್ವಕವಾದ ನಡತೆ– ಇವು ಜಿಜ್ಞಾಸುವಿನ ಹೃದಯದ ಸಂಕೋಚಪ್ರವೃತ್ತಿಗೆ ಕಾರಣವಾಗುವವು. ಆದ್ದರಿಂದ ಯಾವ ಕಾರಣದಿಂದಲೂ ಗುರುವಿನ ಬಗೆಗೆ ಅಶ್ರದ್ಧೆಯನ್ನು ಹೊಂದಬಾರದು. ಗುರುಭಕ್ತಿಯಿಂದ ಪರಮಾತ್ಮನಲ್ಲಿ ಭಕ್ತಿಯು ಉಕ್ಕೇರುವದು, ಜ್ಞಾನವು ಸುಲಭವಾಗಿ ವಶವಾಗುವದು.

ಕಟ್ಟಕಡೆಯಲ್ಲಿ ಹೇಳಿರುವ–

ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥
ಗೀ. ೧೩-೧೧

ಎಂಬ ಶ್ಲೋಕದ ಅರ್ಥವನ್ನಂತೂ ಎಂದಿಗೂ ಮರೆಯಬಾರದು. ಆತ್ಮಜ್ಞಾನದ ವಿಚಾರದಲ್ಲಿಯೇ ಯಾವಾಗಲೂ ನಿರತನಾಗಿರುವದು ಅತ್ಯವಶ್ಯ; ಕುತೂಹಲಿಗಳಾದವರು ಆಗೊಂದು ಸಲ, ಈಗೊಂದು ಸಲ, ವಿಚಾರಮಾಡುವಂತೆ ನಾವು ಮಾಡಿದರೆ ಅದು ಯಾವ ಕೆಲಸಕ್ಕೂ ಬರಲಾರದು. ಅಮಾನಿತ್ವಾದಿಸಾಧನಗಳನ್ನು ಭಾವನೆಮಾಡಿದ್ದು ಪರಿಪಕ್ವವಾದರೆ ತತ್ತ್ವಜ್ಞಾನವು ಕಾಣಿಸಿಕೊಳ್ಳುವದು. ತತ್ತ್ವಜ್ಞಾನದ ಅರ್ಥವಾದ ಮೋಕ್ಷವನ್ನು ಆಲೋಚನೆಮಾಡುತ್ತಿರುವದರಿಂದಲೇ ಅದರ ಸಾಧನಗಳನ್ನು ಅನುಷ್ಠಾನಮಾಡುವದರಲ್ಲಿ ಮನಸ್ಸು ತೊಡಗುವದು.

ಇದುವರೆಗೆ ಹೇಳಿರುವ ಅಮಾನಿತ್ವಾದಿಗಳೇ ಜ್ಞಾನಕ್ಕೆ ಸಾಧನಗಳಾಗಿರುವದರಿಂದ ಇವಕ್ಕೆ ವಿರುದ್ಧವಾದ ಮಾನಿತ್ವಾದಿಗಳನ್ನು ಅಜ್ಞಾನವೆಂದು ಇಲ್ಲಿ ಕರೆದಿರುತ್ತದೆ. ಮಾನಿತ್ವಾದಿಗಳನ್ನು ಯತ್ನಪೂರ್ವಕವಾಗಿ ಬಿಡುವದು, ಅವುಗಳ ಪ್ರತಿಪಕ್ಷವಾದ ಸಾಧನವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡುತ್ತಿರುವದು– ಈ ಗುಣಗಳಿಗೆ ಆಶ್ರಯನಾಗಿರುವ ಭಗವಂತನನ್ನೇ ಸ್ಮರಿಸುವದು– ಈ ಮೂರು ಅಂಶಗಳೂ ಇಲ್ಲಿ ಹೇಳಿರುವ ಒಂದೊಂದು ಸಾಧನದ ವಿಷಯಕ್ಕೂ ಇರುವಂತೆ ಸಾಧಕರು ನೋಡಿಕೊಳ್ಳುತ್ತಿರಬೇಕು.

ಶಾಸ್ತ್ರೋಕ್ತವಾದ ಕರ್ಮಗಳಿಂದ ಚಿತ್ತಶುದ್ಧಿಯನ್ನು ಪಡೆದುಕೊಂಡಮೇಲೆ ಸರ್ವಕರ್ಮಸಂನ್ಯಾಸಪೂರ್ವಕವಾಗಿ ಈ ಸಾಧನಗಳನ್ನು ಎಡೆಬಿಡದೆ ಮಾಡುತ್ತಾ ಮನಸ್ಸನ್ನು ಭಗವಂತನಲ್ಲಿಯೇ ನಿಲ್ಲಿಸಿಕೊಂಡವರೇ ತತ್ತ್ವಜ್ಞಾನಕ್ಕೆ ಅಧಿಕಾರಿಗಳು –ಎಂದು ಭಗವಂತನು ಇಲ್ಲಿ ಸ್ಪಷ್ಟವಾಗಿ ಹೇಳಿರುತ್ತಾನೆ.

# ೪೧. ಜ್ಞೇಯವಾದ ಪರಮಾರ್ಥತತ್ತ್ವ

(11—9—69)

ಈವರೆಗೆ ಹೇಳಿರುವ ಅಮಾನಿತ್ವಾದಿಗುಣಗಳಿಂದ ಅರಿತುಕೊಳ್ಳಬೇಕಾಗಿರುವ ಪರಮಾರ್ಥತತ್ತ್ವವು ಯಾವುದು? ಅದರ ಜ್ಞಾನವು ನಮಗೆ ಹೇಗೆ ಆಗುತ್ತದೆ?– ಎಂಬುದನ್ನು ಈಗ ವಿಚಾರಮಾಡಬೇಕಾಗಿದೆ.

ಅಧ್ಯಾತ್ಮವಿದ್ಯೆಯು ಒಂದು ವಿದ್ಯೆ. ಆದ್ದರಿಂದ ಅದನ್ನು ಸಂಪಾದಿಸಿಕೊಳ್ಳುವುದಕ್ಕೆ ಅಮಾನಿತ್ವವೇ ಮುಂತಾದ ಕಷ್ಟಸಾಧ್ಯವಾದ ಸಾಧನಗಳು ಏಕೆ ಬೇಕು?– ಎಂದು ಆಕ್ಷೇಪಿಸಬಾರದು. ಲೌಕಿಕವಿದ್ಯಾಭ್ಯಾಸವೂ ಕೂಡ ದುರ್ಗುಣಗಳನ್ನು ಬಿಡಿಸಿ ಸುಗುಣಗಳ ಆಧಾನವನ್ನು ಮಾಡುವುದಕ್ಕೆಂದೇ ಏರ್ಪಟ್ಟಿದೆ. ಒಮ್ಮೆ ಒಬ್ಬ ಸ್ಕೂಲು ಇನ್‌ಸ್ಪೆಕ್ಟರಮೇಲೆ ಅವನ ನಡತೆಯು ಸರಿಯಾಗಿಲ್ಲವೆಂಬ ದೂರೊಂದು ಸರಕಾರಕ್ಕೆ ಬಂದಿತು. ಇಲಾಖೆಯ ಡೈರೆಕ್ಟರನ್ನು ಈ ವಿಷಯವಾಗಿ ಸರಕಾರದವರು ಕೇಳಿದ್ದಕ್ಕೆ ಉತ್ತರವಾಗಿ 'ಈ ಇನ್‌ಸ್ಪೆಕ್ಟರು ತಮ್ಮ ಸರಕಾರಿ ಉದ್ಯೋಗವನ್ನು ತೃಪ್ತಿಕರವಾಗಿ ಮಾಡಿಸುತ್ತಾರೆ; ಅವರ ನೈತಿಕಗುಣದ ವಿಷಯವಾಗಿ ಬಂದಿರುವ ಈ ಅರ್ಜಿಗೆ ನಾವು ಯಾವ ಬೆಲೆಯನ್ನು ಕೊಡುವುದಕ್ಕೂ ಕಾರಣವಿಲ್ಲ'–ಎಂದು ತಮ್ಮ ಅಭಿಪ್ರಾಯವನ್ನು ವರದಿಮಾಡಿದರಂತೆ. ಅವರಿಗೆ "ವಿದ್ಯೆ" ಎಂದರೆ ಪುಸ್ತಕವಿದ್ಯೆ–ಎಂಬ ತಪ್ಪುಭಾವನೆಯಿದ್ದುದರಿಂದಲೇ ಅವರು ಹಾಗೆಂದು ಬರೆದರು. ವಿದ್ಯಾಭ್ಯಾಸವೆಂಬ ಹೆಸರು ಅನ್ವರ್ಥವಾಗಿರಬೇಕಾದರೆ ನೈತಿಕವಿಚಾರವೂ ಅವಶ್ಯವಾಗಿ ಬೇಕೆಂದು ಎಲ್ಲಾ ವಿಮರ್ಶನಶೀಲರೂ ಒಪ್ಪುತ್ತಾರೆ. ಇದು ಹೇಗಾದರೂ ಇರಲಿ; ಅಧ್ಯಾತ್ಮವಿದ್ಯೆಯಲ್ಲಂತೂ ನೀತಿಯ ಆವಶ್ಯಕತೆಯು ಬಹಳ ಹೆಚ್ಚಾಗಿರುತ್ತದೆ. ಏಕೆಂದರೆ ಆತ್ಮನ ವಿಷಯದ ಜ್ಞಾನವು ನಮಗಿರುವ ಬಹಿರ್ದೃಷ್ಟಿಯ ನಿಮಿತ್ತದಿಂದಲೇ ಲಭಿಸದೆ ಇರುತ್ತದೆ. ಏಕೆಂದರೆ ಜಗತ್ತಿಗೂ ಜೀವರುಗಳಿಗೆಲ್ಲರಿಗೂ ಪರಮಾರ್ಥಾತ್ಮನಾಗಿರುವ ಭಗವಂತನ ತತ್ತ್ವವನ್ನು ಅನುಭವಕ್ಕೆ ತಂದುಕೊಳ್ಳುವುದೇ ಅಧ್ಯಾತ್ಮವಿದ್ಯೆ. ಇದಕ್ಕೆ ದೇಹಾದಿಗಳೇ ನಾನೆಂಬ ಅರಿವೇ ಅಡ್ಡಿಯಾಗಿರುತ್ತದೆ. ಆದ್ದರಿಂದ ದೇಹದೊಳಗಿನ ಸೂಕ್ಷ್ಮವಾಗಿರುವ ವಿಷಯಗಳನ್ನು ತಿಳಿದುಕೊಳ್ಳಬೇಕೆನ್ನುವವರು ಅವಶ್ಯವಾಗಿ ಪ್ರತ್ಯಗ್ದೃಷ್ಟಿ ಎಂಬ ಒಳನೋಟವನ್ನು ಸಂಪಾದಿಸಿಕೊಳ್ಳಬೇಕು.

ನಾವು ಯಾವುದಾದರೊಂದು ಸ್ಥಲಕ್ಕೆ ಮುಟ್ಟಬೇಕೆಂದು ಕೆಲವು ದೂರ ಪ್ರಯಾಣಮಾಡಿದಬಳಿಕ, ಈವರೆಗೆ ನಾವು ನಡೆದದ್ದು ಪೂರ್ವಕ್ಕೆಂದೂ, ನಿಜವಾಗಿ ನಮ್ಮ ಗುರಿಯಾಗಿದ್ದ ಸ್ಥಲವು ಪಶ್ಚಿಮಕ್ಕಿದೆಯೆಂದೂ ತಿಳಿದುಬಂದರೆ,

ಕೂಡಲೆ ಆ ತಪ್ಪುದಾರಿಯನ್ನು ಬಿಟ್ಟು ಹಿಂದಕ್ಕೇ ತಿರುಗಿ ಪ್ರಯಾಣವನ್ನು ಮಾಡಬೇಕಾಗುವದಲ್ಲವೆ ? ಇದರಂತೆ ಅಧ್ಯಾತ್ಮವಿದ್ಯೆಗೆ ಗುರಿಯಾಗಿರುವ ಪರಮಾತ್ಮನನ್ನು ಎಲ್ಲಕ್ಕೂ ಒಳಗಿರುವ, ಎಲ್ಲದರ ತಿರುಳಾದ ಸೂಕ್ಷ್ಮತತ್ತ್ವವಾಗಿರುತ್ತಾನೆ—ಎಂದು ಶಾಸ್ತ್ರಾಚಾರ್ಯರಿಂದ ತಿಳಿದುಬಂದಮೇಲಾದರೂ ಈವರೆಗೆ ನಾವು ಅವಲಂಬಿಸಿದ್ದ ಬಾಹ್ಯದೃಷ್ಟಿಯನ್ನು ಬಿಟ್ಟು, ಪ್ರತ್ಯಗ್ದೃಷ್ಟಿಯನ್ನು ಅವಲಂಬಿಸಿ ಅದಕ್ಕೆ ಅನುಗುಣವಾದ ಹಾದಿಯನ್ನು ಹಿಡಿಯಬೇಕಲ್ಲವೆ ? ಹೀಗೆ ಒಳನೋಟದಿಂದ ತತ್ತ್ವವನ್ನು ಅರಿತುಕೊಳ್ಳುವದಕ್ಕೆ ಹಿಡಿಯಬೇಕಾದ ಸಾಧನಗಳನ್ನು "ನಿವೃತ್ತಿಧರ್ಮ" ಎಂದು ಕರೆಯುತ್ತಾರೆ; ಇವೇ ಅಮಾನಿತ್ವಾದಿ ಸಾಧನಗಳು.

ಬೈಬಲ್‌ನಲ್ಲಿ ಕ್ರಿಸ್ತನು "ದುಂದುಗಾರ ಮಗ" (Prodigal Son) ದೃಷ್ಟಾಂತದ ಕಥೆಯೊಂದನ್ನು ಅನುಸರಿಸಿ ತತ್ತ್ವವನ್ನುಪದೇಶಿಸಿರುತ್ತಾನೆ. ಒಬ್ಬ ಮಗನು ಸ್ವೇಚ್ಛೆಯಿಂದ ಖರ್ಚುವೆಚ್ಚಗಳನ್ನು ಮಾಡಿದ್ದರಿಂದ ತಂದೆಯು ಅಸಮಾಧಾನದ ಕೋಪಕ್ಕೆ ಪಾತ್ರನಾಗಿ ಮನೆಯನ್ನು ಬಿಟ್ಟು ದೂರದೇಶಕ್ಕೆ ಹೋಗಿ ಯಾರೋ ಒಬ್ಬರ ಮನೆಯಲ್ಲಿ ಸೇವಾವೃತ್ತಿಗೆ ನಿಂತನು. ಅಲ್ಲಿ ಅವನಿಗೆ ಮಲಗುವದಕ್ಕೆ ಒಂದು ದನದಕೊಟ್ಟಿಗೆಯನ್ನು ತೋರಿಸಿ ಹೊಟ್ಟನ್ನೇ ಆಹಾರಕ್ಕೆ ಕೊಡುತ್ತಿದ್ದರಂತೆ. ಈ ಕಷ್ಟದ ಸ್ಥಿತಿಯಲ್ಲಿ ಆ ಹುಡುಗನಿಗೆ ತನ್ನ ಮನೆಯಲ್ಲಿ ತಂದೆಯು ತೋರಿಸುತ್ತಿದ್ದ ಆದರದ ನೆನಪಾಗಿ "ತಂದೆಯು ಸಿಟ್ಟುಮಾಡಿದರೂ ಸರಿ; ನಾನು ಅವನ ಬಳಿಗೇ ಹೋಗುವೆನು" ಎಂದುಕೊಂಡು ಮತ್ತೆ ಆ ತರುಣನು ತನ್ನ ತಂದೆಯ ಮನೆಗೆ ಬಂದನು. ತಂದೆಗೆ ಬಹಳ ಸಂತೋಷವಾಗಿ ಆ ದಿನ ಅವನಿಗಾಗಿ ಒಂದು ಹಬ್ಬದೂಟವನ್ನು ಏರ್ಪಡಿಸಿದನಂತೆ. ಕ್ರಿಸ್ತನು ಈ ದೃಷ್ಟಾಂತವನ್ನು ಹೇಳಿ ಈ ಲೋಕದ ತಂದೆಯೇ ಹೀಗೆ ಪಶ್ಚಾತ್ತಾಪದಿಂದ ಹಿಂತಿರುಗಿದ ಮಗನ ವಿಷಯಕ್ಕೆ ಇಷ್ಟು ಆದರವನ್ನು ತೋರಿಸುವಲ್ಲಿ ಎಲ್ಲರಿಗೂ ತಂದೆಯಾದ ಭಗವಂತನು ವಿರಕ್ತರಾದ ಭಕ್ತರನ್ನು ಇನ್ನೆಷ್ಟು ಪ್ರೀತಿಯಿಂದ ಕಂಡಾನು ? ಎಂದು ಕೇಳಿರುತ್ತಾನೆ. ಭಗವದ್ಗೀತೆಯಲ್ಲಿಯೂ ಶ್ರೀಕೃಷ್ಣಭಗವಂತನು—

ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮನ್ತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ ॥
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।
ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ

ಗೀ. ೯–೩೦, ೩೧

'ಎಂಥ ಸುದುರಾಚಾರಿಯಾಗಿರಲಿ, ನೀನೇ ಗತಿ ಎಂದು ನನ್ನನ್ನು ಭಜಿಸುತ್ತಾನಾದರೆ ಅವನನ್ನು ಸಾಧುವೆಂದೇ ತಿಳಿಯಬೇಕು: ಏಕೆಂದರೆ ಅವನು ಸಾಧು ನಿಶ್ಚಯವನ್ನು ಮಾಡಿಕೊಂಡಿರುತ್ತಾನೆ. ಅಷ್ಟರಿಂದಲೇ ಅವನು ಬೇಗನೆ ಧರ್ಮಾತ್ಮನಾಗಿ ನಿತ್ಯಶಾಂತಿರೂಪವಾದ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ' ಎಂದಿರುತ್ತಾನೆ. ಶ್ರೀರಾಮಚಂದ್ರನೂ "ನನ್ನನ್ನು ಒಂದುಬಾರಿ ಶರಣುಹೊಕ್ಕು ನಿನ್ನವನು ನಾನು ಎಂದು ಕೇಳಿಕೊಂಡರೆ, ಯಾರೇ ಆಗಿರಲಿ ಅವನಿಗೆ ಅಭಯವನ್ನು ಕೊಡುತ್ತೇನೆಂಬುದು ನನ್ನ ವ್ರತವು' ಎಂದಿರುತ್ತಾನೆ. ಪರಮಾತ್ಮನಿಗೆ ದ್ವೇಷ್ಯನೆಂದಾಗಲಿ, ಬೇಕಾದವನೆಂದಾಗಲಿ ಇರುವದೇ ಇಲ್ಲ.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥**

ಗೀ. ೯-೨೯.

ಎಂದು ಕೃಷ್ಣಭಗವಂತನೇ ಹೇಳಿಕೊಂಡಿರುತ್ತಾನೆ. ಆತನನ್ನು ಭಕ್ತಿಯಿಂದ ಭಜಿಸುವವರು ಭಗವಂತನಲ್ಲಿಯೇ ಇರುತ್ತಾರೆ: ಭಗವಂತನು ಅವರಲ್ಲಿಯೇ ಇರುತ್ತಾನೆ. ಭಕ್ತರಿಗೂ ಭಗವಂತನಿಗೂ ಏನೂ ಭೇದವೂ ಇರುವದಿಲ್ಲ. ಚಳಿಗಾಲದಲ್ಲಿ ಯಾರುಯಾರು ಬೆಂಕಿಯ ಹತ್ತಿರಕ್ಕೆ ಬರುವರೋ ಅವರು ಯಾರೆಂಬ ಗಣನೆಯಿಲ್ಲದೆ ಹತ್ತಿರಕ್ಕೆ ಬಂದವರಿಗೆಲ್ಲ ಅದು ಶಾಖವನ್ನುಂಟುಮಾಡುವಂತೆ ಭಗವಂತನು ತನ್ನ ಬಳಿಗೆ ಬರುವವರಿಗೆಲ್ಲ ಸನ್ಮತಿಯನ್ನೂ ಸದ್ಗತಿಯನ್ನೂ ಕೊಡುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಈ ಅಮಾನಿತ್ವಾದಿಗಳು ಜ್ಞಾನಸಹಕಾರಿಕಾರಣಗಳು. ಶಾಸ್ತ್ರಜನ್ಯಜ್ಞಾನದ ಜೊತೆಗೆ ಇವುಗಳು ಸೇರಿದಂತೆಲ್ಲ, ಜ್ಞಾನವು ಅನುಭವಪರ್ಯಂತವಾಗುವದಕ್ಕೆ ಸಹಕಾರವನ್ನುಂಟುಮಾಡುವವು. ಬೇಯದೆ ಇರುವ ಬೇಳೆಯು ಸ್ವಲ್ಪ ತುಪ್ಪವನ್ನು ಹಾಕಿದಮಾತ್ರದಿಂದ ಹೇಗೆ ಬೇಗನೆ ಬೇಯುವದೋ ಹಾಗೆಯೇ ಇದು.

ಈಗ ಅಧಿಕಾರಿಗಳಾದವರಿಗೆ ಅನುಭವದಲ್ಲಿ ತಿಳಿಯಬರುವ ಜ್ಞೇಯತತ್ತ್ವದ ಸ್ವರೂಪವನ್ನು ಭಗವಂತನು ಹೇಗೆ ವರ್ಣಿಸಿರುತ್ತಾನೆಂಬುದರ ಕಡೆಗೆ ಮನಸ್ಸನ್ನು ಹೊರಳಿಸೋಣ :

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥** ಗೀ. ೧೩-೧೨

ಈ ಕ್ಷೇತ್ರಜ್ಞತತ್ತ್ವವೇ ಜ್ಞೇಯವು, ನಿಜವಾಗಿ ಅರಿತುಕೊಳ್ಳತಕ್ಕದ್ದೆಂಬ ಹೆಸರಿಗೆ ತಕ್ಕದ್ದು. "ಏತಜ್ಜ್ಞೇಯಂ ನಿತ್ಯಮೇವಾತ್ಮಸಂಸ್ಥಂ ನಾತಃ ಪರಂ ವೇದಿ

ತವ್ಯಂ ಹಿ ಕಿಂಚಿತ್ ॥" (ಆತ್ಮರೂಪದಿಂದ ಇದೇ ಎಂದೆಂದಿಗೂ ಜ್ಞೇಯವು; ಇದಕ್ಕಿಂತ ಅರಿತುಕೊಳ್ಳಬೇಕಾದ ತತ್ತ್ವವು ಮತ್ತೊಂದಿಲ್ಲವೇ ಇಲ್ಲ) ಎಂದೂ 'ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ' (ನಾರಾಯಣನೇ ಜ್ಞೇಯವಾದ ಮಹಾವಿಷಯವು; ಆತನು ಎಲ್ಲಕ್ಕೂ ಆತ್ಮನು ಪರಗತಿಯು) ಎಂದು ವೇದವು ಸಾರುತ್ತಿದೆ. ಇದನ್ನರಿತುಕೊಂಡರೆ ಮರ್ತ್ಯನು ಅಮೃತನಾಗುವನು, ಇದೇ ಅನಾದಿಯಾಗಿರುವ ಪರಬ್ರಹ್ಮವು; ಇದು ಸತ್ತಲ್ಲ, ಅಸತ್ತೂ ಅಲ್ಲ.

ಜ್ಞೇಯವನ್ನು ದ್ರವ್ಯ, ಗುಣ, ಕ್ರಿಯೆ, ಸಾಮಾನ್ಯ, ವಿಶೇಷ- ಎಂದು ಮುಂತಾಗಿ ಪಾಶ್ಚಾತ್ತ್ಯರಲ್ಲಿ ಅರಿಸ್ಟಾಟಲ್ ಎಂಬಾತನೂ ನಮ್ಮಲ್ಲಿ ಕಣಾದರೂ ವಿಂಗಡಿಸಿ ನಿರ್ಣಯಿಸಿದ್ದರೂ ಅದು ಅನಾತ್ಮರೂಪವಾದ ವ್ಯಾವಹಾರಿಕ ಜ್ಞೇಯವು; ಆದರೆ ಈ ಜ್ಞೇಯವು ದ್ರವ್ಯಾದಿಗಳಲ್ಲಿ ಯಾವದೊಂದು ಜಾತಿಯದೂ ಅಲ್ಲ. ಇದನ್ನು ದೇಶಕಾಲಗಳಲ್ಲಿರುವ ಸತ್ತೆಂದಾಗಲಿ ಅಸತ್ತೆಂದಾಗಲಿ ಹೇಳುವದಕ್ಕೆ ಬರುವದಿಲ್ಲ. "ಸ ಏಷ ನೇತಿನೇತ್ಯಾತ್ಮಾ" (ಆ ಇವನು ಇದಲ್ಲ, ಇದಲ್ಲ-ಎಂಬ ಆತ್ಮನು) ಎಂದು ಶ್ರುತಿಯೂ ಇದನ್ನು ಇಂಥದ್ದೆಂದು ಹೇಳುವದಕ್ಕೆ ಬರುವದಿಲ್ಲವೆಂದೂ ಇದು ಸರ್ವರ ಆತ್ಮನೇ ಆಗಿರುವದರಿಂದ ಇದು ಇಲ್ಲವೆಂದಾಗಲಿ ಅರಿತುಕೊಳ್ಳುವದಕ್ಕೆ ಆಗುವದಿಲ್ಲವೆಂದಾಗಲಿ ಹೇಳುವದಕ್ಕೆ ಬರುವದಿಲ್ಲವೆಂದೂ ವರ್ಣಿಸುತ್ತಿದೆ. ವೇದಾಂತದಲ್ಲಿ ಈ ಪರಮಾತ್ಮತತ್ತ್ವವನ್ನು ವರ್ಣಿಸುವದಕ್ಕೆ ವೇದಾಂತಿಗಳು ಒಂದು ಅಸಾಧಾರಣಪ್ರಕ್ರಿಯೆಯನ್ನು ಉಪಯೋಗಿಸಿಕೊಂಡಿರುತ್ತಾರೆ. "ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತೇ" (ಅಧ್ಯಾರೋಪ, ಅಪವಾದ-ಇವೆರಡರಿಂದ ಈ ನಿರ್ವಿಶೇಷವಾದ ತತ್ತ್ವವನ್ನು ವಿವರಿಸಲಾಗುವದು) ಎಂದು ಸಂಪ್ರದಾಯವಿದರು ಹೇಳಿದ್ದಾರೆ-ಎಂದು ಭಾಷ್ಯಕಾರರು ಈ ಸಂದರ್ಭದಲ್ಲಿ ಪುರಾತನವಾದ ಸಾಂಪ್ರದಾಯಿಕ ವೇದಾಂತಿಗಳ ವಚನವನ್ನು ಉದಾಹರಿಸಿರುತ್ತಾರೆ. ಭಗವಂತನು ಈ ವೇದಾಂತಪ್ರಕ್ರಿಯೆಯನ್ನೇ ಉಪಯೋಗಿಸಿಕೊಂಡು ಜ್ಞೇಯವಾದ ಕ್ಷೇತ್ರಜ್ಞತತ್ತ್ವವನ್ನು ತಿಳಿಸಿಕೊಟ್ಟಿರುತ್ತಾನೆ. ಹೇಗೆಂದರೆ :

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥**
**ಸರ್ವೇನ್ದ್ರಿಯಗುಣಾಭಾಸಂ ಸರ್ವೇನ್ದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥**
**ಬಹಿರನ್ತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ॥**

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥**
**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**

ಗೀ. ೧೩–೧೩ರಿಂದ ೧೭

ಈ ಜ್ಞೇಯವಾದ ಪರಮಾತ್ಮನು ಪ್ರತಿಯೊಬ್ಬ ಜೀವನಿಗೂ ಆತ್ಮನೇ ಆಗಿರುವದರಿಂದ ಎಲ್ಲಾ ಪ್ರಾಣಿಗಳ ಕಾರ್ಯಕರಣಗಳು ಇವನವೇ ಎನ್ನಿಸುವದಾಗಿದೆ. ಆದ್ದರಿಂದ ಎಲ್ಲೆಲ್ಲಿಯೂ ಕೈಕಾಲುಗಳೂ ಎಲ್ಲೆಲ್ಲಿಯೂ ಕಣ್ಣುಗಳೂ ತಲೆಗಳೂ ಮುಖಗಳೂ ಎಲ್ಲೆಲ್ಲಿಯೂ ಕಿವಿಗಳೂ ಇರುವವು. ಎಲ್ಲಾ ಪ್ರಾಣಿಗಳ ಪಾಣಿಪಾದಾದೀಂದ್ರಿಯಗಳೂ ಈ ಆತ್ಮತತ್ತ್ವಕ್ಕೇ ಸೇರಿರುತ್ತವೆ ಎಂದು ಅಧ್ಯಾರೋಪದೃಷ್ಟಿಯಿಂದ ಹೇಳಿದ್ದು : ಸರ್ವವ್ಯಾಪಿಯಾದ ಆತ್ಮನು ಎಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನಲ್ಲವೆ ? ಈ ಅಧ್ಯಾರೋಪದೃಷ್ಟಿಯೇ ಪರಮಾರ್ಥವೆಂದುಕೊಂಡಾರೆಂದು ಮುಂದಿನ ಶ್ಲೋಕದಲ್ಲಿ 'ಸರ್ವೇಂದ್ರಿಯಗುಣಗಳೂ ಇದರಲ್ಲಿರುವಂತೆ ತೋರುತ್ತಿರುವದು; ಇದಕ್ಕೆ ಯಾವ ಇಂದ್ರಿಯಗಳೂ ಇಲ್ಲ'–ಎಂದಿರುತ್ತದೆ. ಇದು ಎಲ್ಲವನ್ನೂ ಧರಿಸಿಕೊಂಡಿರುತ್ತದೆ ಎಂಬುದು ಅಧ್ಯಾರೋಪ. ಆದರೆ ನಿಜವಾಗಿ ಅಸಕ್ತವಾಗಿರುತ್ತದೆ–ಎಂಬುದು ಅಪವಾದ. ಇದು 'ಗುಣಗಳನ್ನು ಭೋಗಿಸುತ್ತಿದೆ' ಎಂಬುದು ಅಧ್ಯಾರೋಪ, 'ನಿರ್ಗುಣವಾಗಿದೆ' ಎಂಬುದು ಅಪವಾದ. 'ಪ್ರಾಣಿಗಳ ಒಳಗೂ ಹೊರಗೂ ಇದೆ' ಎಂಬುದು ಇದರ ಸ್ವರೂಪದ ವರ್ಣನೆ: 'ಚರಾಚರರೂಪವಾದ ಶರೀರರೂಪದಿಂದಲೂ ಕಾಣಿಸುತ್ತಿದೆ' ಎಂಬುದು ಅಧ್ಯಾರೋಪ. ಇದು ಅತ್ಯಂತ ಸೂಕ್ಷ್ಮವಾಗಿರುವದರಿಂದ ಇದನ್ನು ಅರಿಯಲಾಗುವದಿಲ್ಲ–ಎಂಬುದು ಸ್ವರೂಪನಿರ್ದೇಶ; ದೂರದಲ್ಲಿಯೂ ಹತ್ತಿರದಲ್ಲಿಯೂ ಕಾಣಿಸುತ್ತಿರುವದು ಇದೇ" ಎಂಬುದು ಅಧ್ಯಾರೋಪ. ಹೀಗೆಯೇ ಬೇರೆಬೇರೆಯ ಪ್ರಾಣಿಗಳ ರೂಪದಿಂದ ವಿಂಗಡಿಸಿಕೊಂಡು ಕಾಣಿಸುತ್ತಿರುವದಾದರೂ ಸ್ವರೂಪದಿಂದ ಅವಿಭಕ್ತವಾಗಿಯೇ ಇರುತ್ತದೆ. ಭೂತಗಳನ್ನೆಲ್ಲ ಸ್ಥಿತಿಕಾಲದಲ್ಲಿ ಧರಿಸಿಕೊಂಡಿರುವಂತೆ ಕಾಣಿಸುತ್ತಿರುವದು; ಎಲ್ಲಾ ಭೂತಗಳ ರೂಪದಿಂದಲೂ. ಹಗ್ಗವು ಹಾವಿನ ರೂಪದಿಂದ ಕಾಣಿಸುವಂತೆ– ಹುಟ್ಟುವಂತೆ ತೋರುತ್ತಿರುವದು; ಪ್ರಲಯದಲ್ಲಿ ಎಲ್ಲವನ್ನೂ ನುಂಗಿ ತಾನು ಇರುವಂತೆಯೇ ಇರುವದು. ಸ್ವರೂಪದಿಂದ ಸೃಷ್ಟಿಸ್ಥಿತಿಲಯಗಳಿಲ್ಲದ್ದಾಗಿರುತ್ತದೆ. ಇದರಿಂದಲೇ ಸೂರ್ಯಾದಿಗಳೂ ಬೆಳಗುವಂತೆ ತೋರುತ್ತಿರುವದರಿಂದ ಇದು ಜ್ಯೋತಿಗಳಿಗೆಲ್ಲ ಜ್ಯೋತಿಯೆನಿಸಿರುತ್ತದೆ; ಆದರೂ ಅಖಂಡಚೈತನ್ಯರೂಪದಿಂದ ಇದು ಸ್ವಯಂಪ್ರಕಾಶವಾಗಿ ಅದ್ವಿತೀಯವಾಗಿಯೇ ಇರುತ್ತದೆ.

ತಮಸ್ಸು ಎಂಬುದು ಅಧ್ಯಾಸರೂಪವಾದ ಅವಿದ್ಯೆ; ಅವಿದ್ಯೆಯಿಂದ ಎಲ್ಲಾ ದೋಷಗಳಿಂದ ಕೂಡಿರುವಂತೆ ಇದು ಕಾಣುತ್ತಿದ್ದರೂ ಅಪವಾದದೃಷ್ಟಿಯಿಂದ ಹೇಳುವಾಗ ಅವಿದ್ಯೆಯೇ ಮೊದಲು ಇರುವದಿಲ್ಲ, ಇನ್ನು ಅವಿದ್ಯಾಕಾರ್ಯವಾದ ಶರೀರೇಂದ್ರಿಯಮನಸ್ಸುಗಳೆಲ್ಲಿ ಬರಬೇಕು ?

ನಿರ್ಗುಣಪರಮಾತ್ಮನ ಧ್ಯಾನವನ್ನು ಮಾಡುವಾಗ ಧ್ಯಾತೃ, ಧ್ಯಾನ, ಧ್ಯೇಯ–ಎಂಬ ಭೇದವಿರುವದರಿಂದ ಆ ಧ್ಯಾನದಿಂದ ಬ್ರಹ್ಮವನ್ನು ದೇಶಾಂತರದಲ್ಲಿ ಕಾಲಾಂತರದಲ್ಲಿ ಹೋಗಿ ಸೇರಬೇಕಾಗಿರುತ್ತದೆ. ಆದರೆ ನಿರ್ವಿಶೇಷನಾಗಿರುವ ಬ್ರಹ್ಮಾತ್ಮನು ಇಲ್ಲಿಯೇ ಈಗಲೇ ನಮ್ಮ ಪರಮಾರ್ಥಸ್ವರೂಪವಾಗಿರುವದರಿಂದ ಮಿಥ್ಯಾಪ್ರತ್ಯಯರೂಪವಾದ ಅನ್ಯೋನ್ಯಾಧ್ಯಾಸವಾಗಲಿ ಅದರಿಂದ ತೋರುತ್ತಿರುವ ಭೇದವ್ಯವಹಾರವಾಗಲಿ ಇಲ್ಲವೇ ಇಲ್ಲ– ಎಂಬ ಅನುಭವವಾದರೆ ಸಾಕಾಗಿರುತ್ತದೆ. ಈ ಅನುಭವವು ಬರುವದಕ್ಕೆ ಭಗವಂತನಲ್ಲಿ ಅವ್ಯಭಿಚರಿತವಾದ ಭಕ್ತಿಯೊಂದಿದ್ದರೆ ಸಾಕು; ಆತನ ಅನುಗ್ರಹದಿಂದಲೇ ಅಜ್ಞಾನವು ತೊಲಗಿ ನಮ್ಮ ಸ್ವರೂಪದಲ್ಲಿ ನಾವು ನಿಂತುಬಿಡುವೆವು.

---

## ೪೨. ಆತ್ಮದರ್ಶನೋಪಾಯಾಂತರಗಳು

( 12—9—69 )

ಕ್ಷೇತ್ರಕ್ಷೇತ್ರಜ್ಞರು, ಅಥವಾ ಪ್ರಕೃತಿಪುರುಷರ ತತ್ತ್ವವನ್ನು ವಿವೇಚನೆ ಮಾಡುವ ರೀತಿಯಿಂದ ಪರಮಾತ್ಮನನ್ನು ಹೇಗೆ ಅರಿತುಕೊಳ್ಳಬಹುದೆಂಬುದನ್ನು ಈವರೆಗೆ ಹೇಳಿದ್ದಾಯಿತು. ಆತ್ಮದರ್ಶನಕ್ಕೆ ಅಮಾನಿತ್ವಾದಿಸಹಕಾರಿಸಾಧನಗಳು ಬೇಕೇಬೇಕು. ಇನ್ನು ಜಿಜ್ಞಾಸುವಿನ ಅಧಿಕಾರಕ್ಕನುಗುಣವಾಗಿ ಅನುಸರಿಸಲ್ಪಡಬೇಕಾಗಿರುವ ವಿಶೇಷೋಪಾಯಗಳೂ ಬೇಕಾಗುವವು. ಈ ಉಪಾಯವಿಕಲ್ಪಗಳನ್ನು ಭಗವಂತನು ಹೀಗೆ ಸಂಗ್ರಹಿಸಿ ಹೇಳಿರುತ್ತಾನೆ :

**ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಙ್ಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥**

**ಅನ್ಯೇ ತ್ವೇವಮಜಾನನ್ತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥**

ಗೀ. ೧೩–೨೪, ೨೫

ಕೆಲವರಿಗೆ ಕರ್ಮಯೋಗದಿಂದ ಪ್ರಾರಂಭಿಸುವದು ಅವಶ್ಯವಾಗುವದು, ಮತ್ತೆ ಕೆಲವರು ಧ್ಯಾನಯೋಗದಿಂದ ತೊಡಗಬೇಕಾಗುವದು; ಮತ್ತೆ ಕೆಲವರು ನೇರಾಗಿ ಸಾಂಖ್ಯಯೋಗದ ದ್ವಾರದಿಂದಲೇ ಆತ್ಮದರ್ಶನವನ್ನು ಮಾಡಿಕೊಳ್ಳಬೇಕಾಗುವದು, ಕೆಲವರು ಮಾತ್ರ ಯಾವದೊಂದು ಯೋಗದ ರಹಸ್ಯವೂ ತಿಳಿಯದವರಾದ್ದರಿಂದ ಹೀಗೆ ಉಪಾಸನೆಮಾಡಿರಿ ಎಂದು ಸದ್ಗುರುಗಳು ಹೇಳಿದ ಪ್ರಕಾರದಿಂದ ಉಪಾಸನೆಮಾಡಿ ಸಂಸಾರದಿಂದ ಬಿಡುಗಡೆಯನ್ನು ಹೊಂದಬೇಕಾಗಿರುತ್ತದೆ. ಒಂದು ನಗರಕ್ಕೆ ಒಂದು, ಎರಡು, ನಾಲ್ಕು ಅಥವಾ ಎಂಟುಹತ್ತು ಸ್ಟೇಷನ್ನುಗಳ ದೂರದಲ್ಲಿರುವವರು ಅಷ್ಟಷ್ಟು ಸ್ಟೇಷನ್ನುಗಳನ್ನು ದಾಟಿಯೇ ನಗರಕ್ಕೆ ಬಂದು ಸೇರಬೇಕಾಗಿರುವಂತೆ ತಮ್ಮ ತಮ್ಮ ಅಧಿಕಾರಕ್ಕೆ ತಕ್ಕಂತೆ ಸಾಧಕರು ಆಯಾ ಉಪಾಯವಿಶೇಷವನ್ನು ಹಿಡಿಯಬೇಕಾಗಿರುತ್ತದೆ. ಸ್ವಾಮಿ ವಿವೇಕಾನಂದರವರು ಕರ್ಮಯೋಗ, ಭಕ್ತಿಯೋಗ, ರಾಜಯೋಗ, ಜ್ಞಾನಯೋಗ– ಇವುಗಳಲ್ಲಿ ಒಂದನ್ನೋ ಎರಡನ್ನೋ ಅಥವಾ ಎಲ್ಲವನ್ನೂ ಸೇರಿಸಿ ಮುಕ್ತಿಯನ್ನು ಪಡೆಯಬೇಕು– ಎಂದು ಬರೆದಿರುವರು. ಹೀಗೆ ಕೆಲವರು ಈ ಉಪಾಯಗಳ ವಿಕಲ್ಪ ಅಥವಾ ಸಮುಚ್ಚಯವು ತತ್ತ್ವಾನುಭವಕ್ಕೆ ಅವಶ್ಯವಾಗುವದೆಂಬ ಭ್ರಮೆಗೆ ವಶರಾಗಿರುತ್ತಾರೆ. ನಿಜವು ಹಾಗಿಲ್ಲ. ಇವುಗಳಲ್ಲಿ ಸಾಂಖ್ಯವು ನೇರವಾದ ಉಪಾಯ, ಧ್ಯಾನವು ಸಾಂಖ್ಯಕ್ಕೆ ಉಪಾಯ, ಕರ್ಮಯೋಗವು ಧ್ಯಾನಯೋಗಕ್ಕೆ ಬಹಿರಂಗವಾದ ಉಪಾಯ– ಹೀಗೆ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಈ ಉಪಾಯವಿಶೇಷಗಳನ್ನು ಗೀತೆಯಲ್ಲಿ ಹೇಳಿದೆ ಎಂಬುದು ಒಳಹೊಕ್ಕು ವಿಚಾರಮಾಡಿದವರಿಗೆ ಗೊತ್ತಾಗುವದು.

ಗೀತೆಯಲ್ಲಿರುವ ಉಪದೇಶಗಳನ್ನು ಸ್ವಲ್ಪ ಒಳಹೊಕ್ಕು ವಿಮರ್ಶಿಸೋಣ. ಎರಡನೆಯ ಅಧ್ಯಾಯದಲ್ಲಿ ಭಗವಂತನು ನೇರಾಗಿ ತತ್ತ್ವಜಿಜ್ಞಾಸಾಕ್ರಮವಾದ ಸಾಂಖ್ಯವನ್ನೇ ಪ್ರಾರಂಭಿಸಿ ಸದಸದ್ವಿವೇಕಪ್ರಕ್ರಿಯೆಯಿಂದ ಆತ್ಮನು ಪರಮಾರ್ಥಸದ್ರೂಪನೆಂದೂ ದೇಹಾದಿಗಳು ಮಾರ್ಪಡುತ್ತಿರುವ ಸ್ವರೂಪವಾದ್ದರಿಂದ ಅಸತ್ತಾಗಿರುವವೆಂದೂ ಅನ್ವಯವ್ಯತಿರೇಕರೂಪವಾದ ತರ್ಕದಿಂದ ತಿಳಿಯಿಸಿದ ಬಳಿಕ–

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ ॥**

ಗೀ. ೨–೩೯

**ಈವರೆಗೆ ನಿನಗೆ ಸಾಂಖ್ಯಬುದ್ಧಿಯನ್ನು ಹೇಳಿದೆನು, ಈಗ ಯೋಗಬುದ್ಧಿಯನ್ನು ತಿಳಿಯಿಸುವೆನು, ಕೇಳು ! ಇದನ್ನು ಅನುಸರಿಸಿದರೆ, ನಿನ್ನ ಕರ್ಮಬಂಧವನ್ನು**

ನಾಶಗೊಳಿಸಿಕೊಳ್ಳಬಹುದು-ಎಂದಿರುತ್ತಾನೆ 'ಸಾಙ್ಖ್ಯ' ಎಂಬ ಶಬ್ದದಲ್ಲಿ 'ಸಙ್ಖ್ಯಾ ತತ್ತ್ವವಿಚಾರಣಾ' (ಸಂಖ್ಯೆ ಎಂದರೆ ತತ್ತ್ವವನ್ನು ನೇರಾಗಿ ವಿಚಾರಮಾಡುವದು) ಎಂಬ ವ್ಯುತ್ಪತ್ತಿಯಿಂದ ನೇರಾದ ವಿಚಾರದಿಂದ ತತ್ತ್ವವನ್ನು ಅರಿತುಕೊಳ್ಳುವ ಮಾರ್ಗ ಎಂಬ ಅರ್ಥವು ಅಡಗಿರುತ್ತದೆ. ಮನುಷ್ಯನಿಗೆ ಬಾಲ್ಯ, ಕೌಮಾರ, ಜರೆ (ಮುಪ್ಪು)-ಎಂಬ ಅವಸ್ಥೆಗಳು ಒಂದಾಗುತ್ತಲೊಂದು ಬರುತ್ತಿರುವವು.; ಒಂದ ವಸ್ಥೆಯು ಬಂದುಹೋಗಿ ಮತ್ತೊಂದು ಬರುವದರಲ್ಲಿ ದೇಹದಲ್ಲಿರುವ ಜೀವಾಣು ಕೋಶಗಳು (Cells) ಎಲ್ಲವೂ ಪೂರ್ಣವಾಗಿ ಬದಲಾಯಿಸಿ ಹೊಸ ಅಣುಗಳು ಉಂಟಾಗಿರುವವೆಂದು ಶರೀರಶಾಸ್ತ್ರಜ್ಞರು ಹೇಳುತ್ತಾರೆ. ಬಾಲ್ಯಾದ್ಯವಸ್ಥೆಗಳೂ ಹೀಗೆ ಮಾರ್ಪಡುವಾಗ ಆಯಾ ಅವಸ್ಥೆಗೆ ಕಟ್ಟಿಬಿದ್ದಿರುವ ಶರೀರಸಂಸ್ಥಾನಗಳೂ ಇಂದ್ರಿಯಾರ್ಥಗಳ ಸಂಯೋಗದಿಂದ (ಮಾತ್ರಾಸ್ಪರ್ಶಾಃ) ಆಗುವ ಶೀತೋಷ್ಣ ಗಳೂ ಅವುಗಳಿಂದಾಗುವ ಸುಖದುಃಖಗಳೂ ಹರ್ಷವಿಷಾದವನ್ನುಂಟುಮಾಡು ತ್ತಿದ್ದರೂ ಆಯಾ ಅವಸ್ಥೆಯು ಹೋಗಿ ಮತ್ತೊಂದು ಹೊಸ ಅವಸ್ಥೆಯು ಬಂದಾಗ ಸ್ಥೂಲಸೂಕ್ಷ್ಮಶರೀರಗಳಲ್ಲಿ ಸಂಪೂರ್ಣವಾದ ಮಾರ್ಪಾಡು ಆಗುವು ತ್ತಿದ್ದರೂ ಇವೆರಡನ್ನೂ ನೋಡುತ್ತಿರುವ ಕೂಟಸ್ಥಚೈತನ್ಯಸ್ವರೂಪನಾದ ಆತ್ಮನು ಯಾವ ಅವಸ್ಥೆಯಿಂದಲೂ ಯಾವ ವಿಕಾರವನ್ನೂ ಹೊಂದದೆ ತಾನು ಇದ್ದಂತೆಯೇ ಇರುತ್ತಾನೆ. ಅವಸ್ಥೆಗಳು ಮಾರ್ಪಟ್ಟರೂ ಆತ್ಮಸ್ವರೂಪವು ಹೇಗೆ ಮಾರ್ಪಡದೆ ಇದ್ದಂತೆಯೇ ಇರುವದೋ ಹಾಗೆಯೇ ಒಂದು ದೇಹವು ಹೋಗಿ ಮತ್ತೊಂದು ದೇಹವು ಬರುವಾಗಲೂ ಹಿಂದುಮುಂದಿನ ದೇಹಗಳ ವಿಕಾರಗಳು ಆತ್ಮನಿಗೆ ಸ್ವಲ್ಪ ವೂ ವಿಕಾರವನ್ನುಂಟುಮಾಡದೆ ಇರುತ್ತವೆ. ಸಾಕ್ಷಿಸ್ವರೂಪನಾದ ಆತ್ಮನಿಗೆ ಸಾಕ್ಷ್ಯ ವಾದ ಸ್ಥೂಲಸೂಕ್ಷ್ಮಶರೀರಗಳ ಧರ್ಮವು ಒಂದಿಷ್ಟೂ ಸೋಂಕುವದಿಲ್ಲ. ಇದನ್ನು ಅನ್ವಯದಿಂದಲೂ ಅನುಭವಾನುಗುಣವಾದ ತರ್ಕದಿಂದಲೂ ನಿಶ್ಚಯಿಸಿಕೊಳ್ಳು ವವರೇ ಸಾಙ್ಖ್ಯರು. ಇವರನ್ನೇ **'ಅನ್ಯೇ ಸಾಙ್ಖ್ಯೇನ ಯೋಗೇನ'** ಎಂಬ ವಾಕ್ಯದಿಂದ ಪರಾಮರ್ಶಿಸಿರುತ್ತದೆ.

ಇನ್ನು **'ಯೋಗೇ ತ್ವಿಮಾಂ ಶೃಣು'** ಎಂಬ ವಾಕ್ಯದಿಂದ ಪರಾಮರ್ಶಿಸ ಲ್ಪಟ್ಟಿರುವವರು ಕರ್ಮಯೋಗಿಗಳು; ಕರ್ಮಯೋಗವೆಂದರೆ **'ನಿಃಸಙ್ಗತಯಾ ದ್ವಂದ್ವಪ್ರಹಾಣಪೂರ್ವಕಮ್ ಈಶ್ವರಾರಾಧನಾರ್ಥಂ ಕರ್ಮಾನುಷ್ಠಾನಮ್'** ಕರ್ಮಫಲದಲ್ಲಿ ಆಸಕ್ತಿಯಿಲ್ಲದೆ, ದ್ವಂದ್ವಗಳನ್ನು ನಾಶಪಡಿಸಿಕೊಂಡು, ಈಶ್ವರನ ಅಭ್ಯರ್ಚನೆಗಾಗಿ ಕರ್ಮವನ್ನು ಮಾಡುವದು ಎಂದು ಭಾಷ್ಯಕಾರರು (ಗೀ. ಭಾ ೨-೩೯) ವಿವರಿಸಿರುತ್ತಾರೆ.

ಸಾಂಖ್ಯಯೋಗಕ್ಕೂ ಕರ್ಮಯೋಗಕ್ಕೂ ಇರುವ ವೈಲಕ್ಷಣ್ಯವೇನೆಂದರೆ ಸಾಙ್ಖ್ಯಯೋಗದಲ್ಲಿ ಆತ್ಮನಲ್ಲಿ ಯಾವ ಕರ್ತೃತ್ವವನ್ನೂ ನಾವು ಅಧ್ಯಾರೋಪಿಸಿ ಕೊಂಡಿರುವದಿಲ್ಲ.

**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥** ಗೀ. ೨–೧೮

ಎಂದಿರುವಂತೆ ಬಿಸಿಲುಕುದುರೆಯ ನೀರಿನಲ್ಲಿ ನೀರೆಂಬ ಬುದ್ಧಿಯು ತಟ್ಟನೆ ಉಂಟಾಗಿದ್ದರೂ ಪ್ರಮಾಣದಿಂದ ಪರೀಕ್ಷಿಸಿನೋಡಿದ ಬಳಿಕ ಹೇಗೆ ಅದೆಲ್ಲ ಬರಿಯ ಮರಳು ಕಾಡೇ ಎಂಬ ಬುದ್ಧಿಯುಂಟಾಗಿ ನೀರಿನ ಬುದ್ಧಿಯು ಬಾಧಿತವಾಗುವದೋ ಹಾಗೆ, ಅಥವಾ ಸ್ವಪ್ನಮಾಯಾದಿಗಳಲ್ಲಿ ಕಾಣುವ ದೇಹಗಳು ಆ ಕಾಲಕ್ಕೆ ಹೇಗೆ ನಿಜವಾಗಿಯೂ ದೇಹಗಳೇ ಎಂಬ ಬುದ್ಧಿಯನ್ನುಂಟುಮಾಡುತ್ತಿದ್ದರೂ ಸರಿಯಾಗಿ ವಿಚಾರ ಮಾಡಿದಮೇಲೆ ಅವೆಲ್ಲ ತೋರಿಕೆಯ ದೃಶ್ಯಗಳೇ ಎಂದು ಎಚ್ಚರಬುದ್ಧಿಯಿಂದ ಬಾಧಿತವಾಗುವವೋ ಹಾಗೆಯೇ ನಾವು ಸತ್ಯವೆಂದು ನಂಬಿರುವ ಈ ದೇಹಗಳೂ ಅನುಭವಾನುಸಾರವಾಗಿ ವಿಚಾರಮಾಡಿದರೆ ಬಾಧಿತವಾಗುತ್ತವೆ : ಆತ್ಮನು ಪ್ರಮೇಯನಲ್ಲ, ಪ್ರಮಾತೃವೂ ಅಲ್ಲ– ಎಂದು ನಿಶ್ಚಯವಾಗಿಬಿಡುತ್ತವೆ. ನೀರಿನ ಮೇಲಿರುವ ಮಂಜಿನಗಡ್ಡೆಯನ್ನು ಪರೀಕ್ಷಿಸಿ ನೋಡಿಕೊಂಡಾಗ ಎಲ್ಲವೂ ನೀರೇ ಎಂದು ಗೊತ್ತಾಗುವಂತೆ ಶರೀರಾದಿಗಳೆಲ್ಲವೂ ನಿಜವಾಗಿ ಆತ್ಮನೇ ; ಆವನಲ್ಲಿ ಕರ್ತೃತ್ವಾದಿಗಳು ಇಲ್ಲವೇ ಇಲ್ಲ, ಬಾಲ್ಯಾದ್ಯವಸ್ಥೆಗಳೂ ಇಲ್ಲ–ಎಂದು ಗೊತ್ತಾಗಿಬಿಡುತ್ತದೆ. ಹೀಗೆ ನಮ್ಮ ಜ್ಞಾನವು ಭಗವದ್ವಿಷಯವಾದಾಗ ಸಾಂಖ್ಯಯೋಗವೆನಿಸುವದು.

ಇದರಂತೆಯೇ ಕರ್ಮವೂ ಭಗವಂತನಿಗೆ ಸಂಬಂಧಪಟ್ಟಾಗ **ಕರ್ಮಯೋಗ**ವೆನಿಸುವದು. ಆದರೆ ಇಲ್ಲಿ ಸಾಧಕನಿಗೆ ಕರ್ತೃತ್ವಬುದ್ಧಿಯಿರುತ್ತದೆ; ಸಾಂಖ್ಯಯೋಗದಂತೆ ಶೀತೋಷ್ಣಗಳು ಆತ್ಮನಿಗಿಲ್ಲವೇಇಲ್ಲವೆಂಬ ಬುದ್ಧಿಯೇನೂ ಇರುವದಿಲ್ಲ, ಕರ್ತೃತ್ವಬುದ್ಧಿಯಿರುವದರಿಂದ ಸಾಧಕನು ದ್ವಂದ್ವಗಳನ್ನು ಆಗಾಗ್ಗೆ ಬಂದು ಹೋಗುವವೆಂಬ ವಿಮರ್ಶೆಯಿಂದ ಸಹಿಸಿಕೊಳ್ಳಬೇಕಾಗುತ್ತದೆ.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

ಗೀ. ೨–೪೫

ಎಂದಿರುವಂತೆ ಕರ್ಮಯೋಗಿಯಾದವನು ಕಾಮರಹಿತನಾಗಿ, ಶೀತೋಷ್ಣಾದಿ ದ್ವಂದ್ವಗಳಿಂದ ಮನಸ್ಸನ್ನು ಏರುಪೇರುಮಾಡಿಕೊಳ್ಳದೆ ಇರುವದಕ್ಕೆ ಪ್ರಯತ್ನಿಸಬೇಕು ; ಇದು **ನಿರ್ದ್ವಂದ್ವತ್ವ** ; ರಜಸ್ತಮೋಗುಣಗಳನ್ನು ಬಿಟ್ಟು ಯಾವಾಗಲೂ ಶುದ್ಧ ಸತ್ತ್ವಸ್ಥನಾಗಬೇಕು, ತನಗೆ ಇಂಥದ್ದೊಂದರ ಲಾಭವಾಗಬೇಕು, ಅದು ದೊರಕಿದ ಮೇಲೆ ಅದನ್ನು ಕಾಪಾಡಿಕೊಳ್ಳಬೇಕು– ಎಂಬ ಯೋಚನೆ ಇರಬಾರದು. ಇದೇ **ನಿರ್ಯೋಗಕ್ಷೇಮತ್ವ**. ಯಾವ ಪ್ರಮಾದವೂ ಇಲ್ಲದೆ ಪರಮೇಶ್ವರನಿಗೆ ತಾನು ಮಾಡಿದ ಕರ್ಮವನ್ನು ಅರ್ಪಿಸಬೇಕು. ಈ ಮೂರು ಕರ್ಮಯೋಗಕ್ಕೆ ಆವಶ್ಯವಾದ ಅಂಗಗಳು.

ತಪಸ್ವಿನೋ ದಾನಪರಾ ಯಶಸ್ವಿನೋ
ಮನಸ್ವಿನೋ ಮನ್ತ್ರವಿದಃ ಸುಮಙ್ಗಲಾಃ ।
ಕ್ಷೇಮಂ ನ ವಿನ್ದನ್ತಿ ವಿನಾ ಯದರ್ಪಣಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥ ಭಾಗ. ೨-೪-೧೭

ಎಂದಂತೆ ತಾನು ಮಾಡುತ್ತಿರುವ ಕರ್ಮ, ದಾನ, ತಪಸ್ಸು, ಮಂತ್ರಜಪ-ಮುಂತಾದವೆಲ್ಲವೂ ಭಗವಂತನ ಆರಾಧನೆಯೇ ಆಗಲೆಂದು ಆತನಿಗೇ ಅರ್ಪಿಸುತ್ತಿರಬೇಕು. ಹೀಗೆ ಕರ್ಮವು ಭಗವಂತನಿಗೆ ಸಂಬದ್ಧವಾದರೆ ಅದು ಕರ್ಮಯೋಗವಾಗುವದು. ಇದನ್ನೇ 'ಕರ್ಮಯೋಗೇಣ ಚಾಪರೇ' ಎಂದಿರುವದು.

ಇನ್ನು ಧ್ಯಾನಯೋಗದ ವಿಚಾರ. ಇದರಲ್ಲಿ ಇಂದ್ರಿಯಗಳಿಂದ ಹಿಂತಿರುಗಿ ಇಂದ್ರಿಯಾರ್ಥಗಳ ಚಿಂತನೆಯನ್ನು ಬಿಟ್ಟು ಮನಸ್ಸನ್ನೂ ಬುದ್ಧಿಯನ್ನೂ ಆತ್ಮನ ಕಡೆಗೇ ತಿರುಗಿಸಿ ಅಲುಗಾಡದಂತೆ ಆತನಲ್ಲಿಯೇ ನಿಲ್ಲಿಸಿದರೆ ಅಂತಃಕರಣವು ಭಗವಂತನಲ್ಲಿಯೇ ಕರಗಿಹೋಗುತ್ತದೆ.

ಪ್ರಶಾನ್ತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥
ಗೀ. ೬-೧೪

ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ॥ ಗೀ. ೬-೨೭

ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ವಿಷಯಗಳ ಚಿಂತನೆಯಿಲ್ಲದೆ, ಅದನ್ನು ಸಮಾಧಾನಗೊಳಿಸಿಕೊಂಡು ಭಗವತ್ಪರನಾಗಿರಬೇಕು. ಹೀಗೆ ಭಗವಂತನನ್ನು ಧ್ಯಾನಮಾಡುತ್ತಿದ್ದರೆ ಯೋಗಿಯ ಮನಸ್ಸು ಬ್ರಹ್ಮದಲ್ಲಿಯೇ ಕರಗಿಹೋಗುವದು. ಆಗ ಅವನು ಬ್ರಹ್ಮವೇ ಆಗಿಬಿಡುತ್ತಾನೆ. ಅವನಿಗೆ ಬ್ರಹ್ಮಾನಂದವೆಂಬ ಉತ್ತಮ ಸುಖವು ಲಭಿಸುವದು.

ಧ್ಯಾನವು ಬೇರೆಬೇರೆಯ ದೇವತೆಗಳನ್ನು ಕುರಿತದ್ದೂ ಆಗಿರಬಹುದು. ಆದರೆ

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥
ಗೀ. ೬-೪೭

ಯೋಗಿಗಳಲ್ಲೆಲ್ಲ ಭಗವಂತನಲ್ಲಿಯೇ ಇಟ್ಟ ಅಂತಃಕರಣನಾಗಿ ಶ್ರದ್ಧಾಯುಕ್ತನಾಗಿ ಯಾವನು ಆತನನ್ನೇ ಭಜಿಸುತ್ತಿರುವನೋ ಅಂಥ ಭಕ್ತನೇ ಪರಮಯೋಗಿಯು. ಭಗವಂತನಿಗೆ ಸಂಬಂಧಪಟ್ಟದ್ದರಿಂದಲೇ ಇದು 'ಧ್ಯಾನಯೋಗ'ವೆನಿಸುತ್ತದೆ.

ಇನ್ನು ಕೆಲವರಿಗೆ ಯಾವ ಯೋಗವನ್ನು ಮಾಡಬೇಕೆಂಬುದೂ ತಿಳಿದಿರುವದಿಲ್ಲ. ಅವರು ಭಗವಂತನಲ್ಲಿ ಮನಸ್ಸಿಡುವದಕ್ಕೆ ಉಪಾಯವೇನು ?–ಎಂದು ದೊಡ್ಡವರನ್ನು ಕೇಳಿ ಅವರು ಹೇಳಿದ ಉಪಾಸನಾಕ್ರಮವನ್ನು ಅನುಸರಿಸುತ್ತಾರೆ. ಅಷ್ಟೇ ಅವರಿಗೆ ಸಾಕಾಗಿರುತ್ತದೆ. ಒಬ್ಬನು ಶ್ರೀರಾಮಕೃಷ್ಣಪರಮಹಂಸರಲ್ಲಿ ಬಂದು "ನನಗೆ ಮದ್ಯಪಾನಾದಿದುರ್ವ್ಯಸನಗಳನ್ನು ಬಿಡುವದಕ್ಕೆ ಆಗುವದಿಲ್ಲವಲ್ಲ! ಏನು ಮಾಡಲಿ?" ಎಂದು ಕೇಳಿದನಂತೆ, ಆಗ "ಆ ಕೆಲಸಗಳನ್ನು ಮಾಡುವಾಗಲೂ ಭಗವಂತನನ್ನೇ ಸ್ಮರಿಸುತ್ತಿರು" ಎಂದು ಆ ಮಹನೀಯರು ಬುದ್ಧಿ ಹೇಳಿದರಂತೆ.

**ಗೋವಿನ್ದೇತಿ ಸದಾ ಸ್ನಾನಂ ಗೋವಿನ್ದೇತಿ ಸದಾ ಜಪಃ ।**
**ಗೋವಿನ್ದೇತಿ ಸದಾ ಧ್ಯಾನಂ ಗೋವಿನ್ದೇತಿ ಚ ಕೀರ್ತನಮ್**

ಎಂಬ ದೊಡ್ಡವರ ಉಕ್ತಿಯಂತೆ ಸ್ನಾನ, ಜಪ, ಧ್ಯಾನ, ಕೀರ್ತನೆ– ಮುಂತಾದ ಯಾವ ಸಾಧನವನ್ನೇ ಮಾಡಲಿ, ಭಗವಂತನಿಗೆ ಅದನ್ನು ಸಂಬಂಧಿಸಿಕೊಳ್ಳಬೇಕು. ಆಗ ಅದು 'ಯೋಗ'ವಾಗುವದು.

## ೪೩. ಗುಣತ್ರಯವಿಭಾಗ
### ( 13—9—69 )

ನಿನ್ನೆಯ ದಿವಸ ಆತ್ಮದರ್ಶನಕ್ಕೆ ಉಪಾಯವಾದ ಯೋಗಗಳನ್ನು ಹೇಳಿದ್ದಾಗಿದೆ. ಇಲ್ಲಿ "ಆತ್ಮದರ್ಶನ" ಎಂದರೆ ದ್ರಷ್ಟೃ, ದರ್ಶನ, ದೃಶ್ಯ– ಎಂಬ ವಿಭಾಗವಿಲ್ಲದೆ ಅನುಭವದಿಂದ ಕಾಣುವದು. ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯರು ಮೈತ್ರೇಯಿಗೆ 'ಆತ್ಮನನ್ನು ನೋಡಬೇಕು, ಕೇಳಬೇಕು, ಮನನ ಮಾಡಬೇಕು, ನಿದಿಧ್ಯಾಸನಮಾಡಬೇಕು' ಎಂದು ಹೇಳಿದ್ದಾರಷ್ಟೆ ? ಅಲ್ಲಿಯೂ ದರ್ಶನವೆಂದರೆ ಅನುಭವವೇ. ಆತ್ಮನು ಸ್ವರೂಪದಲ್ಲಿರುವಾಗ ಅವನನ್ನು ದರ್ಶನ ಮಾಡುವದು– ನೋಡುವದಕ್ಕೆ ವಿಷಯವಾಗಿಸಿಕೊಳ್ಳುವದು– ಆಗಲಾರದು. ಹೀಗಿದ್ದರೂ "ಆತ್ಮಾ ವಾ ಅರೇ ದ್ರಷ್ಟವ್ಯಃ" ಎಂದು ಶ್ರುತಿಯಲ್ಲಿಯೂ 'ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿತ್' ಎಂದು ಸ್ಮೃತಿಯಲ್ಲಿಯೂ ಹೇಳಿದೆಯಲ್ಲ! ಅದಕ್ಕೆ ಅಭಿಪ್ರಾಯವೇನು ?–ಎಂದರೆ ಈಗ ನಾವು ಆತ್ಮನನ್ನು ಆತ್ಮನ ರೂಪದಲ್ಲಿ ಕಾಣುತ್ತಿಲ್ಲ; ಅವನನ್ನು ಶರೀರಾದಿಯಾದ ಅನಾತ್ಮರೂಪದಿಂದ

ಅನುಭವಿಸುತ್ತಿರುತ್ತೇವೆ. ಅಷ್ಟರಿಂದ ಆತ್ಮನನ್ನು ಸರಿಯಾಗಿ ಕಾಣಬೇಕು ಎಂದು ಶ್ರುತಿಸ್ಮೃತಿಗಳಲ್ಲಿ ಹೇಳಿದುತ್ತದೆ. ಸ್ವರೂಪದಲ್ಲಿರುವ ಆತ್ಮನು **"ಯತ್ ಸಾಕ್ಷಾತ್ ಅಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಃ"** (ಬೃ. ೩-೪-೧) ಎಂದಿರುವಂತೆ ಸಾಕ್ಷಾದ್ರೂಪನಾಗಿಯೇ ನಮ್ಮ ಆತ್ಮನೇ ಆಗಿ ಇದ್ದುಕೊಂಡಿರುವದರಿಂದ ಅವಿಷಯನಾದ ಅವನನ್ನು ಕಾಣುವದು ಯಾರಿಂದಲೂ ಆಗುವದಿಲ್ಲ, ಆಗ ಆತನನ್ನು ಕಾಣಬೇಕಾದ ಆವಶ್ಯಕತೆಯೂ ಇಲ್ಲ. ಆದ್ದರಿಂದಲೇ **" ಆತ್ಮನ್ಯೇವಾತ್ಮಾನಂ ಪಶ್ಯೇತ್ "** ( ಬೃ. ಮಾ. ೪-೨-೨೮ ), **'ಪಶ್ಯನ್ತಿ ಕೇಚಿದಾತ್ಮನವಾತ್ಮನಾ'** (ಗೀ. ೧೩-೨೪) ಎಂದು ಆತ್ಮರೂಪದಿಂದ ಕಾಣುವ ಆವಶ್ಯಕತೆಯನ್ನು ಶ್ರುತಿಸ್ಮೃತಿಗಳಲ್ಲಿ ಹೇಳಿರುತ್ತದೆ. ಅವಿವೇಕಿಯಾದ ಮುದುಕಿಯೊಬ್ಬಳು ಕತ್ತಲೆಯಲ್ಲಿ ಮನೆಯೊಳಗೆ ಕಳೆದುಕೊಂಡ ಸೂಜಿಯನ್ನು ಬೆಳಕಿದೆ ಎಂಬ ಕಾರಣದಿಂದ ಬೀದಿಯಲ್ಲಿ ಹುಡುಕುತ್ತಿದ್ದಳೆಂಬ ಕಥೆಯ ದೃಷ್ಟಾಂತದಂತೆ ಜನರು ಸರ್ವಾಂತರನಾದ ಆತ್ಮನನ್ನು ತಮ್ಮ ದೇಹದಿಂದ ಹೊರಗೆ ಹುಡುಕುತ್ತಾ ಇರುತ್ತಾರೆ. ವ್ಯಾಖ್ಯಾನಪ್ರಸ್ಥಾನದ ವೇದಾಂತಿಗಳು ಕೆಲವರು ಆತ್ಮನ **"ಸಾಕ್ಷಾತ್ಕಾರವಾಗುವದು ಆವಶ್ಯ"**-ಎಂದು ಹೇಳುವದುಂಟಾದರೂ ಅವಿಷಯನಾದ ಆತ್ಮನ ಸಾಕ್ಷಾತ್ಕಾರವೆಂಬ ಮಾತು ಯುಕ್ತಿಯುಕ್ತವಲ್ಲವೆಂಬುದು ಸ್ವಲ್ಪ ಅವಧಾನದಿಂದ ವಿಚಾರಮಾಡಿದಮಾತ್ರದಿಂದ ಸ್ಫುಟವಾಗುವದರಿಂದ ಆ ವಿಷಯಕ್ಕೆ ಹೆಚ್ಚಿನ ಚರ್ಚೆಯೇನೂ ಇಲ್ಲಿ ಬೇಕಾಗಿಲ್ಲ.

ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿ ಕೂಟಸ್ಥಚೈತನ್ಯಸ್ವರೂಪನಾಗಿದ್ದರೂ ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮಸ್ಸುಗಳ ವಿವೇಕವಿಲ್ಲದ್ದರಿಂದ ಅವನಿಗೆ ಪರಿಚ್ಛಿನ್ನವಾದ ಸಂಸಾರಿತ್ವವು ಇರುವಂತೆ ಅವಿವೇಕಿಗಳಿಗೆ ತೋರುತ್ತಿರುತ್ತದೆ.

ಹೀಗೆ ಪರಮಾತ್ಮಜ್ಞಾನವಿಲ್ಲದೆ ಅನಾದಿಯಾದ ಅವಿದ್ಯೆಯಿಂದ ಜೀವನೆಂದು ಮನುಷ್ಯನು ತನ್ನನ್ನುತಾನೇ ತಪ್ಪಾಗಿ ಭಾವಿಸಿಕೊಂಡಿರುವ ಅವಿದ್ಯಾವ್ಯವಹಾರದ ದಶೆಯಲ್ಲಿ-

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಮ್ಭವಾಃ ।**
**ನಿಬಧ್ನನ್ತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್** ॥ ಗೀ. ೧೪-೫

ಪ್ರಕೃತಿಯ ಗುಣಗಳು ಆತ್ಮನನ್ನು ಬಂಧಕ್ಕೆ ಒಳಗಾಗಿಸಿರುತ್ತವೆ. ಹೇಗೆಂದರೆ :

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಙ್ಗೇನ ಬಧ್ನಾತಿ ಜ್ಞಾನಸಙ್ಗೇನ ಚಾನಘ ॥**
**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಙ್ಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌನ್ತೇಯ ಕರ್ಮಸಙ್ಗೇನ ದೇಹಿನಮ್ ॥**

ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥
ಸತ್ತ್ವಂ ಸುಖೇ ಸಞ್ಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಞ್ಜಯತ್ಯುತ ॥

ಗೀ: ೧೪—೮,೯

ನಾವು ಸತ್ಯಜ್ಞಾನಾನಂದಸ್ವರೂಪರು ಎಂದು ಶಾಸ್ತ್ರವು ಮತ್ತೆಮತ್ತೆ ಹೇಳಿದರೂ ನಮಗೆ ನಾಶವುಂಟೆಂದೂ ಮರಣದಿಂದ ಬಿಡುಗಡೆಯಾಗುವ ಉಪಾಯವನ್ನು ಕಂಡುಕೊಳ್ಳಬೇಕೆಂದೂ ಅದಕ್ಕಾಗಿ ಜ್ಞಾನವನ್ನು ಸಂಪಾದಿಸಿಕೊಂಡು ಆನಂದ ಸ್ವರೂಪವಾದ ಮೋಕ್ಷವನ್ನು ಪಡೆಯಬೇಕೆಂದೂ ನಾವು ಭಾವಿಸಿರುವದಕ್ಕೆ ಸತ್ತ್ವಾದಿ ಗುಣಗಳಲ್ಲಿ ನಮಗಿರುವ ತಾದಾತ್ಮ್ಯಾಭಿಮಾನವೇ ಕಾರಣವಾಗಿರುತ್ತದೆ.

ಒಬ್ಬ ಅಧಿಕಾರಿಗಳಲ್ಲಿ ತನ ಗದ್ದೆಗೆ ನೀರುಕೊಡಿಸಬೇಕೆಂದು ರೈತನೊಬ್ಬನು ಅರ್ಜಿಯನ್ನು ಹಾಕಿಕೊಂಡಿದ್ದನು. ಅವನು ತನ್ನ ಮನವಿಯನ್ನು ಹೇಳಿಕೊಳ್ಳುವದಕ್ಕೆಂದು ಅಧಿಕಾರಿಯ ಬಳಿಗೆ ತಾನೇ ಬಂದಿದ್ದಾಗ ಒಬ್ಬ ಸಂಗೀತಗಾರನು ಬಂದು ಅಲ್ಲಿ ಶಂಕರಾಭರಣರಾಗವನ್ನು ಆಲಾಪಮಾಡುತ್ತಿದ್ದನು; ಅಧಿಕಾರಿಯು ಸಂಗೀತ ಜ್ಞಾನವಿಲ್ಲದವನಾದ್ದರಿಂದ ಮತ್ತೆ ಮತ್ತೆ 'ಶಂಕರಾಭರಣವನ್ನು ಹಾಡಿರಿ' ಎಂದು ಕೇಳುತ್ತಿದ್ದನು. ಇವರಿಗೆ ಆ ರಾಗದಮೇಲೆ ಬಹಳ ಪ್ರೀತಿಯಿರುವದೆಂದು ತಪ್ಪಾಗಿ ಭಾವಿಸಿ ಸಂಗೀತಗಾರನು ಮತ್ತೆಮತ್ತೆ ಅದನ್ನೇ ಹಾಡುತ್ತಲೇಇದ್ದನು. ಆದರೂ ಅಧಿಕಾರಿಯು 'ಶಂಕರಾಭರಣವನ್ನು ಹಾಡಿರಿ' ಎಂಬ ಪಲ್ಲವಿಯನ್ನು ಬಿಡಲಿಲ್ಲ. ರೈತನು ಸಂಗೀತದ ಜ್ಞಾನವುಳ್ಳವನು. ಅವನು ಈ ದುರವಸ್ಥೆಯನ್ನು ಕಂಡು ಬೇಸತ್ತು 'ರಾಯರೆ, ನನ್ನ ಗದ್ದೆಗೆ ನೀವು ನೀರು ಕೊಡಿಸದೆಇದ್ದರೂ ಚಿಂತೆಯಿಲ್ಲ, ಇದು ಖಂಡಿತವಾಗಿಯೂ ಶಂಕರಾಭರಣವೇ !' ಎಂದು ಕೂಗಿ ಹೇಳಿದನಂತೆ ! ಶಾಸ್ತ್ರವು ಎಷ್ಟುಸಲ 'ನೀವು ಜ್ಞಾನಾನಂದಸ್ವರೂಪರೇ' ಎಂದು ಹೇಳುತ್ತಿದ್ದರೂ ಜನರೂ ಜ್ಞಾನಸಂಪಾದನೆಗೂ ಸುಖಸಂಪಾದನೆಗೂ ಪ್ರಯತ್ನವನ್ನು ಮಾಡುತಿರುವದೇಕೆಂದರೆ ಅವರಿಗೆ ತಮ್ಮ ಸ್ವರೂಪದ ಅರಿವಿಲ್ಲದೆ ಸತ್ತ್ವಗುಣದಲ್ಲಿಯೇ ತಾದಾತ್ಮ್ಯಬುದ್ಧಿಯಿರುತ್ತದೆ. ಸತ್ತ್ವಗುಣದಿಂದ ಲೌಕಿಕಜ್ಞಾನವೂ ಲೌಕಿಕಸುಖವೂ ವ್ಯವಹಾರದಲ್ಲಿ ಸಿಕ್ಕುವದು ನಿಜ. ಆದರೆ ಅದು ನಿಜವಾದ ಜ್ಞಾನವಲ್ಲ, ನಿಜವಾದ ಸುಖವೂ ಅಲ್ಲ; ರತ್ನದ ಪ್ರತಿಬಿಂಬವು ನೀರಿನಲ್ಲಿ ಮಾರುಹೊಳೆಯುತ್ತಿದ್ದರೆ ಅದು ನಿಜವಾದ ರತ್ನವೆನಿಸೀತೆ? ಹಾಗೆಯೇ ನಿರ್ಮಲವಾಗಿರುವ ಸತ್ತ್ವಗುಣವು ತಿಳಿ ನೀರಿನಂತೆಯೂ ಸ್ಫಟಿಕದಂತೆಯೂ ಸ್ವಚ್ಛವಾಗಿ ನಿರ್ದುಷ್ಟವಾಗಿರುವದರಿಂದ ಅದರ ಸಂಬಂಧದಿಂದ ನಮಗೆ ಲೋಕದಲ್ಲಿ ಶಾಸ್ತ್ರಾದಿಗಳ ಜ್ಞಾನವಾಗುತ್ತದೆ, ವಿಷಯಗಳಿಂದ ಆಗುವ ಸುಖವೂ ಆಗುತ್ತದೆ; ಆದರಿಂದ ಅವಿವೇಕಿಗಳು 'ಈಗ

ನಮಗೆ ವಿಷಯದ ಜ್ಞಾನವಾಯಿತು', 'ಈಗ ವಿಷಯಭೋಗದಿಂದ ಸುಖ ವಾಯಿತು' ಎಂದು ಭ್ರಮಿಸುತ್ತಾರೆ. ಜ್ಞಾನಸುಖಗಳಲ್ಲಿ ಇದು ನನ್ನದು ಎಂಬ ಸಂಗವೂ, ಆ ಸಂಗದಿಂದ ಸಂಸಾರಬಂಧವೂ ಆಗುತ್ತವೆ. ಜ್ಞಾನಸುಖ ಗಳನ್ನು ಲೋಕದಲ್ಲಿ ಎಷ್ಟೇ ಹೆಚ್ಚಿನ ಲಾಭವೆಂದು ನಾವು ಬಗೆಯುತ್ತಿದ್ದರೂ ಅವುಗಳಿಂದಲೂ ಹೀಗೆ ನಮಗೆ ಬಂಧವೇ ಆಗುತ್ತಿರುವದು. ಈ ಜ್ಞಾನಸುಖ ಗಳಿಗಾಗಿ ಇಚ್ಛಾಪೂರ್ವಕವಾಗಿ ಪ್ರಯತ್ನಿಸುವದೆಂಬುದು ಅನಾತ್ಮವಾದ ಅಂತಃಕರಣಕ್ಕೇ ಸೇರಿದ್ದು. ಇಚ್ಛೆ, ದ್ವೇಷ, ಸುಖ, ದುಃಖ- ಮುಂತಾದವೆಲ್ಲ ಕ್ಷೇತ್ರಧರ್ಮವೆಂದು ಭಗವಂತನು (೧೩-೬ರಲ್ಲಿ) ಹೇಳಿಯೇ ಇರುತ್ತಾನಲ್ಲವೆ? ಆದ್ದರಿಂದ 'ನಾನು ಅಸಂಗನು, ನಿತ್ಯಜ್ಞಾನಾನಂದಸ್ವರೂಪನು' ಎಂಬುದನ್ನರಿ ಯದೆ ಲೌಕಿಕಜ್ಞಾನಾನಂದಗಳ ಸಂಗದಿಂದ ಜ್ಞಾನಸುಖಗಳನ್ನು ಪಡೆಯಲೆಳ ಸುವದು ಸತ್ತ್ವಗುಣದಿಂದಾದ ಸಂಸಾರಬಂಧನವೇ ಎಂದಾಯಿತು. '**ಸುಖಸಙ್ಗೇನ ಬಧ್ನಾತಿ ಜ್ಞಾನಸಙ್ಗೇನ ಚ**' ಎಂಬ ವಾಕ್ಯ ಆಶಯವಿದು.

ಹೀಗೆಯೇ ರಜೋಗುಣವು ರಾಗಾತ್ಮಕವಾಗಿದ್ದು ತೃಷ್ಣೆಯಲ್ಲಿಯೂ ಕರ್ಮ ದಲ್ಲಿಯೂ (ಅಸಂಗನಾದ ಈ ಆತ್ಮನನ್ನು) ಅವಿದ್ಯಾವಸ್ಥೆಯಲ್ಲಿ ಬಂಧಿಸುತ್ತಿರು ವದು. ಹಣವಂತನು ತನ್ನಲ್ಲಿ ಏನಾದರೂ ಬೇಡುವದಕ್ಕೆ ಬಂದವರನ್ನು 'ನಾಳೆ ಬಾ, ನಾಡಿದ್ದು ಬಾ' ಎನ್ನುವಂತೆ ಈ ರಜೋಗುಣವು ಆಶೆಯನ್ನು ಹುಟ್ಟಿಸಿ ಮತ್ತೆಮತ್ತೆ ಕರ್ಮದಲ್ಲಿ ತೊಡಗಿಸುತ್ತಿರುವದು. ಶ್ರೀರಾಮಕೃಷ್ಣಪರಮಹಂಸರು ಹೇಳಿರುವ ಒಂದು ಕಥೆಯಲ್ಲಿ-ಒಂದು ಎತ್ತು ಒಂದು ಮರದ ಸುತ್ತಲೂ ಸುಮ್ಮನೆ ಸುತ್ತು ತ್ತಿರುವದನ್ನು ಕಂಡವರು ಇದೇಕೆಂದು ಕುತೂಹಲದಿಂದ ವಿಚಾರಿಸುವಲ್ಲಿ ಅದು ಹಿಂದೆ ಗಾಣದ ಸುತ್ತಲೂ ತಿರುಗುವ ಅಭ್ಯಾಸವಿದ್ದದ್ದರಿಂದ ಹಾಗೆ ಮಾಡುತ್ತಿದೆ ಯೆಂದು ತಿಳಿದುಬಂದಿತಂತೆ! ಹೀಗೆಯೇ ರಜೋಗುಣದಿಂದ ಕಾಮ್ಯಕರ್ಮಗಳ ಸಂಗವಾಗಿ ಅದರಿಂದ ಜನರು ಸಂಸಾರಬದ್ಧರಾಗಿರುತ್ತಾರೆ. ಆದ್ದರಿಂದ '**ತನ್ನಿಬಧ್ನಾತಿ ಕೌನ್ತೇಯ ಕರ್ಮಸಙ್ಗೇನ ದೇಹಿನಮ್**' ಎಂದು ಭಗವಂತನು ಹೇಳಿರುತ್ತಾನೆ.

ಇದರಂತೆಯೇ ತಮೋಗುಣವು ಅವಿವೇಕದಿಂದ ನಮ್ಮನ್ನು ಮೋಹಕ್ಕೆ ಪಕ್ಕು ಮಾಡುವದು. ಪ್ರಮಾದ, ಆಲಸ್ಯ, ನಿದ್ರೆ-ಇವುಗಳಿಂದ ಮಂಕುಕವಿಯು ವಂತೆ ಮಾಡಿ ಬಂಧಕವಾಗಿರುತ್ತದೆ. ವ್ಯಸನಿಗಳಾದ ಜನರು ನಾಸ್ತಿಕ್ಯ, ಜೂಜು, ಕಳವು -ಮುಂತಾದವುಗಳಲ್ಲಿ ತೊಡಗಿ ಸ್ತ್ರೀಧನಾದಿಗಳಲ್ಲಿ ಆಸಕ್ತರಾಗಿರುವದು ರಜೋಗುಣದಿಂದಲೇ; ಮದ್ಯಾದಿಗಳ ಸಂಗದಿಂದ ಮೈಮರೆತುಬಿಟ್ಟಿರುವದು ತಮೋಗುಣದಿಂದಲೇ. ಅಭಕ್ತರ ಸಂಗದಿಂದಲೂ ನಮಗೆ ರಜಸ್ತಮಸ್ಸುಗಳ

ಸಂಗವಾಗುತ್ತವೆ. ರಜೋಗುಣಪ್ರಾಬಲ್ಯದಿಂದಲೂ ನಾವು ಮಾಡಿದ ಕರ್ಮಗಳ ಆಯಾಸದಿಂದಲೂ ನಮಗೆ ನಿದ್ರೆಯೇ ಮುಂತಾದ ತಮೋಗುಣದ ಕಾರ್ಯಗಳು ಗಂಟುಬೀಳಬಹುದು. ಸತ್ತ್ವ ಗುಣದಿಂದಾದ ಜ್ಞಾನವನ್ನು ಪರಮಾರ್ಥಜ್ಞಾನವೆಂದು ಭ್ರಮಿಸುವಂತೆಯೇ ನಿದ್ರಾಲಸ್ಯಗಳಲ್ಲಿ ಕಾಲವನ್ನು ಕಳೆಯುತ್ತಿರುವ ಮೂಢರು ತಾವು ಶಾಂತರಾಗಿದ್ದೇವೆಂದು ಭ್ರಮಿಸಬಹುದು. ತತ್ತ್ವಬೋಧನೆಗೆಂದು ತಮ್ಮ ಬಳಿಗೆ ಬಂದಿದ್ದ ಒಬ್ಬ ಸೋಮಾರಿಗೆ ಸ್ವಾಮಿ ವಿವೇಕಾನಂದರು "ಫುಟ್‌ಬಾಲ್" (ಕಾಲಚೆಂಡಿನ) ಆಟದಲ್ಲಿ ಮೊದಲು ತೊಡಗು!—ಎಂದು ಉಪದೇಶಿಸಿದರಂತೆ! ಸೋಮಾರಿತನಕ್ಕಿಂತ ಯಾವುದಾದರೊಂದು ಕೆಲಸದಲ್ಲಿ ತೊಡಗುವುದನ್ನು ಮೊದಲು ಕಲಿಯಬೇಕು; ಆಮೇಲೆ ಸಾತ್ತ್ವಿಕವ್ಯವಹಾರದಲ್ಲಿ ಆಸಕ್ತರಾಗಿ ಗುಣತ್ರಯವನ್ನು ಮೀರುವುದಕ್ಕೆ ಅರ್ಹರಾದೇವು.

ಗುಣಗಳು ಪ್ರಕೃತಿಯಿಂದಾಗಿರುವುವು, ಆತ್ಮನ ಧರ್ಮಗಳಲ್ಲ. ಅವುಗಳು ಅಜ್ಞಾನದಶೆಯಲ್ಲಿ ನಮ್ಮನ್ನು ಸ್ವರೂಪದಿಂದ ಬಾಧಿಸಿ ಸಂಸಾರಬಂಧವನ್ನುಂಟುಮಾಡುತ್ತವೆ—ಎಂಬುದನ್ನು ಅರಿತುಕೊಂಡು ಅವುಗಳ ಬಂಧದಿಂದ ಬಿಡುಗಡೆಯನ್ನು ಹೊಂದುವುದಕ್ಕೆ ಪ್ರಯತ್ನಿಸಬೇಕು.

---

## ೪೪. ಸತ್ತ್ವಾದಿಗುಣಗಳೇ ಸಂಸಾರಬಂಧಕ್ಕೆ ಕಾರಣ

( 16—9—69 )

ಸತ್ತ್ವರಜಸ್ತಮೋಗುಣಗಳು ನಮಗೆ ಯಾವಯಾವ ಸಂಗವನ್ನುಂಟುಮಾಡಿ ಬಂಧಕವಾಗಿವೆ ಎಂಬುದನ್ನು ಹೇಳಿದ್ದಾಗಿದೆ. ಈ ಗುಣಗಳಲ್ಲಿ ಒಂದು ಹೆಚ್ಚಾಗಿರುವಾಗ ಇನ್ನೆರಡು ಹಿಮ್ಮೆಟ್ಟಿರುತ್ತವೆ. ಜ್ಞಾನ, ಕಾಮಕರ್ಮ, ಆಲಸ್ಯ—ಎಂಬ ಆಯಾ ಗುಣಗಳ ಕಾರ್ಯವು ಎದ್ದುಕೊಂಡದ್ದನ್ನು ಕಂಡುಕೊಂಡು ಇಂಥಿಂಥ ಗುಣವು ಈಗ ಎದ್ದಿದೆ, ಈ ಗುಣವ ಕೈ ಮೇಲಾಗಿದೆ—ಎಂದು ನಿಶ್ಚಯಿಸಿಕೊಳ್ಳಬೇಕು. ಸಾಯುವ ಕಾಲಕ್ಕೆ ಯಾವ ಗುಣವು ಎದ್ದುಕೊಂಡಿರುವುದೋ ಅದಕ್ಕನುಗುಣವಾಗಿ ಮುಂದೆ ನಮಗೆ ಜನ್ಮವುಂಟಾಗುತ್ತವೆ. ಸತ್ತ್ವರಜಸ್ತಮೋಗುಣಗಳು ಎದ್ದುಕೊಂಡದ್ದರ ಫಲವಾಗಿ ಊರ್ಧ್ವಗತಿ, ಮಧ್ಯಮಗತಿ—ಇವು ಆಗುತ್ತಿರುವುವು. ಅಂತೂ ಈ ಗುಣಗಳೇ ನಮ್ಮನ್ನು ಸಂಸಾರದಲ್ಲಿ ಕೆಡವಿರುತ್ತವೆ ಎಂಬುದನ್ನು ಗೊತ್ತುಪಡಿಸಿಕೊಳ್ಳುವುದು ಅವಶ್ಯ.

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ |**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ||**

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥**

ಗೀ. ೧೪–೧೯, ೨೦

"ಈ ಗುಣಗಳೇ ಸಾತ್ತ್ವಿಕರಾಜಸತಾಮಸಕರ್ಮಗಳನ್ನು ಮಾಡುತ್ತಿರುವವೇ ಹೊರತು ನನಗೇನೂ ಈ ಕರ್ಮಗಳು ಸೇರಿಲ್ಲ–ಎಂಬುದನ್ನು ಗೊತ್ತುಪಡಿಸಿಕೊಂಡು ಗುಣಗಳಿಗಿಂತ ಆಚೆಯಿರುವ ಆತ್ಮತತ್ತ್ವವನ್ನು ಅನುಭವಕ್ಕೆ ತಂದುಕೊಂಡವನು ನನ್ನ ಸ್ವರೂಪವನ್ನೇ ಪಡೆಯುತ್ತಾನೆ; ದೇಹಗಳಲ್ಲಿ ತೋರಿಕೊಳ್ಳುತ್ತಿರುವ, ಅಥವಾ ದೇಹದ ಜನ್ಮಕ್ಕೆ ಕಾರಣವಾಗಿರುವ, ಈ ಮೂರು ಗುಣಗಳನ್ನು ಮೀರಿದಾತನು ಹುಟ್ಟು, ಸಾವು, ಮುಪ್ಪು, ದುಃಖ– ಎಂಬ ಸಂಸಾರಬಂಧನಗಳಿಂದ ಮುಕ್ತನಾಗಿ ಅಮೃತತ್ವವನ್ನು ಪಡೆಯುತ್ತಾನೆ" ಎಂದು ಭಗವಂತನು ಸಾರಿಹೇಳಿರುತ್ತಾನೆ.

ಈ ಗುಣತ್ರಯವಿಚಾರದಲ್ಲಿ ಸಾಂಖ್ಯರೇ ಅಭಿಯುಕ್ತರು. ವೇದಾಂತದಲ್ಲಿ ಗುಣಗಳ ವಿಚಾರವನ್ನು ಅಷ್ಟಾಗಿ ಹೇಳಿಲ್ಲ; ವೇದಾಂತಸೂತ್ರಗಳಲ್ಲಿ ಸಾಂಖ್ಯರ ಮತವು ಉಪನಿಷತ್ತಿನ ಸಿದ್ಧಾಂತವೇ ಎಂಬುದನ್ನು ಬಲವಾಗಿ ಖಂಡಿಸಿರುತ್ತದೆ. ಆದರೂ **'ಪರಮತಮಪ್ರತಿಷಿದ್ಧಮನುಮತಂ ಭವತಿ'** (ಮತ್ತೊಬ್ಬರ ಮತವನ್ನು ಇಲ್ಲಿ ನಿರಾಕರಿಸದೆ ಇರುವಾಗ ಒಪ್ಪಿದಂತೆ) ಎಂಬ ನ್ಯಾಯವನ್ನು ಅನುಸರಿಸಿ ಭಗವಂತನು ಈ ಗುಣಗಳ ಕಾರ್ಯವನ್ನು ವಿಸ್ತರಿಸಿ ಇವುಗಳಿಂದ ಮುಕ್ತನಾಗುವ ಉಪಾಯವನ್ನು ಕಂಡುಕೊಳ್ಳಬೇಕೆಂದು ಹೇಳಿರುತ್ತಾನೆ.

ಬೇರೆಯ ಶಾಸ್ತ್ರಗಳಲ್ಲಿ ಪ್ರಮಾಣದಿಂದ ಆಯಾ ಪ್ರಮೇಯವನ್ನು ನಿರೂಪಣೆ ಮಾಡುವ ಕ್ರಮವನ್ನೇ ಅನುಸರಿಸಿರುತ್ತದೆ. ಭೌತಿಕವಿಜ್ಞಾನಶಾಸ್ತ್ರವು ನಿರೀಕ್ಷಣಪರೀಕ್ಷಣಸಂವಾದೀಕರಣಗಳಿಂದ ಪ್ರಮೇಯಗಳ ತತ್ತ್ವವನ್ನು ನಿರೂಪಣ ಮಾಡುತ್ತದೆ. 'ಆದ್ದರಿಂದ ವೇದಾಂತವನ್ನು ಭೌತಿಕವಿಜ್ಞಾನಶಾಸ್ತ್ರದ ಪ್ರಕ್ರಿಯೆಗೆ ಹೊಂದಿಸಿಕೊಳ್ಳುವದು ಅವಶ್ಯ, ಅದನ್ನು ಶಾಸ್ತ್ರೀಯವಾಗಿ (Scientific) ಪ್ರತಿಪಾದನೆ ಮಾಡುವದು ಅವಶ್ಯ'–ಎಂದು ಈಗಿನ ವಿದ್ವಾಂಸರು ಕೆಲವರು ಹೇಳುತ್ತಿರುವದುಂಟು; ವೇದಾಂತದ ಪ್ರತಿಪಾದನೆಯು ಕ್ರತುಯುಗಕ್ಕೆ ಸರಿಯಾಗಿರಬಹುದು. ಆಧುನಿಕರ ಪ್ರಗತಿಶೀಲನಮರ್ಯಾದೆಗೆ ತಕ್ಕಂತೆ ಅದನ್ನು ರೂಪಿಸದೆ ಇದ್ದರೆ ಅದು ಜನಪ್ರಿಯವಾಗಲಾರದು– ಎಂದು ಅವರ ಅಭಿಪ್ರಾಯ. ಈ ಅಭಿಪ್ರಾಯವು ಸರಿಯಲ್ಲ; ಏಕೆಂದರೆ ಮಿಕ್ಕ ಎಲ್ಲಾ ಶಾಸ್ತ್ರಗಳೂ ತಮ್ಮತಮ್ಮ ಪ್ರಮೇಯವನ್ನುಮಾತ್ರ ವಿಚಾರಕ್ಕೆ ತೆಗೆದುಕೊಂಡಿವೆಯೇ ಹೊರತು ಪ್ರಮಾಣತತ್ತ್ವವನ್ನಾಗಲಿ ಪ್ರಮಾತೃವಿನ ತತ್ತ್ವವನ್ನಾಗಲಿ

ವಿಚಾರಿಸುವದಕ್ಕೆ ಹೊರಟೇ ಇಲ್ಲ. ಜಗತ್ತೆಲ್ಲವೂ ತ್ರಿಗುಣಾತ್ಮಕವಾಗಿರುತ್ತದೆಯಾದರೂ ಇವೆಲ್ಲವನ್ನೂ ಮೀರಿರುವ ಪರಮಾರ್ಥತತ್ತ್ವವೊಂದು ಇದೆಯೆ ?– ಎಂಬ ಪ್ರಶ್ನೆಯನ್ನುಕೂಡ ಅವು ಎತ್ತಿರುವದಿಲ್ಲ. ಈ ದೃಷ್ಟಿಯಿಂದ ನೋಡಿದರೆ ವೇದಾಂತಶಾಸ್ತ್ರವೆಂಬ ಸಮುದ್ರದಲ್ಲಿ ಅವುಗಳ ವಿಚಾರವು ಒಂದು ಹನಿಯೂ ಆಗಿರುವದಿಲ್ಲ.

ಇದಂತಿರಲಿ, ಈ ಮೂರು ಗುಣಗಳನ್ನೂ ಮೀರುವದಕ್ಕೆ ವೇದಾಂತವಿಚಾರಸರಣಿಯಿಂದಲೇ ಆಗುತ್ತದೆ. ಕರ್ತೃತ್ವವೆಂಬುದು ಗುಣಗಳಿಂದ ಸಂಪೃಕ್ತವಾದ ಅಂತಃಕರಣವು ಇರುವಾಗ ತೋರುವದು. ಆದರೆ ಇದನ್ನು ಪೂರಾ ಮೀರಿದ ದೃಷ್ಟಿಯೊಂದಿದೆ ; ಗುಣಗಳಿಂದಲೇ ಜೀವನಿಗೆ ಕರ್ತೃತ್ವವಾಗಿರುತ್ತದೆ. ಕನಸಿನಲ್ಲಿರುವವರು ತಾವು ಎಚ್ಚತ್ತಿರುವೆವೆಂದೇ ಭಾವಿಸಿಕೊಂಡಿದ್ದರೂ ಎಚ್ಚತ್ತಕೂಡಲೆ ಕನಸಿನಲ್ಲಿದ್ದ ಗ್ರಾಹ್ಯಗ್ರಾಹಕಗಳನ್ನೆಲ್ಲ ಮೀರಿದ ಆತ್ಮನು ಬೇರೆಯಿದ್ದಾನೆಂಬ ಅರಿವು ತಟ್ಟನೆ ಆಗುವಂತೆ, ಮೂರು ಗುಣಗಳಿಗಿಂತಲೂ ಬೇರೆಯಾದ ಅಕರ್ತೃವಾದ ಆತ್ಮನನ್ನು ಕಂಡುಕೊಂಡಾಗ ಸಂಸಾರದಲ್ಲಿ ಜೀವನಿಗೆ ಆಗುತ್ತಿರುವ ಜನ್ಮ, ಮೃತ್ಯು, ಜರಾ, ವ್ಯಾಧಿ, ದುಃಖ– ಎಂಬುದೆಲ್ಲವೂ ಅವಿದ್ಯಾಕಲ್ಪಿತವಾದ ಕನಸುಮಾತ್ರವೇ– ಎಂಬ ಅನುಭವವುಂಟಾಗಿಬಿಡುತ್ತದೆ– ಎಂದು ಭಗವಂತನು ಹೇಳುವದನ್ನು ಕೇಳಿ ಅರ್ಜುನನು–

ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥

ಗೀ. ೧೪–೨೧

ಇದು (೧) ಮೂರು ಗುಣಗಳನ್ನೂ ಮೀರಿರುವವನು ಇಂಥವನೆಂದು ಅವನ ಜೀವನದಲ್ಲಿ ಯಾವ ಚಿಹ್ನೆಗಳನ್ನು ಕಂಡು ಗುರುತಿಸಬೇಕು ? (೨) ಅವನ ಆಚಾರವು ಹೇಗಿರುತ್ತದೆ? (೩) ಈ ಮೂರು ಗುಣಗಳನ್ನು ಮೀರುವದಕ್ಕೆ ಉಪಾಯವೇನು ? –ಎಂಬ ವಿಷಯಗಳನ್ನು ಕುರಿತು ಪ್ರಶ್ನೆಮಾಡಿದ್ದಾನೆ. 'ದಶಕುಮಾರಚರಿತೆ' ಎಂಬ ಕಾವ್ಯದಲ್ಲಿ ಒಬ್ಬ ಋಷಿಯ ಕಥೆಯಿದೆ. ಆತನಿಗೆ ತ್ರಿಕಾಲಜ್ಞಾನವಿದ್ದಿತು. ಅಂಥ ಸಿದ್ಧಪುರುಷನನ್ನು ಯಾರಾದರೂ ಸಂಸಾರದ ತೊಡಕಿನಲ್ಲಿ ಸಿಕ್ಕಿಸುವದಾದೀತೆ ?– ಎಂದು ಸಂಶಯಪಡುವದು ಸ್ವಾಭಾವಿಕವಷ್ಟೆ ? ಒಮ್ಮೆ ರಾಜನ ಸಭೆಯಲ್ಲಿ ನರ್ತನಮಾಡುತ್ತಿದ್ದ ವೇಶ್ಯೆಯರುಗಳಲ್ಲಿ ಯಾವಳು ತನ್ನ ಅಭಿನಯವಿದ್ಯೆಯಲ್ಲಿ ನಿಪುಣಳು ?– ಎಂಬುದನ್ನು ಕುರಿತು ವಿವಾದವಾಯಿತು. ಆಗ ಆ ಋಷಿಯನ್ನು ತನ್ನ ಹಾವಭಾವಗಳಿಂದ ಮರುಳುಗೊಳಿಸಿ ರಾಜನ ಸಭೆಗೆ ಯಾವಳು ಕರೆದುಕೊಂಡುಬರುತ್ತಾಳೋ ಅವಳೇ ಉತ್ತಮನರ್ತಕಿ– ಎಂದು ಸಮಯಬಂಧವನ್ನು ಮಾಡಿಕೊಂಡರು. ರಾಗಮಂಜರಿ ಎಂಬಾಕೆಯು ಸಂಸಾರ

ದಿಂದ ವಿರಕ್ತಳಾದವಳಂತೆ ನಟಿಸುತ್ತಾ ತನ್ನ ತಾಯಿಯಿಂದೊಡಗೂಡಿ ಆ ಋಷಿಯಲ್ಲಿಗೆ ಓಡಿಬಂದು ತನಗೆ ಉಪದೇಶವನ್ನು ಕೊಟ್ಟು ಕಾಪಾಡಬೇಕೆಂದು ಬೇಡಿಕೊಂಡಳು. ಕಾಡಿನಲ್ಲಿರುವದು ಕಷ್ಟವಾದ್ದರಿಂದ ಊರಿಗೆ ಹಿಂತಿರುಗಬೇಕೆಂದು ಋಷಿಯು ಎಷ್ಟು ಬಗೆಯಲ್ಲಿ ಸಮಾಧಾನಗೊಳಿಸಿದರೂ ಕೇಳದೆ ಅವಳು ಅಲ್ಲಿಯೇ ಉಳಿದುಕೊಂಡಳು. ತಾಯಿಯು ಹಿಂದಕ್ಕೆ ಬಂದಳು. ಮುಂದೆ ಆ ಋಷಿಗೂ ರಾಗಮಂಜರಿಗೂ ಆದ ಸಂಭಾಷಣೆಯ ನಿಮಿತ್ತವಾಗಿ ಋಷಿಗೆ ಅವಳಲ್ಲಿ ಅನುರಾಗವುಂಟಾಯಿತು. ಅವಳು ಇದ್ದಲ್ಲಿ ಇರುವದು, ಹೋದಲ್ಲಿಗೆ ಹೋಗುವದು– ಹೀಗೆ ಅವಳಲ್ಲಿ ಪ್ರೇಮಾಂಕುರವಾಗಿ ಆ ಮಂಕುಮುನಿಯು ತನ್ನ ತಪಸ್ಸಿನ ಪ್ರಭಾವವನ್ನೆಲ್ಲ ಕಳೆದುಕೊಂಡು ಅವಳು ಮೆಲ್ಲಮೆಲ್ಲಗೆ ನಗರಕ್ಕೆ ಬರುತ್ತಿದ್ದಂತೆ ಅವಳನ್ನೇ ಹಿಂಬಾಲಿಸಿ ಸಭೆಯವರೆಗೂ ಬಂದುಬಿಟ್ಟನು! ಹೀಗೆ ಗುಣಗಳ ಸಂಗದಿಂದ ಮೋಸಹೋದವನು ಎಷ್ಟೇ ಸಾತ್ತ್ವಿಕನಾಗಿದ್ದರೂ ತನ್ನ ಸಾತ್ತ್ವಿಕಸ್ವಭಾವವನ್ನುಕೂಡ ಕಳೆದುಕೊಳ್ಳುವ ಸಂಭವವಿದೆ. ಆದ್ದರಿಂದ ಲೋಕದಲ್ಲಿ ಯಾವನಾದರೂ ಗು ಣಾ ತೀ ತ ನು ಇರುತ್ತಾನೆಯೆ ?– ಎಂದು ಅರ್ಜುನನು ಕೇಳಿರುತ್ತಾನೆ. ಗುಣಾತೀತನೂ ಲೋಕದಲ್ಲಿಯೇ ಇರುವದರಿಂದ ಮಿಕ್ಕವರಿಗೂ ಅವನಿಗೂ ಆಚಾರದಲ್ಲಿ ಯಾವ ವೈಷಮ್ಯವಿರುತ್ತದೆ ?– ಎಂಬಿದು ಎರಡನೆಯ ಪ್ರಶ್ನೆ.

ಇಲ್ಲಿ ಗುಣಾತೀತನು ಯಾರು ? –ಎಂದು ವಿಚಾರಮಾಡಿ ಇಂಥವನು ಗುಣಾತೀತನು ಎಂದು ಅವನಿಗೆ ಶ್ಲಾಘನಾಪತ್ರವನ್ನು ಬರೆದುಕೊಡುವ ಪ್ರಸಂಗವೇನೂ ಇಲ್ಲ. ಒಬ್ಬರು ಹಿಂದಕ್ಕೆ 'ಈ ಕಲಿಯುಗದಲ್ಲಿ ಜೀವನ್ಮುಕ್ತರು ಯಾರಾದರೂ ಇದಾರೆಯೆ ?' ಎಂಬ ಪ್ರಶ್ನೆಯನ್ನು ತೆಗೆದು 'ಎಲ್ಲರಲ್ಲಿಯೂ ದೋಷವೇ ಕಾಣುತ್ತಿದೆಯಲ್ಲ ! ಜೀವನ್ಮುಕ್ತರು ಇರುವ ಸಂಭವವೇ ಕಾಣಿಸುತ್ತಿಲ್ಲವಲ್ಲ !'– ಎಂದು ನಿರಾಶೆಯ ತೀರ್ಮಾನಕ್ಕೆ ಬಂದಿದ್ದರು! ಪ್ರಕೃತದಲ್ಲಿ ಭಗವಂತನು ಅರ್ಜುನನ ಮೂರು ಪ್ರಶ್ನೆಗಳಿಗೂ ಉತ್ತರವನ್ನು ಕೊಟ್ಟಿರುತ್ತಾನಾದ್ದರಿಂದ ಅಂಥ ನಿರಾಶೆಗೇನೂ ಕಾರಣವಿರುವದಿಲ್ಲ. ಎರಡನೆಯ ಅಧ್ಯಾಯದಲ್ಲಿಯೇ ಈ ವಿಷಯಕ್ಕೆ ಒಂದು ಸಂಕ್ಷಿಪ್ತವಾದ ಉತ್ತರವು ಬಂದಿರುತ್ತದೆ :

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

ಗೀ. ೨–೪೫

ಇದು ಕರ್ಮಯೋಗದ ಅವತರಣಿಕೆಯಾಗಿ ಹೇಳಿದ್ದಾದರೂ ಪ್ರಕೃತಕ್ಕೂ ಇದನ್ನು ಅನ್ವಯಿಸುವದಕ್ಕೆ ಬರುವಂತಿದೆ. ವೇದಗಳು ತ್ರೈಗುಣ್ಯವಿಷಯವಾಗಿರುತ್ತವೆ, ಎಂದರೆ ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿರುವ ಕಾಮಿಗಳಿಗೆ

ವೇದವಲ್ಲಿ ಕರ್ಮಗಳನ್ನೂ ಆ ಕರ್ಮಗಳ ಫಲವನ್ನೂ ಹೇಳಿವೆ. ಆದರೆ ಮುಮುಕ್ಷು ವಾದವನು ಈ ಮೂರು ಗುಣಗಳನ್ನೂ ವಿಾರಬೇಕು. ಇವುಗಳನ್ನು ವಿಾರುವವನು 'ನಿರ್ದ್ವಂದ್ವ'ನಾಗಬೇಕು. ಸುಖದುಃಖಕ್ಕೆ ಹೇತುವಾಗಿರುವ ಪದಾರ್ಥಗಳನ್ನು 'ದ್ವಂದ್ವ'ಗಳೆಂದು ಕರೆಯುತ್ತಾರೆ; ಅವುಗಳನ್ನು ತಡೆದುಕೊಳ್ಳುವದಕ್ಕೆ ಪ್ರಯತ್ನಿಸ ತ್ತಿರಬೇಕು. ಎಲ್ಲಿಯವರೆಗೆ ರಜಸ್ತಮೋಗುಣಗಳಿಂದ ಕೂಡಿರುವನೋ ಅಲ್ಲಿಯವರೆಗೆ ದ್ವಂದ್ವಗಳ ಕಾಟವು ತಪ್ಪಿದ್ದಲ್ಲ. ಆದ್ದರಿಂದ ಮೊದಲು ಅವೆರಡನ್ನೂ ಗೆದ್ದುಕೊಂಡು ಶುದ್ಧಸತ್ತ್ವದಲ್ಲಿಯೇ ನಿಂತಿರಬೇಕು. ಯೋಗಕ್ಷೇಮಗಳನ್ನು-ಎಂದರೆ ಬೇಕಾದ ದ್ದನ್ನು ಸಂಪಾದಿಸಿಕೊಳ್ಳುವದು. ಅದನ್ನು ಸುರಕ್ಷಿತವಾಗಿಟ್ಟುಕೊಳ್ಳುವದಕ್ಕೆ ಯತ್ನಿಸುವದು ಎಂಬಿದನ್ನು-ವಿಾರಬೇಕು ; ಅವುಗಳ ಅಭಿಲಾಷೆಯನ್ನು ಬಿಡ ಬೇಕು-ಎಂದು ಅಲ್ಲಿ ಉಪದೇಶವಾಗಿರುತ್ತದೆ. ಅಲ್ಲಿ ಕರ್ಮಯೋಗಿಯಾದವನು ಮೂರು ಗುಣಗಳನ್ನೂ ಪ್ರಯತ್ನದಿಂದ ಗೆದ್ದುಕೊಳ್ಳಬೇಕೆಂದು ಹೇಳಿದೆ. ಪ್ರಕೃತದಲ್ಲಿ ಅವು ಮೂರನ್ನೂ ಗೆದ್ದುಕೊಂಡಿರುವ ತ್ರಿಗುಣಾತೀತನಾದ ಸಿದ್ಧ ಪುರುಷನನ್ನು ಕುರಿತು ಮಾತನಾಡುತ್ತಿದ್ದೇವೆ. ಇಷ್ಟೇ ಭೇದ.

ಕಪಿಯನ್ನು ಬಳಿಯಲ್ಲಿಟ್ಟುಕೊಂಡು ಜಪಕ್ಕೆ ಕೂತವನಂತೆಯೇ ಚಂಚಲ ವಾದ ಮೂರು ಗುಣಗಳ ಹೊಡೆತಕ್ಕೆ ಸಿಕ್ಕಿದವನ ಸ್ಥಿತಿಯಾಗಿದೆ. ಇದುವರೆಗೆ ಯಾರೊಬ್ಬರಿಗೂ ಅವುಗಳ ಹಾವಳಿಯು ತಪ್ಪಿದ್ದಲ್ಲ. ಹೀಗಿರುವಲ್ಲಿ ಅವು ಮೂರನ್ನೂ ವಿಾರಿರುವವನು ಹೇಗಿರುತ್ತಾನೆ?-ಎಂಬುದೀಗ ಪ್ರಶ್ನೆ. ಸ್ಥಿತಪ್ರಜ್ಞ, ಯುಕ್ತ, ಪರಮಭಕ್ತ-ಇವು ಮೂರೂ ತ್ರಿಗುಣಾತೀತನಾದ ಸಿದ್ಧಪುರುಷನಿಗೇ ಬೇರೆಬೇರೆಯ ದೃಷ್ಟಿಯಿಂದ ಕೊಟ್ಟಿರುವ ಹೆಸರುಗಳು. ಭಗವಂತನು ಅಂಥ ಸಿದ್ಧಪುರುಷನ ಲಕ್ಷಣವನ್ನು ಹೇಳುತ್ತಿದಾನಾದ್ದರಿಂದ ಲಕ್ಷ್ಯವಿಟ್ಟು ಸಾವಧಾನ ವಾಗಿ ಕೇಳೋಣ.

## ೪೫. ತ್ರಿಗುಣಾತೀತನ ಲಕ್ಷಣ

( 17—9—69 )

ಅರ್ಜುನನು ಮೂರು ಗುಣಗಳನ್ನೂ ವಿಾರಿದ ಸಿದ್ಧಪುರುಷನು ಹೇಗಿರು ತ್ತಾನೆ? ಅವನೂ ಆಚಾರವಿಚಾರಗಳನ್ನು ಕುರಿತು ಹೇಳು-ಎಂದು ಭಗವಂತ ನನ್ನು ಕೇಳಿದ್ದಕ್ಕೆ ಭಗವಂತನು ಕೊಟ್ಟ ಉತ್ತರವಿದು :

ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಣ್ಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಙ್ಕ್ಷತಿ ॥
ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತನ್ತ ಇತ್ಯೇವ ಯೋಽವತಿಷ್ಠತಿ ನೇಙ್ಗತೇ ॥

ಗೀ. ೧೪-೨೨, ೨೩

ಸಾಧಕರಾದವರು ರಜಸ್ತಮೋಗುಣಗಳು ಬಂದಾಗ 'ಅಯ್ಯೋ! ನನ್ನ ಸತ್ತ್ವ ಗುಣವು ಕೈಮೀರಿತಲ್ಲ! ಈ ರಜಸ್ಸಿನಿಂದ ಕಾಮಕರ್ಮಗಳು ನನಗೆ ಗಂಟುಬೀಳುತ್ತಿರುವವಲ್ಲ! ತಮಸ್ಸಿನಿಂದಲೇ ನನಗೆ ಮಂಕುಕವಿದುಕೊಂಡು ಸಾಧನವು ಸಾಗದಂತೆ ಅಡ್ಡಿಯಾಗಿದೆಯಲ್ಲ!' ಎಂದು ಪರಿತಪಿಸುತ್ತಿರುವರು. ಸತ್ತ್ವಗುಣವು ಎದ್ದುಕೊಂಡಾಗ "ಭಲೆ! ನನ್ನ ಸಾಧನವು ಬಲಿಯುತ್ತಿದೆ! ಸತ್ತ್ವಗುಣದ ಕಾರ್ಯವಾದ ಜ್ಞಾನವು ತೋರಿಕೊಳ್ಳುತ್ತಿದೆಯಲ್ಲ!" ಎಂದುಕೊಳ್ಳುತ್ತಿರುವರು. ಆದರೆ ತ್ರಿಗುಣಾತೀತನಾದ ಜ್ಞಾನಿಯು ಬ್ರಹ್ಮಸ್ವರೂಪನೇ ಆಗಿಬಿಟ್ಟಿರುವದರಿಂದ ಅವನಿಗೆ ಸತ್ತ್ವವು ಬಂದಿತೆಂಬ ಹಿಗ್ಗಾಗಲಿ, ರಜಸ್ತಮಗಳು ಬಂದವೆಂಬ ಕಳವಳವಾಗಲಿ ಇರುವದೇ ಇಲ್ಲ. ಒಂದು ಆನೆಯಮೇಲೆ ಸೊಳ್ಳೆಯೊಂದು ಸ್ವಲ್ಪಹೊತ್ತು ಕುಳಿತಿದ್ದಮಾತ್ರದಿಂದ ಆನೆಗೆ ಭಾರವಾದೀತೆ? ಅಥವಾ ಆ ಸೊಳ್ಳೆಯು ಎದ್ದು ಹಾರಿಹೋದಮಾತ್ರದಿಂದ ಸ್ವಲ್ಪವಾದರೂ ಹಗುರವಾಯಿತೆಂದು ಆನೆಗೆ ಅನ್ನಿಸೀತೆ? ಇಲ್ಲವಷ್ಟೆ? ಇದರಂತೆ ಗುಣಗಳ ಕಾರ್ಯವು ಒಳ್ಳೆಯದೆಂದಾಗಲಿ, ಕೆಟ್ಟದೆಂದಾಗಲಿ, ಆ ಮಹಾತ್ಮನಿಗೆ ಅನ್ನಿಸುವದೇ ಇಲ್ಲ; ಇಂದ್ರಿಯರೂಪವಾದ ಗುಣಗಳು ವಿಷಯರೂಪವಾದ ಗುಣಗಳಲ್ಲಿ ವರ್ತಿಸಿದರೆ ಅವನಿಗೆ ಯಾವ ವಿಕಾರವಾದರೂ ಎಷ್ಟುಮಟ್ಟಿಗೂ ಆಗುವದೇ ಇಲ್ಲ. ಕನ್ನಡಿಯಮೇಲೆ ಒಂದು ನೊಣದ ನೆರಳು ಬಿದ್ದರೂ ಒಂದು ಆನೆಯ ನೆರಳು ಬಿದ್ದರೂ ಅದರಿಂದ ಕನ್ನಡಿಗೆ ಯಾವ ಗುಣದೋಷಗಳಾದರೂ ಅಂಟುವವೇನು? ಅಥವಾ ಶುಭಾಶುಭಪದಾರ್ಥಗಳ ಪ್ರತಿಬಿಂಬವು ಉಂಟಾದಾಗ ಸ್ವಚ್ಛವಾದ ಕನ್ನಡಿಗೆ ಗುಣವಾಗಲಿ ದೋಷವಾಗಲಿ ತಟ್ಟುವದೇನು? ಇಲ್ಲವೇ ಇಲ್ಲ. "ಗುಣಾ ವರ್ತನ್ತ ಇತ್ಯೇವ ಯೋಽವತಿಷ್ಠತಿ" (ಗುಣಗಳು ವ್ಯಾಪಾರಮಾಡುತ್ತಿವೆ ಎಂದೇ ಇದ್ದುಕೊಂಡಿರುತ್ತಾನೆ ಎಂದಿರುವದೂ ವ್ಯವಹಾರದೃಷ್ಟಿಯಿಂದ; ಏಕೆಂದರೆ ಮೂರು ಗುಣಗಳನ್ನೂ ಮೀರಿರುವ ಪರಿಶುದ್ಧಬ್ರಹ್ಮರೂಪದಿಂದಲೇ ಇದ್ದುಕೊಂಡಿರುವ ಜ್ಞಾನಿಯ ದೃಷ್ಟಿಯಿಂದ ಗುಣಗಳು ವ್ಯಾಪಾರಮಾಡುವವೆಂಬ ಅರಿವಾದರೂ ಎಲ್ಲಿಂದ ಬರಬೇಕು? ಶ್ರೀಗೌಡಪಾದಾಚಾರ್ಯರು ಹೇಳಿರುವಂತೆ :

ತತ್ತ್ವಮಾಧ್ಯಾತ್ಮಿಕಂ ದೃಷ್ಟ್ವಾ ತತ್ತ್ವಂ ದೃಷ್ಟ್ವಾ ತು ಬಾಹ್ಯತಃ
ತತ್ತ್ವೀಭೂತಸ್ತದಾರಾಮಸ್ತತ್ತ್ವಾದಪ್ರಚ್ಯುತೋ ಭವೇತ್ ॥

ಮಾಂ. ಕಾ. ೨-೩೮

ತ್ರಿಗುಣಾತೀತನ ದೃಷ್ಟಿಯಿಂದ, ತನ್ನೊಳಗೂ ಪರಮಾತ್ಮತತ್ತ್ವವೇ; ಹೊರಗೂ ಆ ತತ್ತ್ವವೇ, ತಾನೂ ಅದೇ ತತ್ತ್ವ. ಎಂದೆಂದಿಗೂ ತತ್ತ್ವದಲ್ಲಿ ರತನಾಗಿರುವದರಿಂದ ತತ್ತ್ವದಿಂದ ಜಾರುವದೂ ಅವನಿಗಿಲ್ಲ; ಮತ್ತೆ ತತ್ತ್ವಶಿಖರಕ್ಕೇರುವದೆಂಬುದೂ ಅವನಿಗಿಲ್ಲ! ಅವನು ವ್ಯವಹಾರದೃಷ್ಟಿಯಿಂದ ನಿತ್ಯಸತ್ತ್ವಸ್ಥನಾಗಿ ತನ್ನ ದೃಷ್ಟಿಯಿಂದ ನಿತ್ಯಸತ್ತ್ವರೂಪನೇ ಆಗಿರುತ್ತಾನೆ.

ಇದರಂತೆ,

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಞ್ಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ॥** ಗೀ. ೧೪–೨೪

ಆತನು ನಿತ್ಯನಿರ್ದ್ವಂದ್ವನಾಗಿರುತ್ತಾನೆ. ಅವನಿಗೆ ದುಃಖವು ಬಂದಿತೆಂಬ ವಿಷಾದವಿಲ್ಲ, ಸುಖವು ಬಂದಿತೆಂಬ ಹರ್ಷವಿಲ್ಲ. ಸುಖದುಃಖಗಳೆರಡೂ ಅವನ ದೃಷ್ಟಿಯಲ್ಲಿ ಸಮನಾಗಿರುತ್ತವೆ, ಎಂದರೆ ಸಮರೂಪವಾದ ಬ್ರಹ್ಮವೇ ಆಗಿರುತ್ತವೆ. ಮಣ್ಣುಹೆಂಟೆ, ಕಲ್ಲತುಂಡು, ಚಿನ್ನದಗಟ್ಟಿ– ಎಂಬ ಭೇದವೇ ಅವನಿಗಿಲ್ಲ; ಅವುಗಳ ದರ್ಶನದಿಂದ ವಿಕಾರವನ್ನು ಹೊಂದುವದೆಲ್ಲಿಬಂತು? ಅವನಿಗೆ ಪ್ರಿಯಾಪ್ರಿಯಗಳಿಲ್ಲ, ನಿಂದಾಸ್ತುತಿಗಳೂ ಇಲ್ಲ; ಎಲ್ಲವೂ ಭಗವನ್ಮಯವಾಗಿಬಿಟ್ಟಿರುತ್ತದೆ.

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಮ್ಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥** ಗೀ. ೧೪–೨೫

ಅವನಿಗೆ ಸನ್ಮಾನದಿಂದಾಗಲಿ ಅಪಮಾನವೆಂಬುದಾಗಲಿ ಕಾಣುವದೇಇಲ್ಲ, ಮಿತ್ರರಿಂದಾಗಲಿ ಶತ್ರುಗಳಿಂದಾಗಲಿ ಇಲ್ಲವೇಇಲ್ಲ, ಹಿಂದೆ ಐದನೆಯ ಅಧ್ಯಾಯದಲ್ಲಿ ಹೇಳಿರುವಂತೆ–

**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥**
ಗೀ. ೫–೧೯

ಬ್ರಹ್ಮವು ಯಾವ ದೋಷವೂ ಇಲ್ಲದ್ದಾಗಿ ಎಲ್ಲೆಲ್ಲಿಯೂ ಸಮರೂಪದಿಂದಲೇ ಇದ್ದುಕೊಂಡಿರುವದು; ಆದ್ದರಿಂದ ಅವರು ಹೇಗಿದ್ದರೂ ಬ್ರಹ್ಮಸ್ವರೂಪದಲ್ಲಿಯೇ ಇರುತ್ತಿರುವನು. ಅವರು ಒಳ್ಳೆಯ ಅಥವಾ ಕೆಟ್ಟಕರ್ಮವನ್ನು ಆರಂಭಿಸುವದಿಲ್ಲ; ಕರ್ತೃತ್ವವೇ ಇಲ್ಲದವನಿಗೆ ಕರ್ಮವೆಲ್ಲಿಂದ ಬರಬೇಕು?

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥**
ಗೀ. ೫–೧೩

ಎಂದು ಹಿಂದೆ ಹೇಳಿರುವಂತೆ ಅವನು ವ್ಯವಹಾರದೃಷ್ಟಿಯಿಂದ ದೇಹದಲ್ಲಿರುತ್ತಿದ್ದರೂ ಯಾವದೊಂದು ಕರ್ತೃತ್ವಬುದ್ಧಿಯೂ ಅವನಿಗೆ ಇರುವದೇಇಲ್ಲ.

ಸಾಮಾನ್ಯವಾದ ಜನರು ಭಗವಂತನನ್ನು ಬಿಟ್ಟು ಬಲು ದೂರಬಂದಿರುತ್ತಾರೆ. ಅವರಿಗೆ ಪರಮಾರ್ಥತತ್ತ್ವದ ಸುದ್ದಿಯೇ ಇರುವದಿಲ್ಲ. ಆದ್ದರಿಂದ ತ್ರಿಗುಣವೆಂಬ ಮಾಯೆಯು ಅವರಿಗೆ ದಾಟಲಶಕ್ಯವಾಗಿರುತ್ತದೆ.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥**

ಗೀ. ೭–೧೪

ಆದರೆ ಯಾರು ಭಗವಂತನನ್ನೇ ಶರಣುಹೊಕ್ಕಿರುತ್ತಾರೋ, ಯಾರು ತ್ರಿಗುಣಾತೀತನಾದ ಭಗವಂತನಲ್ಲಿಯೇ ನೆಲೆನಿಂತಿರುತ್ತಾರೋ ಅವರಿಗೆ ಮಾಯೆಯಿಲ್ಲ, ಅದು ಮಾಯವಾಗಿ ಅದರ ಸ್ಥಾನದಲ್ಲಿ ಭಗವಂತನೇ ಅವರಿಗೆ ಎಲ್ಲೆಲ್ಲಿಯೂ ಕಾಣಿಸುತ್ತಿರುತ್ತಾನೆ.

ಆದ್ದರಿಂದ ಭಗವಂತನು '**ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ**' (ಈ ಮೂರು ಗುಣಗಳನ್ನು ಅವನು ಹೇಗೆ ದಾಟಿರುತ್ತಾನೆ) ?– ಎಂಬ ಪ್ರಶ್ನೆಗೆ ಸಿದ್ಧನ ಲಕ್ಷಣವೂ ಸಾಧಕನಿಗೆ ಸಾಧನವೂ ಆಗಿರುವಂತೆ– ಈ ಉತ್ತರವನ್ನು ಕೊಟ್ಟಿರುತ್ತಾನೆ :

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ**

ಗೀ. ೧೪–೨೬

ಎಂದಿರುತ್ತಾನೆ, ತ್ರಿಗುಣಾತೀತನಾದವನು ಎಂದೆಂದಿಗೂ ಮಾರ್ಪಡದ ಭಕ್ತಿಯೋಗದಿಂದ ಭಗವಂತನನ್ನು ಭಜಿಸುತ್ತಿರುತ್ತಾನೆ.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।** ಗೀ. ೭–೧೭
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥**

ಗೀ. ೭–೧೮

ಎಂದಿರುವಂತೆ ತ್ರಿಗುಣಾತೀತನಾದವನು ನಿತ್ಯವೂ ಸಮಾಹಿತಚಿತ್ತನಾಗಿ ಭಗವಂತನಲ್ಲಿಯೇ ಭಕ್ತಿಯುಳ್ಳಾತನಾಗಿರುತ್ತಾನೆ. ಅವನಿಗೆ ಭಗವಂತನೊಬ್ಬನೇ ತನುತ್ತಮಗತಿ ; ಅಥವಾ ಹೀಗೆಂದೇಕೆ ಹೇಳಬೇಕು ? ಅವನೇ ಬ್ರಹ್ಮಸ್ವರೂಪನು. ಆದ್ದರಿಂದ ಅವ್ಯಭಿಚರಿತಭಕ್ತಿಯುಳ್ಳವನಾದ್ದರಿಂದ ಅವನು ಮೂರು ಗುಣಗಳನ್ನೂ ದಾಟಿರುತ್ತಾನೆ. ಅವನಿಗೆ ಗುಣಗಳೆಲ್ಲವೂ ಬ್ರಹ್ಮಮಯವೇ ಆಗಿರುತ್ತವೆ. ಎಚ್ಚತ್ತಿರುವವನು ಸ್ವಪ್ನವನ್ನು ದಾಟಿರುವಂತೆ ಆತನು ಮಾಯಾಮಯವಾದ ಮಾಯಾತ್ಮಕವಾದ ಗುಣಗಳನ್ನು ದಾಟಿರುತ್ತಾನೆ.

ಭಗವಂತನಿಗೆ ಮಾಯೆಯು ಮುಷ್ಟಿಯ ಹಿಡಿತದಲ್ಲಿದೆ, ಅಥವಾ ಭಗವಂತನ ಸ್ವರೂಪವೇ ಆಗಿಬಿಟ್ಟಿರುತ್ತದೆ. ಅವನು ಸತ್ತ್ವರಜಸ್ತಮೋಗುಣಾತ್ಮಕವಾದ

ಪ್ರಕೃತಿಯನ್ನು ವಶದಲ್ಲಿಟ್ಟುಕೊಂಡು ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಿರುತ್ತಾನೆ ಎಂದು ವೇದಾಂತಗಳು ಹೊಗಳುತ್ತಿವೆಯಾದರೂ ಅವನ ದೃಷ್ಟಿಯಲ್ಲಿ ಸೃಷ್ಟಿಸ್ಥಿತಿಲಯಗಳೆಲ್ಲವೂ ತನ್ನ ಸ್ವರೂಪವೇ ಆಗಿರುತ್ತವೆ. ತ್ರಿಗುಣಾತೀತನು ಆ ಭಗವಂತನ ಸ್ವರೂಪದಲ್ಲಿಯೇ ಇರುತ್ತಾನೆ. ಭಗವದ್ಗೀತೆಯ ಉಪದೇಶವೆಲ್ಲವೂ ತ್ರಿಗುಣವನ್ನು ಮೀರುವ ಸಾಧನವನ್ನು ಉಪದೇಶಿಸುವದರಲ್ಲಿಯೇ ಪರ್ಯವಸಾನವಾಗಿರುತ್ತದೆ. ಸ್ಥಿತಪ್ರಜ್ಞ, ನಿತ್ಯಯುಕ್ತ, ಭಕ್ತ, ತ್ರಿಗುಣಾತೀತ, ಬ್ರಾಹ್ಮಣ ಎಂಬ ಹೆಸರುಗಳಿಂದ ಶಾಸ್ತ್ರದಲ್ಲಿ ಸಿದ್ಧಪುರುಷರನ್ನು ವರ್ಣಿಸಿರುವದು ಅವರ ಲಕ್ಷಣವನ್ನು ತಿಳಿದುಕೊಂಡು ನಾವೂ ಸಾಧನವನ್ನು ಮಾಡಿ ಅವರ ಸ್ಥಿತಿಯನ್ನು ಪಡೆದುಕೊಳ್ಳಬೇಕು—ಎಂದು ಉಪದೇಶಿಸುವದಕ್ಕೇ ಆಗಿದೆ.

ಎಷ್ಟೋ ಜನರು ಗೀತಾರ್ಥೋಪದೇಶವನ್ನು ಕೇಳಿ ತಮಗೆ ಭಗವದ್ಭಕ್ತಿಯಿದೆ ಎಂಬಂತೆ ನಟಿಸುತ್ತಿರುವರು. ಆದರೆ ಅವರಿಗೆ ಗುಣಗಳ ಕಾಟವು ತಪ್ಪಿರುವದಿಲ್ಲ; ಸಮಯಬಂದಾಗ ಅವರ ಬೂಟಾಟಿಕೆಯ ಭಕ್ತಿಯ ಸ್ವರೂಪವು ಪ್ರಕಟವಾಗುವದು.

ಒಮ್ಮೆ ಒಂದು ಕ್ಷೇತ್ರದಲ್ಲಿ ಚಾತುರ್ಮಾಸ್ಯದ ಕಾಲಕ್ಷೇಪಕ್ಕೆಂದು ಪುರಾಣವನ್ನೇರ್ಪಡಿಸಿದ್ದರಂತೆ. ಆಗ ಜನರು 'ನಾನು ಮುಂದು, ತಾನು ಮುಂದು' ಎಂದು ನುಗ್ಗಿನುಗ್ಗಿ ಬಂದು ಶ್ರವಣವನ್ನು ಮಾಡುತ್ತಿದ್ದರು. ಊರೆಲ್ಲ ಭಕ್ತಿಮಯವಾಗಿರುವಂತೆ ಕಾಣುತ್ತಿತ್ತು. ಆ ಕ್ಷೇತ್ರದ ಹೊರಗೆ ಒಂದು ಮೂಲೆಯಲ್ಲಿ ಒಬ್ಬ ಯಕ್ಷ, ಒಬ್ಬಳು ಯಕ್ಷಿಣಿ— ಇಬ್ಬರಿಗೂ ಸಂಭಾಷಣೆಯು ಪ್ರಾರಂಭವಾಗಿ ಊರ ಜನರು ಎಲ್ಲರೂ ಭಕ್ತಿವಂತರೆಂದು ಯಕ್ಷನೂ ಅವರ ಭಕ್ತಿಯು ಟೊಳ್ಳೆಂದು ಯಕ್ಷಿಣಿಯೂ ಪ್ರತಿಜ್ಞೆಯನ್ನು ಮಾಡಿದರು. ಯಕ್ಷಿಣಿಯು ತನ್ನ ಅಭಿಪ್ರಾಯವನ್ನು ಸ್ಥಾಪಿಸಿ ತೋರಿಸುವದಕ್ಕೆಂದು ಒಬ್ಬ ದಿವ್ಯಸುಂದರಿಯಾದ ಸ್ತ್ರೀವೇಷದಿಂದ ಪಲ್ಲಕ್ಕಿಯಮೇಲೆ ಕುಳಿತು ಊರೊಳಕ್ಕೆ ಬಂದು ಒಬ್ಬ ಮುದುಕಿಯ ಮನೆಯ ಮುಂದೆ ಪಲ್ಲಕ್ಕಿಯಿಂದ ಇಳಿದು 'ಅಮ್ಮ, ಸ್ವಲ್ಪ ಕುಡಿಯುವ ನೀರುಕೊಡಿ !, ಎಂದು ಕೇಳಿದಳು. ಮುದುಕಿಯು ಆ ದಿವ್ಯಸ್ತ್ರೀಯನ್ನು ಕಂಡು ಮುಗ್ಧಳಾಗಿ ಕೂಡಲೆ ಒಂದು ತಾಮ್ರದಗಿಂಡಿಯಲ್ಲಿ ನೀರನ್ನು ತಂದುಕೊಟ್ಟಳು. ಯಕ್ಷಿಣಿಯು ನೀರನ್ನು ಕುಡಿದು ಗಿಂಡಿಯನ್ನು ಕೆಳಗಿಟ್ಟು ಪಲ್ಲಕ್ಕಿಯನ್ನೇರಿದಳು. ಅವಳ ಹಿಂದೆ ಹೋಗಿ ಮುದುಕಿಯು ಹಿಂತಿರುಗಿ ಬಂದುನೋಡಲಾಗಿ ತನ್ನ ಗಿಂಡಿಯೆಲ್ಲವೂ ಸ್ವರ್ಣಮಯವಾಗಿತ್ತು. ಅತ್ಯಂತಆಶ್ಚರ್ಯದಿಂದ ಅವಳು ನಡೆದ ವೃತ್ತಾಂತವನ್ನು ನೆರೆಯಮನೆಯವರಿಗೆ ತಿಳಿಯಿಸಿದಳು. ಅವರು ಹೊರಕ್ಕೆ ಬಂದು ನೋಡುವಷ್ಟರಲ್ಲಿ ಯಕ್ಷಿಣಿ ಪಲ್ಲಕಿಯು ಬಹುದೂರ ಹೋಗಿಬಿಟ್ಟಿತ್ತು. ಈ ಸುದ್ಧಿಯನ್ನು ಕೇಳಿದ ಊರಿನ ಅನೇಕರು ಓಡುತ್ತೋಡುತ್ತಾ ಬಂದು ಅವಳ ಪಲ್ಲಕ್ಕಿಯನ್ನು ಸುತ್ತುಗಟ್ಟಿ, 'ನಮ್ಮ ಮನೆಗೆಬಂದು ಪಾನಕವನ್ನು ತೆಗೆದುಕೊಳ್ಳಬೇಕು' ಎಂದುಮುಂತಾಗಿ ಬಲವಂತ

ಪ್ರಾರ್ಥಿಸುವದಕ್ಕೆ ಪ್ರಾರಂಭಿಸಿದರು. ಯಕ್ಷಿಣಿಯು ಹಾಗಾದರೆ ನಿಮ್ಮ ಊರಿನಲ್ಲಿರುವ ಪುರಾಣಿಕನನ್ನು ಊರನ್ನು ಬಿಟ್ಟು ಹೊರಗೆ ಹೋಗುವಂತೆ ಅಟ್ಟಿ ಬಿಡಿ; ಆಮೇಲೆ ನಾನು ಊರೊಳಕ್ಕೆ ಬರುವೆನು' ಎಂದಳಂತೆ. ಆಗ ಕೆಲವು ಜನರು ಪಲ್ಲಕ್ಕಿಯನ್ನು ಅಲ್ಲಿಯೇ ನಿಲ್ಲಿಸಿಕೊಂಡಿದ್ದು ಮತ್ತೆ ಕೆಲವರು ಪುರಾಣಿಕರನ್ನು ಹೊರಗಟ್ಟುವ ಕಾರ್ಯದಲ್ಲಿ ನಿರತರಾದರು. ಆ ಜನರು ವೇಗದಿಂದ ಪುರಾಣಿಕರ ಸ್ಥಾನಕ್ಕೆ ಹೋಗಿ ಅವರನ್ನು ಏಕವಸ್ತ್ರದಿಂದಲೇ ಆಗಿಂದಾಗಲೆ ಹೊರಗೆ ಹೋಗುವಂತೆ ಬಲಾತ್ಕರಿಸಿದರು. ಇತ್ತ ಯಕ್ಷಿಣಿಯ ಪಲ್ಲಕ್ಕಿಯು ಮಾಯವಾಗಿತ್ತು! ಹೀಗಿದೆ, ಜನರ ಭಕ್ತಿಯ ಜೋರು! ಇದೇ ಭಗವಂತನ ಮಾಯೆ; ಇದಕ್ಕೆ ವಶರಾಗದೆ ಇರುವವರುತೀರ ವಿರಳ.

ನಮಗೆ ಈಗ ಎರಡೇ ದಾರಿಗಳು ತೆರೆದಿವೆ: ಭಗವಂತನನ್ನೇ ಆಶ್ರಯಿಸಿ ಮಾಯೆಯನ್ನು ದಾಟಿ ಪರಮಪುರುಷಾರ್ಥವನ್ನು ಪಡೆದುಕೊಳ್ಳುವದು ಒಂದು; ಈ ಮಾಯೆಗೇ ವಶರಾಗಿ ಅದು ಹೇಳಿದಂತೆ ಕುಣಿದಾಡುತ್ತಾ ಸಂಸಾರದೊಳಗೆ ತೊಳಲುತ್ತಿರುವದು ಇನ್ನೊಂದು. ಹೀಗಿರುವದರಿಂದ ಮುಮುಕ್ಷುಗಳಾದವರು ಈಗ್ಗೆ ತಮಗೆ ಮತ್ತೆ ಯಾವ ಸಾಧನವೂ ಆಳವಡದಿದ್ದರೂ 'ಕಲೌ ಸಂಕೀರ್ತ್ಯ ಕೇಶವಮ್' ಎಂಬ ಪುರಾಣೋಕ್ತಿಗನುಗುಣವಾಗಿ ಭಗವನ್ನಾಮಕೀರ್ತನೆಯಿಂದ ಪಾಪವಿಮುಕ್ತರಾಗಿ ಮಿಕ್ಕ ಸಾಧನಗಳನ್ನು ಸಂಪಾದಿಸಿಕೊಳ್ಳುವ ಯತ್ನವನ್ನು ಮಾಡಬೇಕು.

ದೇವತೆಗಳೂ ನಮ್ಮ ಅರ್ಚನೆಯಿಂದ ತೃಪ್ತರಾಗಿ ತಮ್ಮ ವಶದಲ್ಲಿರುವಷ್ಟು ಇಷ್ಟಾರ್ಥಗಳನ್ನು ಕೊಡುತ್ತಾರೆಂಬುದು ನಿಜ. ಆದರೆ ಭಗವಂತನು ತನ್ನನ್ನು ಆಶ್ರಯಿಸಿದವರಿಗೆ ಪರಮಪುರುಷಾರ್ಥವಾದ ಮೋಕ್ಷವನ್ನೇ ಕೊಡುತ್ತಾನೆ. ಆದ್ದರಿಂದ ನಾವು ಕರ್ಮವನ್ನು ಮಾಡಿದರೆ ಭಗವಂತನಿಗೇ ಅರ್ಪಿತವಾಗುವಂತೆ ಮಾಡಬೇಕು; ಧ್ಯಾನವನ್ನು ಮಾಡಿದರೆ ಭಗವಂತನನ್ನೇ ಧ್ಯಾನಿಸಬೇಕು. ಭಗವದ್ಭಕ್ತಿಯೇ ಪರಮಪುರುಷಾರ್ಥಪ್ರಾಪ್ತಿಗೆ ಕಾರಣವೆಂಬುದನ್ನು ಇಲ್ಲಿ

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ॥**

ಗೀ. ೧೪–೨೬

ಎಂದು ಉಪಸಂಹಾರವಾಕ್ಯದಲ್ಲಿ ಹೇಳಿರುತ್ತದೆ. ಗುಣಾತೀತರಾಗುವದಕ್ಕೆ ಸರ್ವಕರ್ಮಸಂನ್ಯಾಸವನ್ನು ಮಾಡಿ ದ್ವಂದ್ವಾತೀತರೂ ಸಮದರ್ಶಿಗಳೂ ಆಗಿರುವ ಸಂನ್ಯಾಸಿಗಳೇ ಅಧಿಕಾರಿಗಳೆಂದು ಇಲ್ಲಿ ಹೇಳಿದ್ದರೂ ಗೃಹಸ್ಥರೂ ತಮ್ಮತಮ್ಮ ಕರ್ಮವನ್ನೇ 'ಯತ್ಕರೋಷಿ ಯದಶ್ನಾಸಿ' (೯–೨೭) ಎಂದು ಉಪದೇಶ

ಮಾಡಿರುವಂತೆ, ತಮ್ಮತಮ್ಮ ಉದ್ಯೋಗವನ್ನೇ ಭಗವಂತನಿಗೆ ಅರ್ಪಣೆಯೆಂದು ಮಾಡುವದಕ್ಕೆ ಅವಕಾಶವಿದೆ. ಎಲ್ಲರಿಗೂ ರಾಮ, ಕೃಷ್ಣ, ಗೋವಿಂದ! ಎಂದು ಭಗವನ್ನಾಮಕೀರ್ತನೆಯನ್ನು ಮಾಡುತ್ತಾ ಚಿತ್ತಶುದ್ಧಿಯನ್ನು ಸಂಪಾದಿಸಿಕೊಂಡು ಭಗವಂತನಿಗೆ ಪ್ರಿಯರಾಗುವ ಅವಕಾಶವಿದೆ. ಭಗವಂತನು ಈ ಬುದ್ಧಿಯನ್ನು ನಮಗೆಲ್ಲ ಕೊಡಲಿ !

## ೪೬. ಕೃತಕೃತ್ಯರು

( 18—9—69 )

'ಸರ್ವತ್ರ ಹಿ ಅಧ್ಯಾತ್ಮಶಾಸ್ತ್ರೇ ಕೃತಾರ್ಥಲಕ್ಷಣಾನಿ ಯಾನಿ ತಾನ್ಯೇವ ಸಾಧನಾನ್ಯುಪದಿಶ್ಯಂತೇ ಯತ್ನಸಾಧ್ಯತ್ವಾತ್' (ಅಧ್ಯಾತ್ಮಶಾಸ್ತ್ರದಲ್ಲೆಲ್ಲ ಕೃತಾರ್ಥನಾಗಿರುವವನ ಲಕ್ಷಣಗಳು ಯಾವವೋ ಅವನ್ನೇ 'ಸಾಧನ'ಗಳು ಎಂದು ಉಪದೇಶಿಸಲಾಗುತ್ತದೆ; ಏಕೆಂದರೆ ಅವುಗಳನ್ನು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಳ್ಳಬೇಕಾಗಿರುತ್ತದೆ) ಎಂದು ಗೀತಾಭಾಷ್ಯಕಾರರು ಬರೆದಿರುತ್ತಾರೆ. ಆದ್ದರಿಂದ ಅಧ್ಯಾತ್ಮವಿದ್ಯೆಯಲ್ಲಿ ನಿಷ್ಣಾತರಾದವರ ಲಕ್ಷಣಗಳನ್ನು ತಿಳಿದುಕೊಳ್ಳುವದು ಲಾಭದಾಯಕವಾಗಿರುತ್ತದೆ.

ಭಗವಂತನು ಅರ್ಜುನನಿಗೆ ಸಾಂಖ್ಯಬುದ್ಧಿಯನ್ನೂ ಯೋಗಬುದ್ಧಿಯನ್ನೂ ಉಪದೇಶಿಸಿದ ಬಳಿಕ–

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥** ಗೀ. ೨–೫೩

ಎಂದಿರುತ್ತಾನೆ. ಶ್ರುತಿಯಲ್ಲಿ 'ಇಂಥಿಂಥ ಕಾಮವಿದ್ದವನು ಇಂಥಿಂಥ ಕರ್ಮವನ್ನು ಮಾಡಬೇಕು'–ಎಂದು ಹೇಳಿರುತ್ತದೆ. ಈ ಲೋಕದ ಅನಿತ್ಯಸುಖಕ್ಕೆ ಹೋಲಿಸಿದರೆ ಬಹುಕಾಲವಿರುವ ಸುಖವನ್ನು ಕೊಡುವ ಕಾಮ್ಯಕರ್ಮಗಳನ್ನು ಮಾಡುವದಕ್ಕೆ ವಿವೇಕಿಯಾದವನು ಪ್ರಯತ್ನಿಸುವದು ಸ್ವಾಭಾವಿಕವಾಗಿರುತ್ತದೆ. ಆದರೆ ಮನುಷ್ಯನಿಗೆ ಕಾಮಗಳು ಅನಂತವಾಗಿರುತ್ತವೆ. ಆದ್ದರಿಂದ ಕಾಮ್ಯಕರ್ಮಗಳೂ ಅನಂತವಾಗಿಯೇ ಇರುತ್ತವೆ. ಈ ಲೋಕದಲ್ಲಿ ಸತ್ಪುತ್ರನು, ಪೌತ್ರನು, ಪಶುಕ್ಷೇತ್ರಾದಿಗಳು, ಆರೋಗ್ಯ, ಕೀರ್ತಿ– ಮುಂತಾದವುಗಳು ಧರ್ಮಗಳಿಂದ ಸಿಕ್ಕು-

ನಂತೆಯೇ ಪರಲೋಕದಲ್ಲಿಯೂ ಬಹುಕಾಲ ಸುಖಪಡುವದಕ್ಕೆಂದು ಜ್ಯೋತಿ ಷ್ಟೋಮಾದಿಗಳನ್ನು ಮಾಡುತ್ತಿರುವವನಿಗೂ ಅವು ಸಿಕ್ಕುವವು. ಆದರೆ "ಲೌಕಿಕಕರ್ಮಗಳ ಫಲಗಳಂತೆಯೇ ಶಾಸ್ತ್ರೀಯಕರ್ಮದ ಫಲವಾದ ಸ್ವರ್ಗಾದಿ ಗಳೂ ಕ್ಷಯವಾಗುತ್ತವೆ; ಅವಿನಾಶಿಯಾದ ನಿತ್ಯಸುಖವು ಯಾವದಾದರೂ ಇದೆಯೆ?" —ಎಂಬ ಪ್ರಶ್ನೆಯು ಒಂದಲ್ಲ, ಒಂದುದಿನ ಮುಂದೆಬಂದು ನಿಲ್ಲಬೇಕಷ್ಟೆ? ಹೀಗೆ ಸಾಧ್ಯಸಾಧನರೂಪವಾದ ಕರ್ಮಗಳನ್ನೂ ಅವುಗಳ ಫಲವನ್ನೂ ಹೇಳುವ ವಚನಗಳ ವಿಷಯಕ್ಕೆ ವಿರಕ್ತನಾದ ವಿವೇಕಿಗೆ, ಈ ಕಾಮಗಳೂ ಇವುಗಳ ಫಲವೂ ಹಾಗಿರಲಿ, ನಿತ್ಯಸುಖವು ಯಾವದಾದರೂ ಇದೆಯೆ ?—ಎಂದು ವಿಚಾರಿಸುವಾಗ ಕಾಮ್ಯವಿಷಯದ ಶ್ರುತಿಗಳನ್ನು ಕೇಳಿಕೇಳಿ ಸಾಕೆನಿಸಿದ ಬುದ್ಧಿಯು ವಿಕ್ಷೇಪವನ್ನು ಬಿಟ್ಟು ನಿಲುಗಡೆಯನ್ನು ಹೊಂದಬೇಕು. ಆಗ ಆತ್ಮನ ವಿದ್ಯೆಯಿಂದಲೇ ನಿತ್ಯವಾದ ಮೋಕ್ಷಫಲವು ದೊರಕುತ್ತದೆ ಎಂಬುದನ್ನು ಕೇಳಿ, ಆತ್ಮವಿಚಾರ ವನ್ನು ಮಾಡುವದಕ್ಕೆ ಪ್ರಾರಂಭಿಸಿದಾತನ ಬುದ್ಧಿಯು ವಿಚಾರದ ಫಲವಾಗಿ ಕೊನೆಯಲ್ಲಿ ಆತ್ಮನಲ್ಲಿಯೇ ನಿರ್ವಿಕಲ್ಪವಾಗಿ ನೆಲೆನಿಂತುಬಿಡುತ್ತದೆ. ಆಗ 'ಯೋಗ'ವು ಎಂದರೆ ಆತ್ಮಾನಾತ್ಮವಿಷಯದಲ್ಲಿ ವಿವೇಕಪ್ರಜ್ಞೆಯುಂಟಾಗು ತ್ತದೆ. ಜಿಜ್ಞಾಸುವಿನ ಸ್ವರೂಪವಾದ ಆತ್ಮನೇ ನಿತ್ಯಸತ್ಯರೂಪನು, ಮಿಕ್ಕದ್ದೆ ಲ್ಲವೂ ಅಸದ್ರೂಪವಾದದ್ದು— ಎಂಬ ವಿವೇಕವು ಉಂಟಾಗುವದು— ಎಂಬುದು ಭಗವಂತನು ಆಡಿದ ವಾಕ್ಯದ ಅಭಿಪ್ರಾಯ. ಇದನ್ನು ಕೇಳಿ ಅರ್ಜುನನು—

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ಗೀ. ೨-೫೪

ಎಂದು ಕೇಳಿರುತ್ತಾನೆ. "ಧೀಃ ಪ್ರಜ್ಞಾ ಶೇಮುಷೀ ಮತಿಃ"—ಎಂಬ ಕೋಶ ದಂತೆ ಬುದ್ಧಿ, ಧೀ, ಪ್ರಜ್ಞೆ, ಶೇಮುಷಿ, ಮತಿ—ಇವೆಲ್ಲ ಪರ್ಯಾಯಗಳು. ಬುದ್ಧಿಯು ಚಂಚಲವಾಗಿರುವದಕ್ಕೆ ಕಾಮವೇ ಕಾರಣ; ಕಾಮ್ಯಕರ್ಮದಲ್ಲಿ ವಿರಕ್ತನಾದವನ ಬುದ್ಧಿಯು ತತ್ತ್ವವಿಚಾರವನ್ನು ಮಾಡಿದ ಫಲವಾಗಿ ಹೊರಗೆ ಎಲ್ಲಿಯೂ ಹರಿದಾಡುವದಕ್ಕೆ ಅವಕಾಶವಿರುವದಿಲ್ಲವಾದ್ದರಿಂದ ತನ್ನ ಆತ್ಮನೇ ಆಗಿರುವ ಪರಬ್ರಹ್ಮದಲ್ಲಿ ನಿಲುಗಡೆಯಾಗುವದು. ಅವನಿಗೆ "ಸ್ಥಿತಪ್ರಜ್ಞ"ನೆಂದು ಹೆಸರು. ಇಂಥವನು ಸ್ಥಿತಪ್ರಜ್ಞನು— ಎಂದು ಗುರುತಿಸುವದಕ್ಕೆ ಆದೀತೆ ? ಅವನ ವ್ಯವಹಾರವು ಹೇಗಿರುತ್ತದೆ ?— ಎಂದು ಅರ್ಜುನನು ಕೇಳಿರುತ್ತಾನೆ. ಸ್ಥಿತಪ್ರಜ್ಞನ ಲಕ್ಷಣವನ್ನು ಅರಿತುಕೊಂಡರೆ ತಾನೂ ಅವನ ನಡೆನುಡಿಗಳನ್ನು ಅನುಕರಿಸಬಹುದು—ಎಂಬುದು ಅವನ ಆಶಯ. ಇದಕ್ಕೆ ಉತ್ತರವಾಗಿ ಭಗ ವಂತನು ಹೇಳಿರುವ ಕೃತಾರ್ಥಲಕ್ಷಣಗಳನ್ನು ಈಗ ವಿಚಾರಕ್ಕೆ ತೆಗೆದು ಕೊಳ್ಳೋಣ :

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥** ಗೀ. ೨-೫೫

ಸ್ಥಿತಪ್ರಜ್ಞನ ಲಕ್ಷಣಗಳಲ್ಲಿ ಇದು ಬಹಳ ಮುಖ್ಯವಾದದ್ದು. ಅನಾತ್ಮಪದಾರ್ಥಗಳಲ್ಲಿ ಇದು ಚೆನ್ನಾಗಿದೆ, ಇದು ನನಗಿರಲಿ- ಎಂಬ ಬುದ್ಧಿವೃತ್ತಿಯುಳ್ಳವನಿಗೆ ಬುದ್ಧಿಯು ಹರಿದಾಡದೆ, ಇರುವದಕ್ಕಾಗುವದೇ ಇಲ್ಲ. ಆದ್ದರಿಂದ ಮನಸ್ಸಿಗಂಟಿಕೊಂಡಿರುವ ಕಾಮಗಳೆಲ್ಲವನ್ನೂ ಅತ್ಯಂತವಾಗಿ ಯಾವನು ಬಿಟ್ಟುಬಿಟ್ಟಿರುವನೋ ಅವನು 'ಸ್ಥಿತಪ್ರಜ್ಞನು' ಎಂದು ಹೇಳಿರುವದು ಸ್ವಾಭಾವಿಕವಾಗಿದೆ. ಭೌತಿಕ ವಿಜ್ಞಾನಶಾಸ್ತ್ರಜ್ಞರು ಹೊಸಹೊಸದಾಗಿ ಕಂಡುಹಿಡಿಯುತ್ತಿರುವ ಭೋಗೋಪಕರಣಗಳ ಸುದ್ದಿಯನ್ನು ಕೇಳಿದವನಿಗೆ ನಮಗೆ ಆ ಭೋಗಗಳು ಸಿಕ್ಕಬಾರದೆ ?- ಎಂಬ ಕಹಕಹವುಂಟಾಗುವದು ಸ್ವಾಭಾವಿಕವಷ್ಟೆ ? ಹೀಗಿರುವದರಿಂದ ಈ ಯುಗವನ್ನು 'ಕಾಮಾನ್ವೇಷಣೆಯ ಯುಗ' ಎಂದು ಕರೆದರೆ ತಪ್ಪಾಗಲಾರದು. ಕಾಮಕ್ರೋಧಲೋಭಮೋಹಾದಿಮನೋವೃತ್ತಿಗಳು ಒಂದರ ಹಿಂದೊಂದು ಮನಸ್ಸಿನಲ್ಲಿ ಎದ್ದುಕೊಳ್ಳುತ್ತಿರುವದರಿಂದಲೇ ಈ ಕಾಲದಲ್ಲಿ ಭೂಲೋಕದ ಜನರು ಅಶಾಂತಿಯಿಂದ ಅತ್ಯಸ್ತರಾಗಿ ನರಳುತ್ತಿರುವರು. ಅದರೆ ಈ ಲೋಕದ ಸುಖಗಳು ಹಾಗಿರಲಿ, ಬಹುಕಾಲಬಾಳುವ ಪರಲೋಕದ ಸುಖಗಳುಕೂಡ ಯಾವನಿಗೆ ಸಪ್ಪೆಯಾಗಿರುವವೋ ಅವನಿಗೆ ಅಧಿಭೌತಿಕವಾದ ಭೋಗಗಳನ್ನು ಕೊಡುವ ಯಂತ್ರೋಪಕರಣಗಳ ಸುದ್ದಿಯಿಂದ ಮನಸ್ಸು ಎಂದಿಗಾದರೂ ಹರಿದಾಡೀತೆ ? ಇಲ್ಲ. ಆದ್ದರಿಂದಲೇ ಅಧ್ಯಾತ್ಮವಿದ್ಯೆಯನ್ನೇ ಹೇಳುವದಕ್ಕೆ ಹೊರಟಿರುವ ಉಪನಿಷತ್ತು ಹೀಗೆನ್ನುತ್ತಿದೆ-

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ॥** ಕಠ. ೬-೧೪

'ಯಾವಾಗ ಇವನ ಹೃದಯವನ್ನಾಶ್ರಯಿಸಿಕೊಂಡಿರುವ ಕಾಮಗಳೆಲ್ಲವೂ ಬಿಟ್ಟುಹೋಗುವವೋ ಆಗ ಮರ್ತ್ಯನು ಅಮೃತನಾಗುವನು ; ಅವನು ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳುವನು' ಕಾಮಗಳಿಂದಲೇ ಮನುಷ್ಯನು 'ಮರ್ತ್ಯ'(ಸಾಯುವ ಸ್ವಭಾವದವನು) ಎನಿಸಿಕೊಂಡಿರುತ್ತಾನೆ. ಕಾಮಗಳು ಮನಸ್ಸಿನಲ್ಲಿಯೇ ಅಂಟಿಕೊಂಡಿರುತ್ತವೆಯಾದ್ದರಿಂದ ಅವನ್ನು ಬಿಟ್ಟು ಯಾವಾಗ ಆತ್ಮನಲ್ಲಿಯೇ ಮನಸ್ಸು ನಿಂತುಬಿಡುವದೋ ಆಗ ಮರ್ತ್ಯತ್ವವು ಹೋಗಿ ಅಮೃತ(ಸಾವಿಲ್ಲದ)ಸ್ವಭಾವವು ಹೊರತೋರಿಕೊಳ್ಳುವದು. ಆ ಕ್ಷಣದಲ್ಲಿಯೇ 'ನಾನೇ ಅದ್ವಯವೂ ಅಮೃತವೂ ಆದ ಬ್ರಹ್ಮವು' ಎಂಬ ಅರಿವು ಆಗಿಬಿಡುತ್ತದೆ- ಎಂಬುದು ಶ್ರುತಿಯ ಅರ್ಥ.

ಭಗವಂತನೂ ಈ ಶ್ರುತ್ಯರ್ಥವನ್ನೇ ಮೇಲೆ ಉದಾಹರಿಸಿರುವ ಶ್ಲೋಕದಲ್ಲಿ ಹೇಳಿರುತ್ತಾನೆ; ಎಲ್ಲಾ ಕಾಮಗಳನ್ನೂ ಬಿಟ್ಟರೆ ಮನುಷ್ಯನ ಜೀವನವು ಹೇಗೆ

ಆಗುವದು ? ಆಗ ಅವನ ಮನಸ್ಸಿನ ಪ್ರವೃತ್ತಿಯು ಹೇಗಿರುವದು ?—ಎಂಬುದಕ್ಕೆ ಉತ್ತರವು 'ಆತ್ಮನ್ಯೇವಾತ್ಮನಾ ತುಷ್ಟಃ'— ಎಂಬುದು.

ಇದಕ್ಕೆ ಭಾಷ್ಯಕಾರರು ವಿವರಣೆಯಾಗಿ ಬರೆದಿರುವದೇನೆಂದರೆ :

'ಆತ್ಮನ್ಯೇವ ಪ್ರತ್ಯಗಾತ್ಮಸ್ವರೂಪೇ ಏವ ಆತ್ಮನಾ ಸ್ವೇನೈವ ಬಾಹ್ಯಲಾಭನಿರಪೇಕ್ಷಃ, ತುಷ್ಟಃ, ಪರಮಾರ್ಥದರ್ಶನಾಮೃತರಸಲಾಭೇನ । ಅನ್ಯಸ್ಮಾದಲಂಪ್ರತ್ಯಯವಾನ್ ಸ್ಥಿತಪ್ರಜ್ಞಃ ಸ್ಥಿತಾ ಪ್ರತಿಷ್ಠಿತಾ ಆತ್ಮಾನಾತ್ಮವಿವೇಕಜಾ ಪ್ರಜ್ಞಾ ಯಸ್ಯ ಸ ಸ್ಥಿತಪ್ರಜ್ಞೋ ವಿದ್ವಾನ್ ತದಾ ಉಚ್ಯತೇ ।'

'ಎಲ್ಲಕ್ಕೂ ಒಳಗಿರುವ ಆತ್ಮಸ್ವರೂಪದಲ್ಲಿಯೇ, ಹೊರಗಿನ ಲಾಭದ ಅಪೇಕ್ಷೆಯಿಲ್ಲದೆ ತನ್ನ ಸ್ವರೂಪದಿಂದಲೇ ತುಷ್ಟನಾಗಿ, ಪರಮಾರ್ಥದರ್ಶನವೆಂಬ ಅಮೃತರಸದ ಲಾಭದಿಂದ ಮತ್ತೊಂದು ಯಾವದೂ ಬೇಡವೆಂಬ ಬುದ್ಧಿಯುಂಟಾಗಿರುವವನೂ ನಿಲುಗಡೆಯನ್ನು ಹೊಂದಿರುವ ಬುದ್ಧಿಯುಳ್ಳವನೂ ಆದವನೇ ಸ್ಥಿತಪ್ರಜ್ಞನು ಎನಿಸಿಕೊಳ್ಳುತ್ತಾನೆ.' ಸ್ಥಿತಪ್ರಜ್ಞನೂ ದೇಹಯಾತ್ರೆಗೆ ಬೇಕಾದ ಆಹಾರವಿಹಾರಗಳುಳ್ಳವನಾಗಿರುತ್ತಿದ್ದರೂ ಮಿಕ್ಕವರಂತೆ 'ಇಂಥದ್ದೊಂದು ಬೇಕು' ಎಂಬ ಬುದ್ಧಿಯು ಅವನನ್ನು ಕಾಡುತ್ತಿರುವದಿಲ್ಲ. ಮಿಷ್ಟಾನ್ನವನ್ನು ಭುಂಜಿಸಿದವನಿಗೆ ಊಟವು ಬೇಕಿಲ್ಲದಿರುವಂತೆ, ಆತ್ಮಜ್ಞಾನಾಮೃತದ ಪಾನವೇ ಅವನಿಗೆ ಪರಮತೃಪ್ತಿಯನ್ನುಂಟುಮಾಡಿರುತ್ತದೆ ಎಂದು ಭಾವ.

ಸರ್ವಕಾಮತ್ಯಾಗವೆಂಬುದು ಸ್ಥಿತಪ್ರಜ್ಞನಿಗೆ ಹೆಗ್ಗುರುತು— ಎಂಬುದನ್ನು ಒತ್ತಿಹೇಳುವದಕ್ಕಾಗಿ ಉಪಕ್ರಮದಂತೆಯೇ ಉಪಸಂಹಾರದಲ್ಲಿಯೂ ಭಗವಂತನು ಹೀಗೆಂದಿರುತ್ತಾನೆ :

ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ।
ನಿರ್ಮಮೋ ನಿರಹಙ್ಕಾರಃ ಸ ಶಾನ್ತಿಮಧಿಗಚ್ಛತಿ ॥ ಗೀ. ೨-೭೧

'ಕಾಮಗಳೆಲ್ಲವನ್ನೂ ಬಿಟ್ಟು, ಶರೀರಯಾತ್ರೆಗೆ ಬೇಕಾಗಿರುವಷ್ಟು ವಿಷಯಗಳನ್ನು ಸೇವಿಸುತ್ತಾ, ಆಷ್ಟು ವಿಷಯಗಳಲ್ಲಿಕೂಡ 'ಇವು ನನ್ನವು, ನನಗೆ ಅವಶ್ಯವಾಗಿ ಬೇಕಾಗಿರುವವುಗಳು' ಎಂಬ ಬುದ್ಧಿಯಿಲ್ಲದೆ, ನಾನು ಆತ್ಮಜ್ಞಾನಿಯು, ಮಿಕ್ಕವರಿಗಿಂತ ಮೇಲುಮಟ್ಟದವನು ಎಂಬ ಅಭಿಮಾನವೂ ಇಲ್ಲದೆ ಇರುವ ಸ್ಥಿತಪ್ರಜ್ಞನು ಸರ್ವಸಂಸಾರದುಃಖರಹಿತವಾದ ಶಾಂತಿಯನ್ನು ಪಡೆದಿರುತ್ತಾನೆ'. ಸ್ಥಿತಪ್ರಜ್ಞನ ಈ ಲಕ್ಷಣವನ್ನು ಕೇಳಿದವರು ಸರ್ವಕಾಮತ್ಯಾಗದಿಂದ ನಿತ್ಯಶಾಂತಿಯನ್ನು ಪಡೆಯುವದಕ್ಕೆ ಪ್ರಯತ್ನಿಸಬೇಕು ಎಂದಾಯಿತು.

ಇನ್ನು ಸಂನ್ಯಾಸಿ :—

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ॥ ಗೀ. ೩-೨೮**

ಅಜ್ಞನಾದ ಸಾಮಾನ್ಯಜನರಿಗೆ ಪ್ರಕೃತಿಯ ಕರ್ಮಗಳಲ್ಲಿ ತಮ್ಮವೇ, ತಾವೇ ಕ್ರಿಯಾಕರ್ತೃಗಳು ಎಂಬ ಬುದ್ಧಿ ಬರುತ್ತದೆ. ಆದರೆ ಜ್ಞಾನಿಯು ಪರಮಾರ್ಥ ಸಂನ್ಯಾಸಿಯಾಗಿರುವದರಿಂದ 'ಗುಣಗಳು ಇವು, ಇವುಗಳ ಕರ್ಮಗಳಿವು' ಎಂಬುದರ ತತ್ತ್ವವನ್ನರಿತುಕೊಂಡಿರುತ್ತಾನೆ. ಪ್ರಕೃತಿಯ ಗುಣಗಳೇ ಕರಣರೂಪವಾಗಿರುತ್ತವೆ; ಆ ಗುಣಗಳೇ ಇಂದ್ರಿಯಾರ್ಥಗಳಾಗಿರುತ್ತವೆ. ಆದ್ದರಿಂದ ಇಂದ್ರಿಯಗಳು ವಿಷಯಗಳನ್ನು ಭೋಗಿಸುವಾಗ, ಅಥವಾ ಇಂದ್ರಿಯಗಳು ತಮ್ಮತಮ್ಮ ವ್ಯಾಪಾರವನ್ನು ಮಾಡುತ್ತಿರುವಾಗ, 'ಗುಣಗಳೇ ವಿಷಯಿಗಳು, ಗುಣಗಳೇ ವಿಷಯಗಳು' 'ನಾನು ವಿಷಯಿಯೂ ಅಲ್ಲ, ವಿಷಯವೂ ಅಲ್ಲ' ಎಂಬ ನಿಶ್ಚಿತಬುದ್ಧಿಯುಳ್ಳವನಾಗಿರುವದರಿಂದ ಯಾವ ಜ್ಞಾನಕ್ಕೂ ಯಾವ ಕಾರ್ಯಕ್ಕೂ ತಾನು ಕರ್ತೃವಲ್ಲ ಎಂದು ತಿಳಿದುಕೊಂಡು ಅನಾಸಕ್ತನಾಗಿರುತ್ತಾನೆ. ಇದಕ್ಕೇ 'ಸಂನ್ಯಾಸ'ವೆಂದು ಹೆಸರು. ಕಾವಿಯ ಬಟ್ಟೆಯ ವೇಷವರು ಸಂನ್ಯಾಸಿಗಳೆನಿಸಿಕೊಂಡಿರುವರಾದರೂ ನಿಜವಾದ ಈ ಸಂನ್ಯಾಸವನ್ನು ಸಂಪಾದಿಸಿಕೊಳ್ಳಬೇಕೆಂಬ ಇಚ್ಛೆಯಿದ್ದರೆ ಮಾತ್ರ ಅವರೂ ಆ ಹೆಸರಿಗೆ ತಕ್ಕವರು. ಮಕ್ಕಳು ಆಟವಾಡುವಾಗ 'ನನ್ನನ್ನು ಮುಟ್ಟು ನೋಡೋಣ!' ಎಂದು ಗೆಳೆಯನನ್ನು ಕೇಳುತ್ತಿದ್ದ ಆಟವೊಂದು ನನಗೆ ಈಗ ನೆನಪಿಗೆ ಬಂದಿದೆ. 'ನೀನು ನನ್ನ ಕೈಯನ್ನು ಮುಟ್ಟಿದೆ, ಅಥವಾ ಕಾಲನ್ನು ಮುಟ್ಟಿದೆ; ನನ್ನನ್ನೆಲ್ಲಿ ಮುಟ್ಟಿದೆ ?' ಎಂದು ಅವರು ಕೇಳುತ್ತಿದ್ದರು. ನೋಡುವದಕ್ಕೆ ಇದು ಆಟವಾದರೂ ಇದರಲ್ಲೊಂದು ತತ್ತ್ವವು ಅಡಗಿರುತ್ತದೆ. 'ಕೈ, ಕಾಲು, ಕಣ್ಣು, ಕಿವಿ-ಮುಂತಾದ ಇಂದ್ರಿಯಸ್ಥಾನಗಳಾಗಲಿ ಅವುಗಳಲ್ಲಿರುವ ಇಂದ್ರಿಯಗಳಾಗಲಿ ನಾನಲ್ಲ' ಎಂಬ ಅರಿವು ನಮಗೆ ಆಗಾಗ್ಗೆ ನೆನಪಿಗೆ ಬರುತ್ತಿದ್ದರೆ, ಆತ್ಮಜ್ಞಾನಕ್ಕೆ ನಾವು ಎಷ್ಟು ಹತ್ತಿರವಿದ್ದಂತಾಯಿತು ! ರಹೂಗಣನೆಂಬ ರಾಜನು ತನ್ನ ಪಲ್ಲಕ್ಕಿಯನ್ನು ಹೊರುವದಕ್ಕೆಂದು ಜಡಭರತನನ್ನು ಬಿಟ್ಟಿಹಿಡಿದು ತಂದಿದ್ದಾಗ 'ಎಲಾ ಏಕೊ, ಹೀಗೆ ನಡೆಯುತ್ತೀಯೆ ? ಹೇಳಿದ್ದು ಕೇಳಲಿಲ್ಲವೆ? ಮೈ ದಪ್ಪವಾಗಿದೆ, ಸರಿಯಾಗಿ ಪಲ್ಲಕ್ಕಿಯನ್ನು ಹೊರುವದಕ್ಕೇನು ಧಾಡಿ ನಿನಗೆ ?' ಎಂದು ಕೇಳಲು ಆ ಮಹಾತ್ಮನು 'ಕೇಳುವವನು ನಡೆಯುವದಿಲ್ಲ, ನಡೆಯುವವನಿಗೆ ಕೇಳುವದಿಲ್ಲ' ಎಂದು ಉತ್ತರವನ್ನು ಕೊಟ್ಟನಂತೆ ! ವಿಷ್ಣುಪುರಾಣದ ಅದ್ವೈತಪ್ರಕರಣದಲ್ಲಿ 'ಗುಣಾ ಗುಣೇಷು ವರ್ತನ್ತೇ' ಎಂದು ಜ್ಞಾನಿಯ ಸಂನ್ಯಾಸಿತ್ವವನ್ನು ಸ್ಫುಟಗೊಳಿಸಿರುವದನ್ನು ಶ್ರವಣ ಮಾಡುವದರಿಂದ ಮುಮುಕ್ಷುಗಳಿಗೆ ಲಾಭವುಂಟು.

ಭಗವಂತನು ಎಷ್ಟು ಜನ್ಮಗಳನ್ನು ಎತ್ತಿದರೂ ಅವನು ಹುಟ್ಟಿರುವದಿಲ್ಲ, ಯಾವ ಕರ್ಮಗಳನ್ನು ಎಸಗಿದ್ದರೂ ಅವುಗಳಿಂದ ಲಿಪ್ತನಾಗಿರುವದಿಲ್ಲ; ಅಂಥ

ಆತ್ಮನೇ ತಮ್ಮ ಪರಮಾರ್ಥಸ್ವರೂಪವೆಂಬುವನ್ನು ಅರಿತವರು ಮಹಾತಪಸ್ವಿಗಳು.

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ಗೀ. ೪-೧೦

'ರಾಗ ಭಯ, ಕ್ರೋಧ- ಇವುಗಳ ಅಂಟಿಲ್ಲದೆ, ಭಗವನ್ಮಯರಾಗಿ, ಜ್ಞಾನತಪಸ್ಸಿನಿಂದ ಪವಿತ್ರರಾಗಿ ಭಗವದ್ಭಾವವನ್ನೇ ಹೊಂದಿದವರು ಅನೇಕರು ನನ್ನನ್ನು ಹೊಂದುತ್ತಾರೆ' ಎಂದು ಭಗವಂತನೇ ಹೇಳಿರುತ್ತಾನೆ.

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್॥
ಗೀ. ೪-೧೮

'ಜ್ಞಾನಿಯೇ ನಿಜವಾದ ಸಂನ್ಯಾಸಿಯೆಂಬುದೇಕೆಂದರೆ, ಅವನು ತನ್ನ ಕರಣಗಳು ಯಾವ ಕರ್ಮಗಳನ್ನು ಮಾಡುತ್ತಿರಲಿ ತಾನು ಅದಕ್ಕೆ ಸಾಕ್ಷಿಯಾಗಿರುತ್ತಾನೆ; ಆದ್ದರಿಂದ ಆ ಕರ್ಮಗಳು ನಿಜವಾಗಿ ಜ್ಞಾನಿಯದಲ್ಲ. ಇದರಂತೆ ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಕುಳಿತಿದ್ದಮಾತ್ರದಿಂದ ಅವನು ಅಕರ್ಮಿಯಾಗಿರುವದಿಲ್ಲ; ಏಕೆಂದರೆ ಅಕರ್ಮ – ಕರ್ಮವನ್ನು ಬಿಟ್ಟಿರುವದು– ಎಂಬುದು ಒಂದು ಶರೀರೇಂದ್ರಿಯಸಂಘಾತದ ಕರ್ಮವೇ ಆಗಿರುತ್ತದೆ. ಕರ್ಮ, ಅಕರ್ಮ– ಈ ಎರಡರ ಹಂಗೂ ಯಾವನಿಗೆ ಇಲ್ಲವೋ ಆ ಜ್ಞಾನಿಯೇ 'ಸಂನ್ಯಾಸಿ.'

ಯುಕ್ತ :– ಧ್ಯಾನಯೋಗಮಾರ್ಗದಿಂದ ಕೃತಕೃತ್ಯನಾದವನಿಗೆ 'ಯುಕ್ತ' ನೆಂದು ಹೆಸರು.

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।
ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥
ಗೀ. ೬-೧೮

ಏಕಾಗ್ರತೆಯಿಂದ ನಿಲ್ಲಿಸಿಕೊಂಡ ಚಿತ್ತವು ಬಾಹ್ಯವಿಷಯಗಳ ಚಿಂತೆಯನ್ನು ಬಿಟ್ಟು ದೃಷ್ಟಾದೃಷ್ಟಫಲರೂಪವಾದ ವಿಷಯಗಳಲ್ಲಿಯೂ ಆಶೆಯಿಲ್ಲದೆ, ಯಾವಾಗ ಆತ್ಮನಲ್ಲಿಯೇ ನೆಲೆನಿಲ್ಲುವದೋ, ಆಗ ಆ ಕೃತಕೃತ್ಯನಾದ ಜ್ಞಾನಿಯು 'ಯುಕ್ತ'ನೆನಿಸುತ್ತಾನೆ. ಯೋಗದ ಪರಮಾವಧಿಯನ್ನು ಮುಟ್ಟಿದವನು ತಾನೇ ತನ್ನ ಸ್ವರೂಪವನ್ನು ಅನುಭವಕ್ಕೆ ತಂದುಕೊಂಡು ಆತ್ಮಮಾತ್ರದಿಂದಲೇ ತುಷ್ಟನಾಗಿರುತ್ತಾನೆ. ಅವನಿಗೆ ಆತ್ಯಂತಿಕವಾದ ಸುಖವು ಅನುಭವಕ್ಕೆ ಬಂದಿರುತ್ತದೆ.

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥

ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ||
ಗೀ. ೬–೨೨, ೨೩

ಆ ಯೋಗಸ್ಥಿತಿಯನ್ನು ಪಡೆದುಕೊಂಡವನಿಗೆ ಪರಮಾತ್ಮಲಾಭಕ್ಕಿಂತ ಹೆಚ್ಚಿನ ಲಾಭವೊಂದಿದೆಯೆನಿಸುವದೇ ಇಲ್ಲ. ಆ ಸ್ಥಿತಿಯಲ್ಲಿ ಹೊರಗಿನ ನಿಮಿತ್ತದಿಂದ ಎಂಥ ಹೆಚ್ಚಿನ ದುಃಖವಾದರೂ ಚಲಿಸುವದಿಲ್ಲ. (ಸುತ್ತಿಗೆಯಿಂದ ಹೊಡೆದರೂ ಅವನಿಗೆ ದುಃಖವು ಕಾಣಿಸುವದಿಲ್ಲವೆಂದು ಭಾಷ್ಯಕಾರರು ಬರೆದಿರುತ್ತಾರೆ). ಅನಾತ್ಮವೇ ದುಃಖಕ್ಕೆ ಕಾರಣವಾಗಿರುವದರಿಂದ– ದುಃಖಶಬ್ದವಾಚ್ಯವಾಗಿರುತ್ತದೆ. ಈ ಆತ್ಮನಲ್ಲಿ ಒಂದಾದ 'ಯೋಗ' (ಸಮಾಧಿ) ಸ್ಥಿತಿಯಲ್ಲಿ ದುಃಖಸಂಯೋಗವು ತಪ್ಪಿ ಹೋಗಿರುತ್ತದೆ ; ಆದ್ದರಿಂದ ದುಃಖಸಂಯೋಗದ ವಿಯೋಗ– ಎಂದು ವಿಪರೀತ ಲಕ್ಷಣೆಯಿಂದ ಇದನ್ನು 'ಯೋಗ' ಎಂಬ ಹೆಸರಿನಿಂದ ಕರೆಯುತ್ತಾರೆ. ಯೋಗದ ಪರಮಾವಸ್ಥೆಯನ್ನು ಕಂಡವರು ಎಲ್ಲರಿಗೂ ಆತ್ಮನೇ ಆಗಿರುತ್ತಾರಾದ್ದರಿಂದ ವ್ಯವಹಾರದಲ್ಲಿ ಮತ್ತೊಬ್ಬರ ಸುಖವೇ ತನ್ನ ಸುಖ, ಮತ್ತೊಬ್ಬರ ದುಃಖವೇ ತನ್ನ ದುಃಖ–ಎಂದು ಬಗೆಯುತ್ತಿರುವರು. ಇಂಥ ಪರಮಯೋಗಿಗಳಾದ ಸಾಧುಜನರು ಎಲ್ಲಿಯೋ ಒಬ್ಬೊಬ್ಬರು ವಿರಳವಾಗಿ ಸಿಕ್ಕುತ್ತಾರೆ.

ಇನ್ನು ಈ ಕೃತಕೃತ್ಯನಾದ ಜ್ಞಾನಿಯನ್ನು 'ಭಕ್ತ'ನೆಂದೂ ಕರೆಯುತ್ತಾರೆಂಬುವನ್ನು ನಾವು ಲಕ್ಷಿಸಬೇಕು.

ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||
ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ||
ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ||
ಗೀ. ೭–೧೬ರಿಂದ ೧೮

ಪುಣ್ಯವಂತರಾದ ಭಗವಂತನನ್ನು ಸೇವಿಸುವ ಭಕ್ತರನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಬಹುದು. ಆರ್ತ (ಸಂಕಟದಲ್ಲಿ ನರಳುತ್ತಿದ್ದು ಭಜಿಸುವವನು (,ಅರ್ಥಾರ್ಥೀ)ತನ್ನ ಇಷ್ಟಾರ್ಥವನ್ನು ಕೊಡೆಂದು ಭಜಿಸುವವನು), ಜಿಜ್ಞಾಸು (ಆತ್ಮತತ್ತ್ವವನ್ನು ತಿಳಿಯುವಂತೆ ಅನುಗ್ರಹಿಸು ಎಂದು ಭಜಿಸುತ್ತಿರುವಾತನು), ಜ್ಞಾನಿ (ಆತ್ಮತತ್ತ್ವವನ್ನು ಅರಿತುಕೊಂಡು ಭಜಿಸುತ್ತಿರುವಾತನು). ನಾಲ್ವರಲ್ಲಿ ಜ್ಞಾನಿಯು 'ನಿತ್ಯಯುಕ್ತನು' ಎಂದರೆ ಯಾವಾಗಲೂ ಭಗವಂತನಲ್ಲಿಯೇ ಚಿತ್ತವನ್ನು ನೆಲೆನಿಲ್ಲಿಸಿಕೊಂಡಿರುವನು. ಭಕ್ತರೆಲ್ಲರೂ ಹೆಚ್ಚಿನವರೇ ಸರಿ; ಆದರೆ

ಭಗವಂತನೇ ನನಗೆ ಪರಮಗತಿ–ಎಂದು ಆತನನ್ನೇ ಭಜಿಸುತ್ತಿರುವವನು ಏಕಾಂತ ಭಕ್ತನಾಗಿರುತ್ತಾನೆ. ಜ್ಞಾನಿಭಕ್ತನು ನನಗೆ ಆತ್ಮನೇ ಆಗಿರುತ್ತಾನೆ; ಆ ಜ್ಞಾನಿ ಭಕ್ತನಿಗೆ ನಾನೇ ಪ್ರಿಯನು ; ಅವನೇ ನನಗೆ ಪ್ರಿಯನು–ಎಂದು ಭಗವಂತನು ಹೇಳಿರುತ್ತಾನೆ. ಅಕ್ಷರ ಎಂಬ ಹೆಸರಿನ ನಿರ್ವಿಶೇಷಸ್ವರೂಪನಾದ ಭಗವಂತನನ್ನು ಅಹೇತುಕವಾಗಿ ನಿತ್ಯವೂ ಭಜಿಸುತ್ತಿರುವ ಜ್ಞಾನಿಯನ್ನು 'ಸ ಮೇ ಪ್ರಿಯಃ' (೧೨–೧೪), 'ಸ ಚ ಮೇ ಪ್ರಿಯಃ' (೧೨–೧೫), 'ಭಕ್ತಿಮಾನ್ ಯಃ ಸ ಮೇ ಪ್ರಿಯಃ' (೧೨–೧೭) 'ಭಕ್ತಿಮಾನ್ ಮೇ ಪ್ರಿಯೋ ನರಃ' (೧೨–೧೯)–ಎಂದು ಪಲ್ಲವಿಯಂತೆ ಹಾಡಿಹೊಗಳಿರುತ್ತಾನೆ.

ಹೀಗೆ ತತ್ತ್ವವಿಚಾರ( ಸಾಂಖ್ಯ )ಮಾರ್ಗದಿಂದ ಜ್ಞಾನಿಯಾದ 'ಸ್ಥಿತ ಪ್ರಜ್ಞ', ಧ್ಯಾನಯೋಗಮಾರ್ಗದಿಂದ ಜ್ಞಾನಿಯಾದ 'ಯುಕ್ತ', ನಿರ್ಗುಣನಾದ ಪರಮಾತ್ಮನನ್ನೇ ಸರ್ವವ್ಯಾಪಿಯಾದ ತನ್ನ ಆತ್ಮನೆಂದು ತಿಳಿದು ಆತನೇ ತನಗೆ ಪ್ರಿಯನೆಂದು ಭಜಿಸುತ್ತಿರುವ 'ಪರಭಕ್ತ'– ಇವರೆಲ್ಲರೂ ಪರಮಾತ್ಮ ಸ್ವರೂಪರೇ ಆಗಿರುತ್ತಾರೆ. ಇವರೆಲ್ಲರೂ ಅವ್ಯಭಿಚರಿತಭಕ್ತಿಯಿಂದ ಪರಮಾತ್ಮ ಚಿಂತನೆಯಲ್ಲಿಯೇ ಇರುವವರಿಂದ 'ನಿಸ್ತ್ರೈಗುಣ್ಯ'ರಾಗಿರುತ್ತಾರೆ ಎಂದರೆ ಸರ್ವಥಾ ನಿಷ್ಕಾಮರಾಗಿರುತ್ತಾರೆ. ಭಗವದ್ಗೀತೆಯಂತೆ ಈ ಪರಭಕ್ತಿಯೇ ಪ್ರಧಾನ; ಮಿಕ್ಕ ಸಾಧನವೆಲ್ಲವೂ ಇದಕ್ಕೆ ಅಂಗವಾಗಿರುತ್ತದೆ. ಪರಭಕ್ತರಾದ ಕೃತಕೃತ್ಯರನ್ನೇ ಅನುಕರಿಸಿ ಸಾಧಕರು ಪರಮಪುರುಷಾರ್ಥವನ್ನು ಹೊಂದಬೇಕು.

## ೪೭. ವ್ಯವಹಾರವೂ ಪರಮಾರ್ಥವೂ

(19—9—69)

ಕೃತಕೃತ್ಯರ ಲಕ್ಷಣವನ್ನು ಹೇಳಿದ್ದಾಯಿತು. ಅದನ್ನು ಹೇಳುವಾಗ, ಸಾಧಕರಾದವರು ಯಾವಯಾವದನ್ನು ಪ್ರಯತ್ನದಿಂದ ಸಾಧಿಸಿಕೊಳ್ಳಬಹುದೋ ಅಂಥದನ್ನೇ ಜಿಜ್ಞಾಸುಗಳ ಮುಂದೆ ಇಟ್ಟಿರುತ್ತದೆ. ಸತ್ಪುರುಷರ ದರ್ಶನ, ಸ್ಪರ್ಶನ, ಸಂಭಾಷಣ– ಮುಂತಾದವುಗಳಿಂದಲೇ ಜಿಜ್ಞಾಸುಗಳು ಕೃತಕೃತ್ಯರಾಗಬೇಕಾಗಿರುತ್ತದೆ. ನಾವು ಭಗವದ್ಭಕ್ತರೂ ಕೃತಾರ್ಥರೂ ಆಗಬೇಕೆಂದು ಆಶೆಯಿದ್ದರೆ ಅಂಥ ಕೃತಕೃತ್ಯರಾದ ಮಹಾಪುರುಷರ ಸೇವೆಯನ್ನೇ ಮಾಡಬೇಕು.

ಜ್ಞಾನಿಗಳ ಹೃದಯದಲ್ಲಿ ಭಗವಂತನು ನಿತ್ಯವೂ ನೆಲಸಿರುತ್ತಾನೆ. ವಸ್ತುಗಳನ್ನು ಭೋಗಿಸುವದರಿಂದ ಅವುಗಳ ರುಚಿಯನ್ನು ಗೊತ್ತುಮಾಡಿಕೊಳ್ಳಬಹುದೇ ಹೊರತು, ವಸ್ತುಗಳನ್ನು ಬಿಟ್ಟು ಬರಿಯ ರುಚಿಯನ್ನೇ ಹೇಗೆ ನೇರಾಗಿ ಕಂಡುಕೊಳ್ಳುವದು ಆಗಲಾರದೋ, ಹಾಗೆಯೇ ಪರಭಕ್ತರೂ ಪರಜ್ಞಾನಿಗಳೂ ಆಗಿರುವ ಸತ್ಪುರುಷರ ಸೇವೆಯಿಂದಲೂ ಅವರ ಉಪದೇಶದಿಂದಲೂ ತತ್ತ್ವವನ್ನು ಅನುಭವಕ್ಕೆ ತಂದುಕೊಳ್ಳಬೇಕಾಗಿರುತ್ತದೆ. ಅವರಿಗೆ ಶರಣುಬಂದು 'ತಾವು ನನ್ನನ್ನು ಉದ್ಧರಿಸಬೇಕು, ಎಂದು ಕೇಳಿಕೊಂಡರೆ ಅವರು ಶಿಷ್ಯರ ಅಧಿಕಾರವನ್ನರಿತು ಅವರವರ ಅಂತಸ್ತಿಗೆ ಇಳಿದು ತಕ್ಕ ಬೋಧೆಯನ್ನು ಮಾಡುತ್ತಾರೆ.

ನಾವೆಲ್ಲರೂ ನಿತ್ಯಶುದ್ಧಮುಕ್ತಸ್ವಭಾವದವರೇ ಆಗಿರುತ್ತಿದ್ದರೂ ಅವಿದ್ಯೆಯ ಮಬ್ಬಿನಿಂದ ನಮ್ಮ ಅಂತಃಕರಣದಲ್ಲಿ ಪರಮಾರ್ಥತತ್ತ್ವದ ಅರಿವು ಉಂಟಾಗದೆ ಇರುತ್ತದೆ.

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ ಪರಮ್ ॥ ಗೀ. ೫-೧೬

ಎಂದಿರುವಂತೆ ಯಾವ ಮಹನೀಯರಿಗೆ ಜ್ಞಾನದಿಂದ ಅಜ್ಞಾನವು ತೊಲಗಿರುವದೋ ಅವರಿಗೆ ಸೂರ್ಯನು ಸ್ವಭಾವದಿಂದಲೇ ಎಲ್ಲವನ್ನೂ ಬೆಳಗಿತೋರಿಸುವಂತೆ, ಜ್ಞಾನವು ಆ ಪರಮಾತ್ಮನ ತತ್ತ್ವವನ್ನು ಬೆಳಗಿತೋರಿಸುತ್ತದೆ.

ಜ್ಞಾನಿಗಳ ದೃಷ್ಟಿಗೂ ಅಜ್ಞರ ದೃಷ್ಟಿಗೂ ಬಹಳ ವೈಲಕ್ಷಣ್ಯವಿರುತ್ತದೆ. ಏಕೆಂದರೆ ಅಜ್ಞರು ಪ್ರಾಕೃತರಂತೆ ಲೌಕಿಕವ್ಯವಹಾರವನ್ನು ಮಾಡುತ್ತಿರಲಿ, ಸಾಧಕರಾಗಿ ವೈದಿಕವ್ಯವಹಾರವನ್ನೇ ಮಾಡುತ್ತಿರಲಿ, ಅವರ ವ್ಯವಹಾರವೆಲ್ಲವೂ ಅವಿದ್ಯೆಯ ಕಾರ್ಯವೇ ಆಗಿರುತ್ತದೆ. ಅವಿದ್ಯೆ ಎಂದರೆ ಪರಮಾರ್ಥಸತ್ಯನಾಗಿರುವ ಆತ್ಮನನ್ನೂ, ವ್ಯವಹಾರದಲ್ಲಿ ಸತ್ಯವೆಂದು ತೋರಿದರೂ ಆತ್ಮನಿಗಿಂತ ವ್ಯತಿರಿಕ್ತವಾಗಿ ನಿಜವಾಗಿಲ್ಲದ ಶರೀರೇಂದ್ರಿಯಮನಸ್ಸುಗಳನ್ನೂ, ಒಂದನ್ನೊಂದೆಂದು ಭಾವಿಸಿಕೊಂಡು ಒಂದರ ಧರ್ಮವನ್ನೊಂದರಲ್ಲಿ ಹುಟ್ಟುಗಟ್ಟಿಕೊಂಡಿರುವದು. ಶಾಸ್ತ್ರೀಯವಾದ ಕ್ರಿಯಾಕಾರಕಫಲವ್ಯವಹಾರವೇ ಆಗಲಿ, ಜ್ಞಾತೃಜ್ಞೇಯಜ್ಞಾನವಿಭಾಗದ ವ್ಯವಹಾರವಾಗಲಿ– ಎಲ್ಲವೂ ಈ ಅವಿದ್ಯೆಯ ಕ್ಷೇತ್ರದಲ್ಲಿಯೇ ಇರುತ್ತದೆ. ಅದು ಸತ್ಯವೆಂದೇ ಬಗೆದು ಅಜ್ಞರು ಎಲ್ಲಾ ವ್ಯವಹಾರವನ್ನೂ ಮಾಡುತ್ತಿರುವರು. ಆದರೆ ಜ್ಞಾನಿಗಳು ಹಾಗಲ್ಲ. ಅವರು ವ್ಯವಹಾರವನ್ನು ಮಾಡುತ್ತಿರುವಂತೆ ತೋರುವಾಗಲೂ ಅವರಿಗೆ ಅದರಲ್ಲಿ ಸತ್ಯತ್ವಬುದ್ಧಿಯಿರುವದಿಲ್ಲ. ಇದನ್ನು ಭಗವಂತನು ದೃಷ್ಟಾಂತಪೂರ್ವಕವಾಗಿ ಹೀಗೆ ತಿಳಿಯಿಸಿಕೊಟ್ಟಿರುತ್ತಾನೆ :

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥

ಗೀ. ೨-೬೯

ಪರಮಾರ್ಥವೆಂಬುದು ಸರ್ವಭೂತಗಳಿಗೂ ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಎಲ್ಲಾ ಪ್ರಾಣಿಗಳಿಗೂ ಕಗ್ಗತ್ತಲೆಸಂತೆ ಇರುವದು. ಕತ್ತಲೆಯಲ್ಲಿ ಎಲ್ಲಾ ಪದಾರ್ಥಗಳೂ ಕಪ್ಪೇ ; ಯಾವದೊಂದು ವಸ್ತುವನ್ನೂ 'ಇಂಥದ್ದೆಂದು ಗೊತ್ತುಮಾಡುವದಕ್ಕೆ ಬರುವಂತಿರುವದಿಲ್ಲ. ಅಲ್ಲವೆ? ಪರಮಾರ್ಥವೆಂದರೆ ಅಜ್ಞರಿಗೆ ಹಾಗೆ ; ಪರಮಾರ್ಥವೊಂದಿದೆ– ಎಂದು ಬಲ್ಲವರು ಹೇಳಿದರೆ, ಹಾಗಿದ್ದರೆ ಅದು ನಮಗೇಕೆ ತಿಳಿಯಬರಲೊಲ್ಲದು ?– ಎಂದು ಅವರು ಶಂಕಿಸುತ್ತಿರುವರು. ರಾತ್ರಿಯಲ್ಲಿ ವ್ಯವಹರಿಸುವ ಗೂಬೆಯೇ ಮುಂತಾದ ಪ್ರಾಣಿಗಳಿಗೆ ಹಗಲು ಸೂರ್ಯನೂ ಪ್ರಚಂಡ ಬಿಸಿಲೂ ಬೆಳಕೂ ಇರುತ್ತಿದ್ದರೂ ಬೆಳಕೆಂದರೆ ಏನೆಂಬುದು ಹೇಗೆ ಗೊತ್ತಾಗುವದಿಲ್ಲವೋ ಹಾಗೆ, ಎಲ್ಲಿಯೂ ಪರಮಾತ್ಮನೊಬ್ಬನೇ ಎಂಬ ನಿಜವೂ ಶಾಸ್ತ್ರಚಾರ್ಯರ ಉಕ್ತಿಯನ್ನು ಕೇಳಿದಮೇಲೂ ಅವರಿಗೆ ತತ್ತ್ವವು ಮನಸ್ಸಿನಲ್ಲಿ ಮಿಂಚದೆ ಇರುತ್ತದೆ. ಈ ಅಜ್ಞರ ನಿಶಾಕಾಲದಲ್ಲಿಯೇ ಸಂಯಮಿಯಾದ ಜ್ಞಾನಿಯು ಎಚ್ಚತ್ತಿರುವನು. ಎಲ್ಲೆಲ್ಲಿಯೂ ಆತ್ಮನೊಬ್ಬನೇ ಇರುವನಲ್ಲ ! ಕೂಟಸ್ಥನಿತ್ಯಚೈತನ್ಯಸ್ವರೂಪನಾದ ಆ ಪರಮಾತ್ಮನನ್ನೇ ಇವರು ಕಾಣದೆ ಇರುವರಲ್ಲ !– ಎಂದು ಮರುಕದಿಂದ ಪರಿತಪಿಸುತ್ತಿರುವನು.

ಆದರೆ ಯಾವ ನಿದ್ರೆಯಲ್ಲಿ ಜೀವರೆಲ್ಲರೂ ಎಚ್ಚರವಾಗಿರುವರೋ, 'ಇದು ಗ್ರಾಹ್ಯ, ಇದು ಗ್ರಾಹಕ' ಎಂದು ಇಂದ್ರಿಯಗಳಿಂದ ವಿಷಯಗಳನ್ನು ಗ್ರಹಿಸುತ್ತಾ ತಾವು ಎಚ್ಚರವಾಗಿಯೇ ಇರುವೆವೆಂದು ಭಾವಿಸಿಕೊಂಡಿದ್ದರೂ ನಿಜವಾಗಿ ಅವಿದ್ಯಾ ನಿದ್ರಾದೋಷದಿಂದ ಅನಾದಿಯಾದ ಸ್ವಪ್ನವನ್ನೇ ಎಚ್ಚರವೆಂದುಕೊಂಡಿರುವರೋ, 'ಅದೆಲ್ಲವೂ ನಿಜವಾಗಿ ರಾತ್ರಿಯೇ, ಇವರೆಲ್ಲರೂ ಕನಸುಕಾಣುತ್ತಿದ್ದಾರೆ'– ಎಂದು ನಿಜವನ್ನು ಕಂಡಿರುವ ತತ್ತ್ವಜ್ಞಾನಿಗೆ ಎಂದಿಗೂ ಆ ವ್ಯವಹಾರದಲ್ಲಿ ಪರಮಾರ್ಥ ಬುದ್ಧಿಯುಂಟಾಗಲಾರದು.

ಜ್ಞಾನಿಗಳಾದವರು ಹೊರಗೆ ವಿವಿಧವಾದ ವಿಚಿತ್ರಭೇದಗಳನ್ನು ಕಾಣುತ್ತಿದ್ದರೂ 'ಇದೆಲ್ಲ ಮಾಯೆಯೇ, ನಿಜವಾಗಿ ಒಬ್ಬ ಪರಮಾತ್ಮನ ವಿಭೂತಿಮಾತ್ರವೇ ಇದು ; ಆತನಿಗಿಂತ ಬೇರೆಯಾಗಿ ಮತ್ತೇನೂ ನಿಜವಾಗಿರುವದೇ ಇಲ್ಲ!' ಎಂದು ತತ್ತ್ವಜ್ಞಾನದಲ್ಲಿಯೇ ಮುಳುಗಿರುತ್ತಾರೆ. 'ಇವರೆಲ್ಲರೂ ನನ್ನ ಆತ್ಮನೇ' ಎಂಬುದು ಜ್ಞಾನಿಯ ನಿಶ್ಚಯ. ರಾಮತೀರ್ಥರು 'ಮಹನೀಯರ ಮತ್ತು ಮಹಿಳೆಯರ ರೂಪದಲ್ಲಿ ಕಾಣುತ್ತಿರುವ ನನ್ನ ಆತ್ಮನೇ!' ಎಂದು ಭಾಷಣಕಾಲದಲ್ಲಿ

ಸಭೆಯವರನ್ನು ಸಂಬೋಧಿಸುತ್ತಿದ್ದದ್ದು ಶ್ರೋತೃಗಳಿಗೆ ಆಶ್ಚರ್ಯಕರವಾಗಿ ಕಂಡಿರಬಹುದು ; ಆದರೆ ಭಾಷಣಕಾರರ ಭಾವನೆಯು ಹಾಗಿದ್ದಿತೆಂಬುದನ್ನು ಅವರೇನು ಬಲ್ಲರು ? ಜ್ಞಾನಿಯು ಉಪದೇಶಮಾಡುವದೆಂಬುದೊಂದು ಲೀಲೆ. 'ನಾನೇ ಗುರುವು, ನಾನೇ ಶಿಷ್ಯನು ; ನಾನೇ ಶಾಸ್ತ್ರಜ್ಞಾನದಿಂದ ಅವಿದ್ಯೆಯನ್ನು ಕಳೆದುಕೊಂಡು ತತ್ತ್ವಜ್ಞಾನವನ್ನು ಸಂಪಾದಿಸಿಕೊಳ್ಳುತ್ತಿರುವೆನು. ನಿಜವಾಗಿ ಅವಿದ್ಯಾವಂತರು, ವಿದ್ವಾಂಸರು–ಎಂಬ ಬೆಂಗಡವೂ ಇಲ್ಲ ; ಇದೆಲ್ಲ ಒಬ್ಬ ಪರಮಾತ್ಮನೇ, ಆ ತತ್ತ್ವವೇ ನಾನು !' ಎಂಬುದು ಆತನ ನಿಶ್ಚಯ. ಶ್ರೀಕೃಷ್ಣಭಗವಂತನು ಅರ್ಜುನನಿಗೆ ಉಪದೇಶವನ್ನು ಮಾಡುತ್ತಿರುವಾಗ 'ವೃಷ್ಣೀನಾಂ ವಾಸುದೇವೋಽಸ್ಮಿ ಪಾಣ್ಡವಾನಾಂ ಧನಞ್ಜಯಃ' ವೃಷ್ಣಿಗಳಲ್ಲಿ ವಾಸುದೇವನಾಗಿ ಕಾಣಿಸಿಕೊಳ್ಳುತ್ತಿರುವವನೂ ನಾನೇ, ಪಾಂಡವರಲ್ಲಿ ಅರ್ಜುನನಾಗಿ ತೋರುತ್ತಿರುವವನೂ ನಾನೇ (ಗೀ. ೧೦-೩೭) ಎಂದಿರುವದು ಬರಿಯ ಉಪಚಾರದ ಮಾತಲ್ಲ. ಆ ಭಗವಂತನಿಗೆ ಎಲ್ಲವೂ ತನ್ನ ವಿಭೂತಿಯೆಂದೇ ನಿಶ್ಚಿತವಾಗಿದ್ದಿತು ; ಆವನು ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದಾಗ ಇಡಿಯ ಜಗತ್ತಿನ ರೂಪವಲ್ಲಿಯೇ ಅರ್ಜುನನಿಗೆ ತೋರಿಕೊಂಡನು : ಆ ರೂಪದಲ್ಲಿ ತಾನೂ ಹುದುಗಿಕೊಂಡಿರುವೆನೆಂಬ ದಿವ್ಯದೃಷ್ಟಿಯ ಭಾವನೆಯನ್ನು ಅರ್ಜುನನಿಗೆ ಆತನು ತನ್ನ ಯೋಗಮಹಿಮೆಯಿಂದ ಅನುಗ್ರಹಿಸಿದನು !

ಜ್ಞಾನಿಗಳು ಉಪದೇಶಿಸುವಾಗ ತಮ್ಮ ಹೃದಯವೂ ಶಿಷ್ಯರ ಹೃದಯವೂ ಒಂದಾಗುವಂತೆ ಮಾಡುತ್ತಾರೆ. ಅವರು ಮಾಡಿದ ಉಪದೇಶದ ಅಂಜನದಿಂದ ಶಿಷ್ಯರ ಅಜ್ಞಾನದೃಷ್ಟಿಯು ಪರೆಯು ಹೋಗಿಬಿಡುತ್ತದೆ.

ವ್ಯವಹಾರವೆಂದರೆ ನಡೆ, ನುಡಿ, ಬಗೆ– ಎಂದು ಮೂರು ವಿಧವಾಗಿರುವ ವ್ಯಾಪಾರ. ಅಜ್ಞರು ಈ ವ್ಯವಹಾರವೇ ಪರಮಾರ್ಥಸತ್ಯ– ಎಂದುಕೊಂಡಿರುತ್ತಾರೆ. ಈ ವ್ಯವಹಾರವು ಮೊದಲು ಇದ್ದುಕೊಂಡಿದ್ದು ಜ್ಞಾನಿಗಳು ಉಪದೇಶ ಮಾಡಿದಬಳಿಕ ಮರೆಯಾಗುವದಿಲ್ಲ. 'ಅವಿದ್ಯೆಯೆಂಬುದು ಹಿಂದೆ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರುವದಿಲ್ಲ' ಎಂಬ ದಿವ್ಯದೃಷ್ಟಿಯನ್ನು ಅವರು ಅನುಗ್ರಹಿಸುತ್ತಾರೆ, ಅಷ್ಟೆ. ಸೂರ್ಯನು ಉದಯಿಸಿದಮೇಲೆ ಕತ್ತಲೆಯನ್ನು– ಕಸವನ್ನು ಗುಡಿಸುವಹಾಗೆ–ಒಂದು ಕಡೆಯಿಂದ ನಾಶಗೊಳಿಸುವದಿಲ್ಲ; ಬೆಳಕಾದರೆ ಕತ್ತಲೆ ತಾನೇ ಇಲ್ಲವಾಗಿಬಿಡುತ್ತದೆ, ಅಲ್ಲವೆ ? ಅವಿದ್ಯಾರಾತ್ರಿಯನ್ನು ಕಳೆಚುವದಕ್ಕೆಂದೇ ಭಗವಂತನು ಪ್ರವೃತ್ತನಾಗಿದ್ದದ್ದರಿಂದ **'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ'**(ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ನಾನೆಂದೇ ತಿಳಿ) –ಎಂದನೇ ಹೊರತು' ಕ್ಷೇತ್ರಜ್ಞನನ್ನು ತನ್ನರೂಪಕ್ಕೆ ತಿರುಗಿಸುವ

ಇಂದ್ರಜಾಲವಿದ್ಯೆಯನ್ನೇನೂ ತೋರಿಸಲಿಲ್ಲ 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್' (ಬೃ. ೪-೫-೧೫) ಎಂಬ ಶ್ರುತಿಯಲ್ಲಿ ಎಲ್ಲವೂ ಆತ್ಮನೇ ಆದಾಗ ಯಾವನು ಯಾವದನ್ನು ಏತರಿಂದ ಕಂಡಾನು? ಎಂದೇ ಹೇಳಿದೆ. ದ್ರಷ್ಟೃ (ನೋಡುವವ), ದೃಶ್ಯ (ನೋಡತಕ್ಕ ವಿಷಯ), ದರ್ಶನ (ನೋಟ)- ಎಂಬ ವಿಭಾಗವೇ ಆತ್ಮನಲ್ಲಿರುವದಿಲ್ಲವೆಂಬುದೇ ಪರಮಾರ್ಥ- ಎಂಬುದು ಶ್ರುತಿಯ ಆಶಯ.

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥
ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥

ಗೀ. ೧೦-೧೦, ೧೧

'ಯಾರು ನನ್ನನ್ನು ಪ್ರೇಮಪೂರ್ವಕವಾಗಿ ಭಜಿಸುತ್ತಿರುವರೋ ಅವರಿಗೆ ನನ್ನ ಬಳಿಗೇ ಬಂದು ಸೇರುವ ಬುದ್ಧಿಯೋಗವನ್ನು ಕೊಡುತ್ತೇನೆ'-ಎಂದು ಭಗವಂತನು ಹೇಳುವಾಗ ಈಗ ತನಗಿಂತ ದೂರದಲ್ಲಿರುವ ಭಕ್ತರು ಮುಂದೆ ತನ್ನ ಬಳಿಗೆ ಬಂದು ಸೇರುವರೆಂಬ ಭ್ರಾಂತಿಯುಂಟಾಗದೆ ಇರಲಿ- ಎಂದು 'ಅವರ ಮೇಲಿನ ಮರುಕದಿಂದಲೇ, ಅಜ್ಞಾನದಿಂದ ಆಗಿರುವ ತಮಸ್ಸನ್ನು ಝಗಝಗಿಸುವ ಜ್ಞಾನ ದೀಪದಿಂದ ನಾಶಗೊಳಿಸುವೆನು'-ಎಂದೂ ಹೇಳಿರುತ್ತಾನೆ. ಅಜ್ಞಾನವು ಹೋದ ಮಾತ್ರದಿಂದ 'ಭಗವಂತನೂ ನಾನೂ ಒಂದೇ' ಎಂಬ ಅರಿವು ಅವರಿಗೆ ಉಂಟಾಗುವದು- ಎಂಬುದೇ ಭಗವಂತನ ಅಭಿಪ್ರಾಯ.

## ೪೮. ಸಾಕ್ಷೀ

(20—9—69)

ಕೃತಕೃತ್ಯರ ದೃಷ್ಟಿಯಿಂದ ಒಬ್ಬನೇ ಆತ್ಮನು, ಅಜ್ಞರ ದೃಷ್ಟಿಯಿಂದ ಅನೇಕರು ಆತ್ಮರು-ಎಂದು ತಿಳಿಯುವದು ತಪ್ಪು. ವ್ಯವಹಾರವೆಲ್ಲ ಬರಿಯ ಕನಸು -ಎಂಬುದು ಕೃತಕೃತ್ಯರಿಗೆ ಗೊತ್ತಾಗಿರುತ್ತದೆ; ಅಜ್ಞರು ಇದನ್ನು ಅರಿಯರು ಅಷ್ಟೆ. ಭಗವಂತನು ತನ್ನ ಲೀಲಾವತಾರಗಳ ವಿಷಯವನ್ನು ಹೇಳುವದಕ್ಕೆ ಹೊರಟಾಗ :

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರನ್ತಪ ॥ ಗೀ. ೪–೫

ಅರ್ಜುನನೆ, ನನಗೂ ನಿನಗೂ ಎಷ್ಟೋ ಜನ್ಮಗಳು ಆಗಿಹೋಗಿವೆ ; ಅವುಗಳೆಲ್ಲವನ್ನೂ ನಾನು ಬಲ್ಲೆ ; ಆದರೆ ನೀನು ಅರಿಯೆ– ಎಂದು ಹೇಳಿದ್ದಾನಲ್ಲವೆ ?

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥
ಗೀ. ೪–೯

'ನನ್ನ ದಿವ್ಯವಾದ ಜನ್ಮವನ್ನೂ ಕರ್ಮವನ್ನೂ ತತ್ತ್ವರೀತಿಯಿಂದ ಇದ್ದದ್ದು ಇದ್ದ ಹಾಗೆ ಯಾವನು ಅರಿಯುತ್ತಾನೋ ಅವನು ದೇಹವನ್ನು ಬಿಟ್ಟಬಳಿಕ ಮತ್ತೊಂದು ಜನ್ಮವನ್ನು ಪಡೆಯುವದಿಲ್ಲ'– ಎಂದನು. ಭಗವಂತನು ಪ್ರಕೃತಿಯನ್ನು ತನ್ನ ವಶಮಾಡಿಕೊಂಡು ಅನೇಕಜನ್ಮಗಳನ್ನು ಪಡೆದಂತೆ ಮಾಯೆಯಿಂದ ತೋರಿಸಿಕೊಳ್ಳುತ್ತಾನೆ ; ಅಜ್ಞನು ತಾನು ಮಾಡಿದ ಕರ್ಮಗಳಿಂದ ಹಿಂದೆಯೂ ಅನೇಕ ಜನ್ಮಗಳನ್ನು ಪಡೆದಿರುತ್ತೇನೆ, ಮುಂದೆಯೂ ಪಡೆಯುವೆನು. ಎಂದು ಭಾವಿಸಿಕೊಂಡಿರುತ್ತಾನೆ.

ಆದರೆ ಇದರಲ್ಲಿ ಒಂದು ವಿಶೇಷವಿದೆ: ಭಗವಂತನು ಸ್ವತಂತ್ರನಾಗಿ ಧರ್ಮೋದ್ಧಾರಕ್ಕಾಗಿ ಅನೇಕಸಲ ಹುಟ್ಟುತ್ತಿರುವನೆಂದೂ ಅಜ್ಞರು ಪ್ರಕೃತಿಪರವಶರಾಗಿ ಕರ್ಮವನ್ನು ಮಾಡುತ್ತಾ ಮೇಲಿಂದಮೇಲೆ ಜನ್ಮಗಳನ್ನು ಪಡೆಯುತ್ತಿರುವರೆಂದೂ ಇಲ್ಲಿ ಹೇಳಿರುವದುಕೂಡ ವ್ಯವಹಾರದೃಷ್ಟಿಯಿಂದಲೇ ; ಪರಮಾರ್ಥದೃಷ್ಟಿಯಿಂದಲ್ಲ, ಎಂದರೆ ಭಗವಂತನು ತನ್ನ ಉಪದೇಶದ ಪ್ರಾರಂಭದಲ್ಲಿಯೇ ಹೀಗೆಂದಿರುತ್ತಾನೆ :

ನ ಜಾಯತೇ ಮ್ರಿಯತೇ ವಾ ಕದಾಚಿ-
ನ್ನಾಯಂ ಭೂತ್ವಾಽಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥ ಗೀ. ೨–೨೦

'ಈ ಆತ್ಮನು ಎಂದಿಗೂ ಹುಟ್ಟುವದಿಲ್ಲ, ಸಾಯುವದೂ ಇಲ್ಲ; ಮೊದಲು ಇದ್ದು ಆಮೇಲೆ ಇಲ್ಲವಾಗುವದೂ ಇಲ್ಲ. ಇವನು ಅಜನು, ನಿತ್ಯನು, ಶಾಶ್ವತನು, ಪುರಾಣನು, ಶರೀರವನ್ನು ಕೊಂದರೂ ಇವನನ್ನು ಕೊಂದಂತಾಗುವದಿಲ್ಲ.' ಆದ್ದರಿಂದ ಪರಮಾರ್ಥದೃಷ್ಟಿಯಿಂದ ನೋಡಿದಾಗ ಎಲ್ಲರಿಗೂ ಒಬ್ಬನೇ ಆತ್ಮನು, ಆ ಪರಮಾರ್ಥಾತ್ಮನು ಹುಟ್ಟುವದಿಲ್ಲ, ಸಾಯುವದೂ ಇಲ್ಲ.

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ಗೀ.೪-೬

'ಹೀಗೆ ಎಲ್ಲರಿಗೂ ಆತ್ಮನಾಗಿರುವ ನಾನು ಜನ್ಮರಹಿತನೂ ನಿರ್ವಿಕಾರಸ್ವರೂಪನೂ ಆಗಿರುತ್ತಿದ್ದರೂ ಪ್ರಾಣಿಗಳಿಗೆ ಒಡೆಯನಾದ ಪರಮೇಶ್ವರನೇ ಆಗಿ ಸರ್ವಸ್ವತಂತ್ರ ನಾಗಿದ್ದರೂ ಪ್ರಕೃತಿಯನ್ನು ವಶಗೊಳಿಸಿಕೊಂಡು ಮಾಯೆಯಿಂದ ಹುಟ್ಟಿದಂತೆ ಕಾಣಿಸಿಕೊಳ್ಳುತ್ತಿರುವೆನು' ಎಂದು ಸ್ಪಷ್ಟವಾಗಿ ಹೇಳಿರುವದರಿಂದ ಪರಮಾರ್ಥ ದೃಷ್ಟಿಯಿಂದ ಅಜಾತಿವಾದವೇ ಸತ್ಯವೆಂಬುದು ಸ್ಪಷ್ಟವಾಗುತ್ತದೆ.

ಈಗ ನಾನು ಮಾತನಾಡುತ್ತಿರುವದು ಪರಮಾರ್ಥದೃಷ್ಟಿಯಿಂದ. ಜ್ಞಾನಿ ಗಳಿಗೆ ಯಾವದೋ ಅದ್ಭುತಶಕ್ತಿಯಿದೆ, ಆದರಿಂದ ಅವರು ಸಾಯುವದಿಲ್ಲ– ಎಂದು ಹೇಳುವದಕ್ಕೇನೂ ಈಗ ಹೊರಟಿಲ್ಲ. ಯಾರೋ ಒಬ್ಬ ಮಹಾತ್ಮರು ಬಹಳ ದಿವಸಗಳವರೆಗೆ ಹೂಳಿಸಿಕೊಂಡಿದ್ದರೂ ಸಾಯದೆ ಮೇಲಕ್ಕೆದ್ದರಂತೆ ! ಅವರು ಬೆಂಕಿಯಿಂದ ಸುಡಿಸಿಕೊಂಡರೂ ಯಾವ ಗಾಯವನ್ನೂ ಹೊಂದದೆ ಇದ್ದರಂತೆ! ಇಂಥ ಅದ್ಭುತಲೀಲೆಗಳನ್ನು ಜ್ಞಾನಿಗಳು ಮಾಡಬಲ್ಲರೆಂದಾಗಲಿ, ಅಥವಾ ನನ್ನಂಥ ಮಂದದೃಷ್ಟಿಯ, ಕೈಕಾಲುಗಳಲ್ಲಿ ಶಕ್ತಿಸಾಲದಿರುವವನೂ ಗೀತಾಜ್ಞಾನದ ಮಹಿಮೆಯಿಂದ ಸಾವನ್ನು ಜಯಿಸುವ ಅದ್ಭುತಲೀಲೆಯನ್ನು ತೋರಿಸುವದಕ್ಕೆ ಆದೀತೆಂದಾಗಲಿ, ಈಗ ನಾನು ಹೇಳುತ್ತಿಲ್ಲ. ನಾವು ಎಂಥ ಬಲಹೀನರಾಗಿರಲಿ, ಎಷ್ಟೇ ಜರಾರೋಗಗಳಿಂದ ನರಳುತ್ತಿರಲಿ, ನಮಗೆಲ್ಲ ಆತ್ಮ ನಾಗಿರುವ ಪರಮಾರ್ಥಾತ್ಮನೊಬ್ಬನು ಇರುತ್ತಾನೆ; ಅವನಿಗೆ ಜನ್ಮಮೃತ್ಯು ಜರಾವ್ಯಾಧಿಗಳ ಸೋಂಕು ಒಂದಿಷ್ಟೂ ಇಲ್ಲ–ಎಂಬ ಪರಮಾರ್ಥವನ್ನು ಮಾತ್ರ ಇಲ್ಲಿ ತಮ್ಮ ಮುಂದೆ ಇಟ್ಟಿರುತ್ತೇನೆ. ಈ ಆತ್ಮರು ರಾಯರಿಗೊಬ್ಬ, ರಂಕನಿಗೆ ಒಬ್ಬ; ಸ್ವಾಮಿಗಳಿಗೊಬ್ಬ, ಅವರ ಶಿಷ್ಯನಿಗೊಬ್ಬ–ಹೀಗಿರುವದಿಲ್ಲ. ಬ್ರಹ್ಮನಿಂದ ಹಿಡಿದು ಕ್ರಿಮಿಯವರೆಗೂ ಒಬ್ಬನೇ ಆತ್ಮನು.

ಭಗವಂತನು ಈ ವಿಷಯವನ್ನು ಸ್ಫುಟವಾಗಿ ಹೇಳಿರುತ್ತಾನೆ.

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥
ಗೀ. ೫-೨೯

ನಮ ಯಜ್ಞಗಳು, ತಪಸ್ಸುಗಳು–ಇವುಗಳ ಫಲವು ಯಾರಿಗೆ ಸಲ್ಲುತ್ತದೆಯೋ ಅಂಥ ಯಜ್ಞಕರ್ತೃಗಳಿಗೂ ತಪಸ್ವಿಗಳಿಗೂ ದೇವತೆಗಳಿಗೂ ಒಬ್ಬನೇ ಆತ್ಮನು ; ಕರ್ಮವನ್ನು ಮಾಡುವ ಕರ್ತೃಗಳಿಗೆ ಬೇರೆಬೇರೆ ಆತ್ಮರಿಲ್ಲ, ಫಲವನ್ನು ಕೊಡುವ

ಇಂದ್ರ, ಮಿತ್ರ, ವರುಣ–ಮುಂತಾದ ದೇವತೆಗಳಿಗೂ ಬೇರೆಬೇರೆಯ ಆತ್ಮರಿಲ್ಲ, ಸರ್ವಲೋಕಗಳಿಗೂ ಒಡೆಯನಾದ ಮಹೇಶ್ವರನೇ ಅವರಿಗೆಲ್ಲ ಆತ್ಮನು. ಸರ್ವ ಪ್ರಾಣಿಗಳಿಗೂ ಪ್ರತ್ಯುಪಕಾರವನ್ನು ಬಯಸದೆ ಅವರ ಹೃದಯದಲ್ಲಿಯೇ ಇರುವವನಾಗಿ ಸರ್ವರ ಸರ್ವಕರ್ಮಫಲಗಳಿಗೂ ಅಧ್ಯಕ್ಷನೂ ಸರ್ವಪ್ರತ್ಯಯಗಳಿಗೂ ಸಾಕ್ಷಿಯಾಗಿರುವವನೂ ಆದ ನಾರಾಯಣನು ನಾನೇ– ಎಂದು ತಿಳಿದುಕೊಂಡವನಿಗೆ ಪರಮಶಾಂತಿರೂಪವಾದ ಮೋಕ್ಷವು ದೊರಕುವದು– ಎಂದು ಭಗವಂತನು ಸಾರಿ ಹೇಳಿರುತ್ತಾನೆ.

ಇನ್ನೊಂದು ಕಡೆಯಲ್ಲಿ ತನ್ನ ವಿಭೂತಿಯನ್ನು ತಿಳಿಯಪಡಿಸುವ ಸಂದರ್ಭದಲ್ಲಿ ಆ ಭಗವಂತನು :

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥**

ಗೀ. ೯–೧೮

ಎಂದಿರುತ್ತಾನೆ. ಕರ್ಮದ ಫಲವು ನಾನೇ, ಎಲ್ಲವನ್ನೂ ಪೋಷಿಸುವಾತನು ನಾನೇ, ಎಲ್ಲರಿಗೂ ಪ್ರಭುವಾಗಿರುವಾತನು ನಾನೇ, ಪ್ರಾಣಿಗಳು ಮಾಡುವವನ್ನು ಮಾಡದೆ ಇರುವದನ್ನೂ ನೋಡುತ್ತಿರುವ ಸಾಕ್ಷಿ ನಾನೇ, ಸಕಲಪ್ರಾಣಿಗಳಿಗೂ ನಿವಾಸಸ್ಥಾನವು ನಾನೇ, ಶರಣುಬಂದ ಆರ್ತರ ಸಂಕಟವನ್ನು ಪರಿಹರಿಸುವಾತನು ನಾನೇ, ಪ್ರತ್ಯುಪಕಾರವನ್ನು ಬಯಸದೆ ಉಪಕಾರಮಾಡುವಾತನು ನಾನೇ–ಎಂದಿರುತ್ತಾನೆ. ಎಲ್ಲರೂ ನನ್ನಲ್ಲಿಯೇ ಸ್ಥಿತಿಯನ್ನು ಪಡೆದಿರುತ್ತಾರೆ, ಈಗ ಕರ್ಮವನ್ನು ಮಾಡಿ ಕಾಲಾಂತರದಲ್ಲಿ ಭೋಗಿಸುವ ನಿಕ್ಷೇಪರೂಪವಾಗಿರುವ ಫಲವು ನಾನೇ, ಹುಟ್ಟುವ ಸ್ವಭಾವದ ಸತ್ತ್ವಗಳಿಗೆಲ್ಲ ಬೀಜರೂಪನಾಗಿರುವವನೂ ನಾನೇ–ಎಂದಿರುತ್ತಾನೆ. ಇಲ್ಲಿಯೂ ಭಗವಂತನ ಸರ್ವಸಾಕ್ಷಿತ್ವವೂ ಸರ್ವಭಾವತ್ವವೂ ಪ್ರಕಟವಾಗಿರುತ್ತದೆ.

'ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ' ಎಂಬ (೧೩–೨೨) ಶ್ಲೋಕದ ಅರ್ಥವನ್ನು ಆಗಲೆ ಹೇಳಿರುತ್ತೇನೆ. ಅಲ್ಲಿ ಹೇಳಿರುವ ಉಪದ್ರಷ್ಟೃವೂ ಈ ಸಾಕ್ಷಿಯೇ.

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ॥ ಗೀ. ೧೩–೧೬

ಪ್ರಾಣಿಗಳಲ್ಲೆಲ್ಲ ವಿಭಕ್ತವಾಗಿ ಬೇರೆಬೇರೆಯಿರುವಂತೆ ತೋರುತ್ತಿದ್ದರೂ ಅವಿಭಕ್ತವಾಗಿ ಒಂದೇ ಆಗಿರುತ್ತದೆ. ಎಂದು ಹೇಳಿರುವ ಜ್ಞೇಯತತ್ತ್ವವೂ ಈ ಸಾಕ್ಷಿಯೇ ಅಜ್ಞಾನಿಗಳು 'ನಾನು' ಎಂದು ಭಾವಿಸಿಕೊಂಡಿರುವ ಆತ್ಮನು, ಆತ್ಮಾಭಾಸ–

ಅವನು ನಿಜವಾದ ಆತ್ಮನಲ್ಲ; ಎಲ್ಲಾ ಜೀವರೊಳಗೂ ಇದ್ದುಕೊಂಡಿರುವ ಕೂಟಸ್ಥಚೈತನ್ಯಸ್ವರೂಪನಾದ ಸಾಕ್ಷಿಯೇ ನಿಜವಾದ ಆತ್ಮನು-ಎಂದು ತಿಳಿದವರೇ ಕೃತಕೃತ್ಯರು. ಅವರು ಬ್ರಹ್ಮವನ್ನು ನಿಶ್ಚಿತವಾಗಿ ಅರಿತುಕೊಂಡಿರುತ್ತಾರೆ. ಇವನ್ನೇ ಸಾಕ್ಷಿಯೆಂದು ಶ್ರುತಿಸ್ಮೃತಿಗಳಲ್ಲಿ ಕರೆದಿರುತ್ತದೆ. ಇವನೇ ಪರಮಾರ್ಥನಾದ ಆತ್ಮನು

# ೪೯. ಸಾಂಖ್ಯದರ್ಶನದ ಸಾರ

(21—9—69)

ಸಾಂಖ್ಯದರ್ಶನವು ವೇದಾಂತಕ್ಕೆ ತೀರ ಹತ್ತಿರವಾಗಿರುತ್ತದೆ. ಆ ದರ್ಶನದ ಪ್ರಕ್ರಿಯೆಯನ್ನು ಭಗವದ್ಗೀತೆಯೇ ಮುಂತಾದ ಸ್ಮೃತಿಗಳಲ್ಲಿಯೂ ಹೇರಳವಾಗಿ ಬಳಸಿಕೊಂಡಿರುತ್ತಾರೆ. ಆದ್ದರಿಂದ ಸಾಂಖ್ಯಕ್ಕೂ ವೇದಾಂತಕ್ಕೂ ಇರುವ ವೈಲಕ್ಷಣ್ಯವನ್ನು ವಿವೇಚನೆಮಾಡುವದು ಆವಶ್ಯಕ.

ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।
ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥

ಜ್ಞಾನ, ಮಾಡುವ ಕರ್ಮ, ಕರ್ತೃ- ಈ ಮೂರೂ ಸಾತ್ತ್ವಿಕರಾಜಸತಾಮಸ ಎಂದು ಮೂರುಮೂರು ವಿಧವಾಗಿರುತ್ತವೆ ಎಂದು ಗುಣಸಂಖ್ಯಾನದಲ್ಲಿ ಹೇಳಿರುತ್ತದೆ. ಅವುಗಳ ವಿವರವನ್ನು ಕೇಳು-ಎಂದು ಭಗವಂತನು ಹೇಳಿರುವ ವಾಕ್ಯದಲ್ಲಿ 'ಗುಣಸಂಖ್ಯಾನ'ವೆಂಬ ಶಬ್ದದ ವ್ಯಾಖ್ಯಾನವನ್ನು ಭಾಷ್ಯಕಾರರು ಹೀಗೆ ಮಾಡಿರುತ್ತಾರೆ :

ಗುಣಸಂಖ್ಯಾನೇ, ಕಾಪಿಲೇ ಶಾಸ್ತ್ರೇ । ತದಪಿ ಗುಣಸಂಖ್ಯಾನಂ ಶಾಸ್ತ್ರಂ ಗುಣಭೋಕ್ತೃವಿಷಯೇ ಪ್ರಮಾಣಮೇವ ; ಪರಮಾರ್ಥಬ್ರಹ್ಮೈಕತ್ವವಿಷಯೇ ವಿರುಧ್ಯತೇ ಯದ್ಯಪಿ, ತಥಾಪಿ । ತೇ ಹಿ ಕಾಪಿಲಾ ಗುಣಗೌಣವ್ಯಾಪಾರನಿರೂಪಣೇ ಅಭಿಯುಕ್ತಾಃ-ಇತಿ ತಚ್ಛಾಸ್ತ್ರಮಪಿ ವಕ್ಷ್ಯಮಾಣಾರ್ಥಸ್ತುತ್ಯರ್ಥತ್ವೇನ ಉಪಾದೀಯತ ಇತಿ ನ ವಿರೋಧಃ ॥

"ಇಲ್ಲಿ ಗುಣಸಂಖ್ಯಾನದಲ್ಲಿ ಎಂದರೆ ಕಾಪಿಲಶಾಸ್ತ್ರದಲ್ಲಿ ಎಂದರ್ಥ. ಆ ಗುಣಸಂಖ್ಯಾನಶಾಸ್ತ್ರವೂ ಗುಣಗಳ;ಮತ್ತು ಭೋಕ್ತೃಗಳ ವಿಷಯಕ್ಕೆ ಪ್ರಮಾಣವೇ. ಪರಮಾರ್ಥವಾದ ಬ್ರಹ್ಮೈಕತ್ವದ ವಿಷಯದಲ್ಲಿ ಮಾತ್ರ ವಿರುದ್ಧವಾಗಿರುತ್ತದೆ. ಆ ಕಪಿಲಾನುಯಾಯಿಗಳು ಗುಣಗಳ ಮತ್ತು ಗುಣಗಳ ವಿಕಾರಗಳ ನಿರೂಪಣೆಯ

ವಿಷಯಕ್ಕೆ ಅಭಿಯುಕ್ತರೇ ಆಗಿರುತ್ತಾರಾದ್ದರಿಂದ ಅವರ ಶಾಸ್ತ್ರವನ್ನು ಮುಂದೆ ಹೇಳುವ ವಿಷಯವನ್ನು ಹೊಗಳುವದಕ್ಕಾಗಿ ಅಂಗೀಕರಿಸಿದೆಯಾದ್ದರಿಂದ ಯಾವ ವಿರೋಧವೂ ಇಲ್ಲ"–ಎಂದು ಭಾಷ್ಯವಾಕ್ಯದ ಅಭಿಪ್ರಾಯ. ಭಗವದ್ಗೀತೆಯಲ್ಲಿ ಸತ್ತ್ವರಜಸ್ತಮೋಗುಣಗಳ ಸ್ವರೂಪ, ಕಾರ್ಯ, ಅವುಗಳಿಂದ ಮುಕ್ತನಾಗುವ ಬಗೆ– ಇವನ್ನೇ ಮುಖ್ಯವಾಗಿ ವಿಸ್ತಾರವಾಗಿ ನಿರೂಪಿಸಿರುತ್ತದೆ.

> ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
> ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥
>
> ಗೀ. ೧೩–೨೦

ಈ ಶ್ಲೋಕವನ್ನು ಹಿಂದೆ ಪ್ರಕೃತಿಪುರುಷವಿವೇಕದ ನಿರೂಪಣೆಯ ಸಂದರ್ಭದಲ್ಲಿ ಉದಾಹರಿಸಿ ಅರ್ಥವಿವರಣೆಯನ್ನು ಮಾಡಿದ್ದಾಗಿದೆ. ವ್ಯವಹಾರದೃಷ್ಟಿಯಿಂದ ನೋಡುವಾಗ ಶರೀರೇಂದ್ರಿಯರೂಪವಾಗಿ ಪ್ರಕೃತಿಯು ಪರಿಣಮಿಸುತ್ತದೆ; ಪುರುಷನು ಅವಿವೇಕದಿಂದ ಈ ಗುಣಗಳಲ್ಲಿ ಸಕ್ತನಾಗಿ ಸುಖದುಃಖಮೋಹಗಳನ್ನು ಅನುಭವಿಸುತ್ತಾನೆ. ಈ ವಿಷಯವು ಸಾಂಖ್ಯರಿಗೂ ವೇದಾಂತಕ್ಕೂ ಸಮಾನವಾಗಿರುತ್ತದೆ.

> ಮಹಾಭೂತಾನ್ಯಹಙ್ಕಾರೋ ಬುದ್ಧಿರವ್ಯಕ್ತಮೇವ ಚ ।
> ಇನ್ದ್ರಿಯಾಣಿ ದಶೈಕಂ ಚ ಪಞ್ಚ ಚೇನ್ದ್ರಿಯಗೋಚರಾಃ ॥
>
> ಗೀ. ೧೩–೫

ಈ ಶ್ಲೋಕವು ಕ್ಷೇತ್ರದಸ್ವರೂಪವಿವೇಚನೆಯ ಸಂದರ್ಭದಲ್ಲಿ ಉದಾಹೃತವಾದದ್ದು. ಐದು ಸೂಕ್ಷ್ಮಭೂತಗಳು, ಅಹಂಕಾರವೆಂಬುದು ಈ ಭೂತಗಳಿಗೆ ಕಾರಣವಾಗಿರುವ ತತ್ತ್ವವು, ಬುದ್ಧಿ ಎಂದರೆ ಅಹಂಕಾರಕ್ಕೆ ಕಾರಣವಾಗಿರುವ ನಿಶ್ಚಯಾತ್ಮಕತತ್ತ್ವವು, ಅವ್ಯಕ್ತವೆಂದರೆ ಆ ಬುದ್ಧಿಗೂ ಕಾರಣವಾದ ತತ್ತ್ವವು, ಇಂದ್ರಿಯಗಳು ಹತ್ತು ಎಂದರೆ ಜ್ಞಾನೇಂದ್ರಿಯ, ಕರ್ಮೇಂದ್ರಿಯ– ಎಂದು ಎರಡುಬಗೆಯವಾಗಿರುವ ಶ್ರೋತ್ರಾದಿಗಳು ಮತ್ತು ವಾಗಾದಿಗಳು, ಮತ್ತೊಂದು ಎಂದರೆ ಮನಸ್ಸು, ಇಂದ್ರಿಯಗೋಚರಗಳು ಎಂದರೆ ಶಬ್ದಸ್ಪರ್ಶರೂಪರಸಗಂಧಗಳು, ಈ ಇಪ್ಪತ್ತುನಾಲ್ಕನ್ನು–ತತ್ತ್ವಗಳೆಂದು ಸಾಂಖ್ಯರು ಒಪ್ಪಿರುತ್ತಾರೆ. ಪುರುಷನೇ, ಇಪ್ಪತ್ತೈದನೆಯವನು.

ಪುರುಷರು ಅನೇಕರೆಂದು ಸಾಂಖ್ಯರ ಮತ; ಆದರೆ ವೇದಾಂತದಲ್ಲಿ ಜೀವರು ಅನೇಕರೆಂಬುದು ವ್ಯವಹಾರದೃಷ್ಟಿಯಿಂದ ನಿಜವಾದರೂ ಪುರುಷರ ಪರಮಾರ್ಥತತ್ತ್ವವಾದ ಪರಮಪುರುಷನು ಒಬ್ಬನೇ. 'ಪರಮಾತ್ಮೇತಿ ಚಾಪ್ಯುಕ್ತೋ

ದೇಹೇಽಸ್ಮಿನ್ ಪುರುಷಃ ಪರಃ' (೧೩-೨೨), ಕ್ಷೇತ್ರ (ದೇಹ)ಗಳಲ್ಲೆಲ್ಲ ಇರುವ ಕ್ಷೇತ್ರಜ್ಞನು-ಸಾಕ್ಷಿಯಾದ ಆತ್ಮನು-ಭಗವಂತನೇ ಎಂದು 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ'(ಗೀ. ೧೩-೨) ಎಂಬ ಶ್ಲೋಕದಲ್ಲಿಯೂ ಹೇಳಿದೆ.

ಪುರುಷನಿಗೆ ಅವಿವೇಕದಿಂದ ಬಂಧ, ವಿವೇಕದಿಂದ ಮೋಕ್ಷ-ಎಂಬ ವಿಷಯ ದಲ್ಲಿ ಸಾಂಖ್ಯಕ್ಕೂ ವೇದಾಂತಕ್ಕೂ ಭೇದವಿಲ್ಲ; ಆದರೆ ಪ್ರಕೃತಿಪುರುಷರ ವಿವೇಕ ವನ್ನು ಮಾಡಿಕೊಂಡಾಗ ಪ್ರಕೃತಿಯು ಅವಿದ್ಯಾಲಕ್ಷಣ (ಅವಿದ್ಯೆಯಿಂದ ಕಲ್ಪಿತ ವಾದದ್ದು, ಪರಮಾರ್ಥವಾಗಿ ಪುರುಷನು ಪರಮಾತ್ಮನೇ, ಅವನು ಒಬ್ಬನೇ ಸತ್ಯ-ಎಂಬುದು ವೇದಾಂತದ ಸಾರ. ಇದಿಷ್ಟನ್ನು ನೆನಪಿನಲ್ಲಿಟ್ಟದ್ದರೆ ಸಾಂಖ್ಯರ ಪ್ರಕ್ರಿಯೆಯನ್ನು ವೇದಾಂತದಲ್ಲಿಯೂ ಬಳಸುವದರಿಂದ ಯಾವ ಹಾನಿಯೂ ಆಗುವದಿಲ್ಲ.

## ೫೦. ಯೋಗಶಾಸ್ತ್ರವೂ ವೇದಾಂತವೂ

(22—9—69)

ಮಿಕ್ಕ ದರ್ಶನಗಳಿಗೂ ವೇದಾಂತಕ್ಕೂ ಇರುವ ಒಂದು ವೈಲಕ್ಷಣ್ಯವೇನೆಂದರೆ ವೇದಾಂತದಲ್ಲಿ ಸಾರ್ವತ್ರಿಕಾನುಭವಕ್ಕೆ ಮುಖ್ಯವಾದ ಸ್ಥಾನವನ್ನು ಕಲ್ಪಿಸಿರುತ್ತದೆ. ಸಾರ್ವತ್ರಿಕ ಎಂದರೆ ಎಲ್ಲಾ ದೇಶಕಾಲಗಳಲ್ಲಿಯೂ ಎಲ್ಲರಿಗೂ ಸಮಾನವಾಗಿರುವ ಅನುಭವ. ಉಳಿದ ದರ್ಶನಗಳಲ್ಲಿ ಜಾಗ್ರದವಸ್ಥೆಗೇ ಹೆಚ್ಚಿನ ಸ್ಥಾನವನ್ನು ಕೊಟ್ಟು ವೈಯಕ್ತಿಕವಾದ ಅನುಭವವನ್ನೇ ಅನುಭವವೆಂದು ಒಪ್ಪಿರುತ್ತಾರೆ. ವೇದಾಂತದಲ್ಲಿ ನಾವುಗಳೆಲ್ಲರೂ ಅಸಂಸಾರಿಯಾದ ಪರಮಾತ್ಮಸ್ವರೂಪರೇ ಎಂಬುದನ್ನು ನೆನಪಿಗೆ ತಂದುಕೊಟ್ಟಕೂಡಲೆ ಇದು ಈಗಲೆ ಇಲ್ಲಿಯೇ ಎಲ್ಲರಿಗೂ ಅನುಭವಕ್ಕೆ ಹತ್ತುವ ಹಾಗಿರುತ್ತದೆ. ಕೊರಳಲ್ಲಿರುವ ಹಾರವನ್ನು ಮರೆತು ಅತ್ತಿತ್ತ ಹುಡುಕುತ್ತಿರು ವವನಿಗೆ 'ನಿನ್ನ ಕೊರಳಲ್ಲಿಯೇ ಹಾರವಿದೆ'- ಎಂದು ಜ್ಞಾಪಿಸಿದರೆ ಮತ್ತೆ ಯಾವ ಕಾರ್ಯವನ್ನೂ ಬಯಸದೆ ಕೂಡಲೆ ಹೇಗೆ 'ಹಾರವು ಇಲ್ಲಿಯೇ ಇದೆ' ಎಂದು ಅನುಭವಕ್ಕೆ ಬರುವದೋ ಹಾಗೆಯೇ ಇದು.

**ತತ್ಕಾರಣಂ ಸಾಂಖ್ಯಯೋಗಾಭಿಪನ್ನಂ ।**
**ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥** ಶ್ವೇ. ೬-೧೩

(ಸಾಂಖ್ಯಯೋಗಗಳಿಂದ ದೊರಕುವ ಆ ಜಗತ್ಕಾರಣವನ್ನು ಅರಿತುಕೊಂಡರೆ ಸರ್ವಪಾಶಗಳಿಂದಲೂ ಮುಕ್ತನಾಗುವನು) ಎಂದು ಉಪನಿಷತ್ತಿನಲ್ಲಿ ಹೇಳಿರುವದರಿಂದ ಸಾಂಖ್ಯಯೋಗದರ್ಶನಗಳ ಜ್ಞಾನವು ಮುಕ್ತಿಗೆ ಅತ್ಯವಶ್ಯ- ಎಂದು ಅನೇಕರು ಭಾವಿಸಿರುತ್ತಾರೆ. ಆದರೆ ಶಂಕರಾಚಾರ್ಯರವರು ಈ ವಿಷಯಕ್ಕೆ ಬರೆದಿರುವದೇನೆಂದರೆ :

'ಯತ್ತು ದರ್ಶನಮುಕ್ತಂ 'ತತ್ಕಾರಣಂ ಸಾಙ್ಖ್ಯಯೋಗಾಭಿಪನ್ನಮ್' ಇತಿ ವೈದಿಕಮೇವ ತತ್ರ ಜ್ಞಾನಂ ಧ್ಯಾನಂ ಚ ಸಾಙ್ಖ್ಯಯೋಗಶಬ್ದಾಭ್ಯಾಮ್ ಅಭಿಲಪ್ಯತೇ ಪ್ರತ್ಯಾಸತ್ತೇರಿತ್ಯವಗನ್ತವ್ಯಮ್ । ಯೇನ ತ್ವಂಶೇನ ನ ವಿರುಧ್ಯೇತೇ ತೇನ ಇಷ್ಟಮೇವ ಸಾಙ್ಖ್ಯಯೋಗಸ್ಮೃತ್ಯೋಃ ಸಾವಕಾಶತ್ವಮ್ ॥' ಸೂ. ಭಾ. ೨.೧.೩

ಶ್ರುತಿಯಲ್ಲಿ ಸಾಂಖ್ಯಯೋಗಗಳಿಂದ ತಿಳಿಯಬರುವ ಜಗತ್ಕಾರಣ—ಎಂಬಲ್ಲಿ ಹೇಳಿರುವವು ವೈದಿಕಜ್ಞಾನ, ಮತ್ತು ವೈದಿಕಧ್ಯಾನ—ಇವೇ ಆಗಿರುತ್ತವೆ ; ಏಕೆಂದರೆ ಶ್ರುತಿಯಲ್ಲಿ ಹೇಳಿರುವದು ವೈದಿಕಸಾಧನವೇ ಎಂಬುದು ಯುಕ್ತವಾಗಿರುತ್ತದೆ. ಆದರೆ ಯಾವ ಅಂಶದಲ್ಲಿ ಈ ದರ್ಶನಗಳು ವೇದಕ್ಕೆ ವಿರುದ್ಧವಾಗಿಲ್ಲವೋ ಆ ಅಂಶದಲ್ಲಿ ಇಲ್ಲಿಯೂ ಆ ದರ್ಶನಗಳಿಗೆ ಅವಕಾಶವಿದೆಯೆಂದು ನಾವೂ ಒಪ್ಪುತ್ತೇವೆ—ಎಂಬುದು ಆಚಾರ್ಯರ ಅಭಿಪ್ರಾಯ.

ಯೋಗದರ್ಶನದಲ್ಲಿ ಹೇಳಿರುವದಿಷ್ಟು : ಚಿತ್ತದ ಸಂಪರ್ಕವೇ ಸರ್ವದುಃಖಕ್ಕೂ ಕಾರಣ. ಚಿತ್ತದಲ್ಲಿ ಏಳುತ್ತಿರುವ ವೃತ್ತಿಗಳನ್ನೆಲ್ಲ ನಿರೋಧಮಾಡಿಕೊಂಡು ಏಕಾಗ್ರವೃತ್ತಿಯನ್ನು ಸಂಪಾದಿಸಿಕೊಂಡರೆ ಚಿತ್ತವೂ ಪುರುಷನೂ ಬೇರೆಯಾಗುವರು. ಇದೇ ಸಮಾಧಿಸ್ಥಿತಿ. ವೇದಾನ್ತದ ಪ್ರಕಾರ ಚಿತ್ತದಿಂದ ಸಾಧಕನು ಮುಕ್ತನಾಗಬೇಕಾದರೂ ಒಂದೇಸಮನೆ ಧ್ಯಾನವನ್ನು ಮಾಡುತ್ತಿದ್ದರೆ ಆತ್ಮನಲ್ಲಿಯೇ ಮನಸ್ಸು ಲಯವಾಗಿಬಿಡುತ್ತದೆ. ಆಗ ಪರಮಾತ್ಮನಲ್ಲಿಯೇ ಸಾಧಕನು ಒಂದಾಗಿಬಿಡುತ್ತಾನೆ. ಸಾಂಖ್ಯರೂ ಯೋಗಿಗಳೂ ಹೇಳುವಂತೆ ಪುರುಷರು ಅನೇಕರಿರುವದಿಲ್ಲ. ಎಲ್ಲಾ ಪುರುಷರಿಗೂ ಆಧಾರನಾಗಿ ಒಬ್ಬನೇ ಪರಮಪುರುಷನಿರುತ್ತಾನೆ. ಆ ಪುರುಷನನ್ನು ಕಂಡುಕೊಳ್ಳುವದೇ ಧ್ಯಾನಯೋಗದ ಫಲ.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ಗೀ. ೬-೨೯

ಎಂದಂತೆ ಒಬ್ಬನೇ ಆತ್ಮನು ಎಲ್ಲಾ ಪ್ರಾಣಿಗಳಿಗೂ ಸಮಾನವಾಗಿರುತ್ತಾನೆ ; ಆ ಪ್ರಾಣಿಗಳೆಲ್ಲವೂ ಆ ಪರಮಾತ್ಮನಲ್ಲಿಯೇ ಇರುತ್ತವೆ- ಎಂಬ ಜ್ಞಾನವೇ ಧ್ಯಾನಯೋಗದ ಫಲ.

ಯೋಗದಲ್ಲಿ ಹೇಳಿರುವ ಯಮನಿಯಮಗಳು ವೇದಾಂತಕ್ಕೂ ಒಪ್ಪು. 'ಅಮಾನಿತ್ವಮದಮ್ಭಿತ್ವಮ್' ಎಂದು ಹೇಳಿರುವ ಜ್ಞಾನಸಾಧನಗಳಲ್ಲಿ ಅಷ್ಟ

ಗಳನ್ನೇ ವಿಸ್ತರಿಸಿ ಹೇಳುತ್ತದೆ. ಆತ್ಮನು ಅಸಂಗನು; ವಿರಕ್ತನಾದವನಿಗೆ ಆತ್ಮ ದರ್ಶನವಾಗುತ್ತದೆ ಎಂಬುದು ಸಾಂಖ್ಯಯೋಗಗಳಿಗೂ ವೇದಾಂತಕ್ಕೂ ಸಮಾನ. ಪ್ರಕೃತಿಯು ಸತ್ಯ, ಪುರುಷರು ಅನೇಕರು- ಎಂಬ ವಿರುದ್ಧಾಂಶವನ್ನು ಬಿಟ್ಟರೆ ಸಾಂಖ್ಯವು ವೈದಿಕಸಾಂಖ್ಯವೇ ಆಗುವದು, ಚಿತ್ತವು ಸಮಾಧಿಯಲ್ಲಿ ಪುರುಷನಿಗಿಂತ ಬೇರೆಯಾಗಿರುತ್ತದೆ, ಪರಮೇಶ್ವರನೂ ಬೇರೆಯಾಗಿ ಇರುತ್ತಾನೆ- ಎಂಬಂಶವನ್ನು ಕೈಬಿಟ್ಟರೆ ಯೋಗಪ್ರಕ್ರಿಯೆಯು ವೈದಿಕಧ್ಯಾನಕ್ಕೆ ಒಪ್ಪಾಗುವದು. ವೈದಿಕ ಯೋಗವೂ ಸಾಂಖ್ಯವೂ ಒಂದು ವಿಷಯದಲ್ಲಿ ಕೊನೆಗೆ ಒಂದೇ ಹೆಗ್ಗುರಿಯುಳ್ಳ ವಾಗಿರುತ್ತವೆ. ಸರ್ವರ ಆತ್ಮನಾದ ಪರಮಾತ್ಮನಲ್ಲಿ ತಾನೂ ಒಂದಾಗುವ ಜ್ಞಾನವೇ ಅವಕ್ಕೆ ಗುರಿ. ಯೋಗವು ಸಾಂಖ್ಯದ ಜ್ಞಾನವನ್ನು ಹುಟ್ಟಿಸುವದಕ್ಕೆ ಸಾಧನ. 'ಏಕಂ ಸಾಙ್ಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ' (ಗೀ- ೫-೫) ಎಂಬ ಭಗವಂತನ ಉಕ್ತಿಗೆ ಇದೇ ಅಭಿಪ್ರಾಯ.

## ೫೧. ನ್ಯಾಯವೈಶೇಷಿಕದರ್ಶನಗಳು

(23—9—69)

ಸಾಂಖ್ಯಯೋಗದರ್ಶನಗಳು ಬಲುಮಟ್ಟಿಗೆ ಸಮಾನವಾದ ಉಪದೇಶಗಳನ್ನು ಮಾಡುತ್ತವೆ. ಸಾಂಖ್ಯರು ಪ್ರಕೃತಿಪುರುಷರ ವಿವೇಕದಿಂದ ಮುಕ್ತರಾಗುವ ಮಾರ್ಗವನ್ನು ಉಪದೇಶಿಸಿರುತ್ತಾರೆ; ಯೋಗಿಗಳೂ ಪ್ರಕೃತಿಪುರುಷರ ವಿವೇಕವನ್ನು ಮಾಡಿಕೊಳ್ಳುವ ಬಗೆಯನ್ನೇ ಉಪದೇಶಿಸುತ್ತಿರುತ್ತಾರೆ, ಸಾಂಖ್ಯರು ವಿಚಾರ ಕ್ರಮದಿಂದ ಪ್ರಕೃತಿಯನ್ನು ಬಿಡಿಸಿಕೊಳ್ಳುವ ಪ್ರಕ್ರಿಯೆಯನ್ನು ಹೇಳುತ್ತಾರೆ; ಅವರಿಗೆ ಪ್ರತ್ಯಕ್ಷ, ಅನುಮಾನ. ಆಪ್ತವಾಕ್ಯ- ಎಂಬ ಪ್ರಮಾಣಗಳು ಆಧಾರ ವಾಗಿವೆ. ಅವುಗಳಲ್ಲಿ ಅನುಮಾನಕ್ಕೇ ಹೆಚ್ಚಿನ ಸ್ಥಾನವನ್ನು ಅವರು ಕೊಟ್ಟಿರು ತ್ತಾರೆ. ಯೋಗಿಗಳು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ- ಎಂಬ ಎಂಟು ಅಂಗಗಳಿಂದ ಚಿತ್ತವೃತ್ತಿ ನಿರೋಧವನ್ನು ಮಾಡಿಕೊಂಡು ಪ್ರಕೃತಿಯಿಂದ ಪುರುಷನನ್ನು ಬಿಡಿಸಿಕೊಳ್ಳುವ ಸಾಧನವನ್ನು ಉಪದೇಶಿಸುತ್ತಾರೆ. ಸಾಂಖ್ಯರು ಈಶ್ವರನನ್ನು ಒಪ್ಪಿಲ್ಲ; ಯೋಗಿ ಗಳು ಈಶ್ವರನನ್ನು ಒಪ್ಪಿರುತ್ತಾರೆ. ಹೀಗೆ ಸಾಮ್ಯವೈಷಮ್ಯಗಳಿದ್ದರೂ ಪ್ರಕೃತಿ ಸತ್ಯತ್ವ, ಪುರುಷಬಹುತ್ವ- ಇವೆರಡೂ ಈ ಸಿದ್ಧಾಂತಗಳೆರಡಕ್ಕೂ ಒಪ್ಪಾಗಿವೆ. ಬ್ರಹ್ಮಾತ್ಮೈಕತ್ವಸಿದ್ಧಾಂತಕ್ಕೆ ಮಾತ್ರ ಎರಡೂ ವಿರುದ್ಧ. ಇಷ್ಟನ್ನು ಈವರೆಗೆ

ತಿಳಿಸಿಕೊಟ್ಟದ್ದಾಗಿದೆ. ಈಗ ನ್ಯಾಯ, ವೈಶೇಷಿಕ– ಎಂಬ ಪರಸ್ಪರಸಮಾನ ವಿಷಯಪ್ರಕ್ರಿಯೆಗಳುಳ್ಳ ಇನ್ನೆರಡು ದರ್ಶನಗಳ ವಿಚಾರಕ್ಕೆ ತೊಡಗಬಹುದಾಗಿದೆ.

ನ್ಯಾಯದರ್ಶನಕ್ಕೆ ಗೌತಮರೇ ಪ್ರವರ್ತಕರು. ಗೌತಮಸೂತ್ರಕ್ಕೆ ವಾತ್ಸ್ಯಾಯನರ ಭಾಷ್ಯವಿದೆ. ಆ ಭಾಷ್ಯಕಾರರು ಸೂತ್ರಕ್ಕೆ ಭಾಷ್ಯವನ್ನು ಪ್ರಾರಂಭಿಸುವಾಗ **'ನಮಃ ಪ್ರಮಾಣಾಯ'** (ಪ್ರಮಾಣಕ್ಕೆ ನಮಸ್ಕಾರ) ಎಂದು ಪ್ರಾರಂಭಿಸಿರುತ್ತಾರೆ. ವಿಷ್ಣುಸಹಸ್ರನಾಮದಲ್ಲಿ **'ಪ್ರಮಾಣಂ ಪ್ರಾಣನಿಲಯಃ'** ಎಂಬ ಪದವನ್ನು ನೋಡಿದರೆ ಪ್ರಮಾಣವೆಂಬುದು ಪರಮಾತ್ಮನ ನಾಮವೆಂದೂ ಆಗುತ್ತದೆ. ಈ ಅಭಿಪ್ರಾಯದಿಂದ ಭಾಷ್ಯಕಾರರು ಹೀಗೆ ಮಂಗಲವಾಕ್ಯವನ್ನು ಬರೆದಿರಬಹುದು.

ಇತರ ಮತಗಳನ್ನು ಸೂತ್ರಭಾಷ್ಯದಲ್ಲಿ ಖಂಡಿಸಿದ್ದರೂ ನ್ಯಾಯದರ್ಶನವನ್ನು ನೇರಾಗಿ ಖಂಡಿಸಿರುವದು ಕಂಡುಬರುವದಿಲ್ಲ. ಒಂದು ಕಡೆಯಲ್ಲಿ ಶಂಕರಭಗವತ್ಪಾದರವರು ಗೌತಮರ ಸೂತ್ರವನ್ನು ತಮ್ಮ ಅಭಿಪ್ರಾಯಕ್ಕೆ ಸಮ್ಮತಿಯನ್ನು ಕೊಟ್ಟಂತೆ ಹೀಗೆಂದು ಗೌತಮಪ್ರದರ್ಶನವನ್ನುದಾಹರಿಸಿ ಬರೆದಿರುತ್ತಾರೆ : "ಶ್ರುತಯೋ ಮೋಕ್ಷಪ್ರತಿಬನ್ಧನಿವೃತ್ತಿಮಾತ್ರಮೇವ ಆತ್ಮಜ್ಞಾನಸ್ಯ ಫಲಂ ದರ್ಶಯನ್ತಿ । ತಥಾ ಚಾಚಾರ್ಯಪ್ರಣೀತಂ ನ್ಯಾಯೋಪಬೃಂಹಿತಂ ಸೂತ್ರಮ್ 'ದುಃಖಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನನ್ತರಾಪಾಯಾದಪವರ್ಗಃ' ಇತಿ "(ನ್ಯಾ.ಸೂ. ೧–೧–೨) ಜನ್ಮವು ಹೋದರೆ ದುಃಖವು ಹೋಗುವದು, ಜನ್ಮವು ಪ್ರವೃತ್ತಿಯು ಇಲ್ಲವಾದರೆ ತಾನೂ ಉಂಟಾಗದೆ ಇರುತ್ತದೆ. ಪ್ರವೃತ್ತಿಯು ತನಗೆ ಕಾರಣವಾದ ದೋಷವಿಲ್ಲದಿದ್ದರೆ ಇಲ್ಲವಾಗುತ್ತದೆ. ದೋಷವು ತನಗೆ ಕಾರಣವಾದ ಮಿಥ್ಯಾಜ್ಞಾನವು ಹೋದರೆ ತಾನೂ ಹೋಗುವದು. ಹೀಗೆ ಮುಂದೆಮುಂದೆ ಹೇಳಿರುವದು ನಿವೃತ್ತವಾದರೆ ಅದರ ಹಿಂದೆಹಿಂದೆ ಹೇಳಿರುವ ಕಾರ್ಯವು ಇಲ್ಲವಾಗುವದು. ಆದ್ದರಿಂದ ಮಿಥ್ಯಾಜ್ಞಾನವೇ ದುಃಖಕ್ಕೆ ಪರಂಪರೆಯಿಂದ ಕಾರಣವು ; ಮಿಥ್ಯಾಜ್ಞಾನವು ಹೋದರೆ ದುಃಖವು ಹೋಗುವದು–ಎಂಬುದು ನ್ಯಾಯಸೂತ್ರದ ಅರ್ಥ. ಈ ಸೂತ್ರಕ್ಕೆ ಯುಕ್ತಿಯ ಬೆಂಬಲವಿರುವದರಿಂದ ಗೌತಮಾಚಾರ್ಯರು ಹೇಳಿದ್ದು ಸರಿ– ಎಂಬುದು ಶಂಕರಾಚಾರ್ಯರ ಅಭಿಪ್ರಾಯ.

ಆದರೆ ಇಷ್ಟುಮಟ್ಟಿಗೆ ನ್ಯಾಯದರ್ಶನವನ್ನು ಆಚಾರ್ಯರು ಒಪ್ಪಿದ್ದರೂ ಮಿಥ್ಯಾಜ್ಞಾನವೆಂದರೇನು ? ಅದು ಹೇಗೆ ತೊಲಗುವದು ?– ಎಂಬ ವಿಷಯಕ್ಕೆ ಆ ದರ್ಶನದಲ್ಲಿ ಹೇಳಿರುವದನ್ನು ಅವರು ಒಪ್ಪಿರುವದಿಲ್ಲ. ನ್ಯಾಯದರ್ಶನದಲ್ಲಿ ಪ್ರಮಾಣಾದಿಷೋಡಶಪದಾರ್ಥಗಳ ವಿವೇಕದಿಂದ ಮಿಥ್ಯಾಜ್ಞಾನವು ತೊಲಗಿ ಮೋಕ್ಷವು ದೊರೆಯುವದೆಂದು ಒಪ್ಪಿರುತ್ತದೆ; ಮತ್ತು ಮಿಥ್ಯಾಜ್ಞಾನವೆಂದರೆ

ಒಂದನ್ನು ಇನ್ನೊಂದೆಂದು ತಿಳಿಯುವ ತಪ್ಪುತಿಳಿವಳಿಕೆ; ಆತ್ಮನಲ್ಲಿ ಅನಾತ್ಮದ ಧರ್ಮವನ್ನು ತಪ್ಪಾಗಿ ಆರೋಪಿಸಿಕೊಂಡರೆ ಅಷ್ಟುಮಾತ್ರದಿಂದ ಮಿಥ್ಯಾಜ್ಞಾನ ವಾಯಿತು-ಎಂಬುದು ಗೌತಮರ ಮತ. ಆದರೆ ಆಚಾರ್ಯರ ಅಭಿಪ್ರಾಯದಲ್ಲಿ ಪರಮಾರ್ಥಸತ್ಯವಾಗಿರುವ ಆತ್ಮನನ್ನೂ ಹುಸಿತೋರಿಕೆಯಾದ ದೇಹೇಂದ್ರಿಯ ಮನಸ್ಸುಗಳ ರೂಪವಾದ ಅನಾತ್ಮವನ್ನೂ ಒಂದನ್ನೊಂದೆಂದು ಭ್ರಮಿಸುವದು ಮತ್ತು ಒಂದರ ಧರ್ಮವನ್ನು ಮತ್ತೊಂದರಲ್ಲಿ ಹುಟ್ಟುಗಟ್ಟಿಕೊಂಡು ಭ್ರಾಂತ ರಾಗಿರುವದು- ಇದೇ **ಅವಿದ್ಯೆ ಅಥವಾ ಮಿಥ್ಯಾಜ್ಞಾನವು** ; ಈ ಮಿಥ್ಯಾ ಜ್ಞಾನವು ಅದ್ವಿತೀಯನಾದ ಬ್ರಹ್ಮಾತ್ಮನೇ ಸತ್ಯವೆಂಬ ವಿದ್ಯೆಯಿಂದ (ಸಮ್ಯಗ್ಜ್ಞಾನದಿಂದ) ಹೋಗುವದು.

ಇಷ್ಟೂ ಅಲ್ಲದೆ ಪ್ರಮಾಣಪ್ರಮೇಯವ್ಯವಹಾರವು ನ್ಯಾಯದರ್ಶನದಲ್ಲಿ ಸತ್ಯವಾಗಿರುತ್ತದೆ. ಯಾವ ವಸ್ತುವಾಗಲಿ ನಿಜವಾಗಿದೆ ಎಂದೂ ಅದರ ಜ್ಞಾನವು ಸರಿಯಾದ ಜ್ಞಾನವೆಂದೂ ನಿಶ್ಚಯವಾಗುವದಕ್ಕೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ-ಎಂಬ ನಾಲ್ಕು ಪ್ರಮಾಣಗಳು ಬೇಕು- ಎಂಬುದು ನ್ಯಾಯಸಿದ್ಧಾಂತ ; ಆದರೆ ಪ್ರಮಾಣಪ್ರಮೇಯವ್ಯವಹಾರಕ್ಕೆ ಅವಿದ್ಯೆಯೇ ಕಾರಣವೆಂದೂ ಆ ಅವಿದ್ಯೆಯು ವೇದಾಂತಜನ್ಯವಾದ ಆತ್ಮೈಕತ್ವಜ್ಞಾನದಿಂದ ತೊಲಗುವದೆಂದೂ ಅವಿದ್ಯೆಯು ತೊಲಗಿದಮೇಲೆ ಆತ್ಮನೊಬ್ಬನೇ ಸತ್ಯವಾಗಿ ಉಳಿದುಕೊಳ್ಳುವದರಿಂದ ಪ್ರಮಾಣಗಳೆಲ್ಲ ಬಾಧಿತವಾಗಿ ಅಸತ್ಯವಾಗಿಬಿಡುತ್ತವೆ ಎಂಬುದೂ ಆಚಾರ್ಯರಿಗೆ ಒಪ್ಪಾದ ವೇದಾಂತದ ಸಿದ್ಧಾಂತ. ಎಲ್ಲಾ ಲೌಕಿಕ ವೈದಿಕವ್ಯವಹಾರವೂ ತತ್ತ್ವಜ್ಞಾನದಿಂದ ಹೋಗಿಬಿಡುವದೆಂಬುದನ್ನು ಹಿಂದೆ (ಪು. ೨೫೦) **'ವ್ಯವಹಾರವೂ ಪರಮಾರ್ಥವೂ'** ಎಂಬ ವಿಷಯನಿರೂಪಣೆಯ ಪ್ರಸಂಗದಿಂದ ತೋರಿಸಿರುತ್ತೇವೆ.

ಇದಿಷ್ಟೂ ಪ್ರಮಾಣಪಕ್ಷಪಾತಿಗಳಾದ ನ್ಯಾಯದರ್ಶನದವರ ಸಮಾಲೋಚನೆಯಾಯಿತು. ಈಗ ಪ್ರಮೇಯಪಕ್ಷಪಾತಿಗಳಾದ **ವೈಶೇಷಿಕರ ದರ್ಶನ**ದತ್ತ ಮನಸ್ಸನ್ನು ಹೊರಳಿಸೋಣ. ದ್ರವ್ಯ, ಗುಣ, ಕರ್ಮ, ಸಮವಾಯ, ಸಾಮಾನ್ಯ, ವಿಶೇಷ-ಎಂಬ ಆರು ಪದಾರ್ಥಗಳ ತತ್ತ್ವವನ್ನು ನಿರ್ಣಯಿಸುವದೇ ವೈಶೇಷಿಕರ ದರ್ಶನದ ಗುರಿ. ಅವರಿಗೆ ಆತ್ಮನೂ ಒಂದು ದ್ರವ್ಯವಾಗಿರುತ್ತಾನೆ. ಆತ್ಮನಿಗೆ ಇಚ್ಛಾಜ್ಞಾನಾದಿಗಳು ಗುಣಗಳು, ಇದು ಸಂಪೂರ್ಣವಾಗಿಯೂ ವೇದಾಂತಕ್ಕೆ ವಿರುದ್ಧವಾಗಿರುತ್ತದೆ. ಸೂತ್ರಭಾಷ್ಯದಲ್ಲಿ **"ಅಪರಿಗ್ರಹಾಚ್ಚ ಅತ್ಯನ್ತಮನಪೇಕ್ಷಾ"** (೨-೨-೧೭) ಎಂಬ ಸೂತ್ರಕ್ಕೆ ವ್ಯಾಖ್ಯಾನವನ್ನು ಬರೆಯುವಾಗ ಭಾಷ್ಯಕಾರರು :

'ಪ್ರಧಾನಕಾರಣವಾದೋ ವೇದವಿದ್ಭಿರಪಿ "ಕೈಶ್ಚಿನ್ಮನ್ವಾದಿಭಿಃ ಸತ್ಕಾರ್ಯತ್ವಾದ್ಯಂಶೋಪಜೀವನಾಭಿಪ್ರಾಯೇಣೋಪನಿಬದ್ಧಃ । ಅಯಂ ತು ಪರಮಾಣುಕಾರಣವಾದೋ ನ ಕೈಶ್ಚಿದಪಿ ಶಿಷ್ಟೈಃ ಕೇನಚಿದಂಶೇನ ಪರಿಗೃಹೀತ ಇತ್ಯತ್ಯಂತಮೇವಾನಾದರಣೀಯೋ ವೇದವಾದಿಭಿಃ ॥'

"ಪ್ರಧಾನಕಾರಣವಾದವು ಸತ್ಕಾರ್ಯವಾದವೇ ಮುಂತಾದ ಅಂಶದಲ್ಲಿ ಉಪಯುಕ್ತವಾಗಿರುವದರಿಂದ ಮನುವೇ ಮುಂತಾದ ವೇದವಿದರು ಇದನ್ನು ತಮ್ಮ ಗ್ರಂಥದಲ್ಲಿ ಸೇರಿಸಿರುತ್ತಾರೆ. ಆದರೆ ಈ ಅಣುಕಾರಣವಾದವನ್ನು ಶಿಷ್ಟರು ಯಾರೂ ಯಾವದೊಂದಂಶದಲ್ಲಿಯೂ ಸ್ವೀಕರಿಸಿಲ್ಲವಾಗಿ ಇದನ್ನು ವೇದವಾದಿಗಳು ಅತ್ಯಂತವಾಗಿ ಅನಾದರಮಾಡತಕ್ಕದ್ದು" ಎಂದು ಬರೆದಿರುತ್ತಾರೆ. ಗೀತೆಯಲ್ಲಿ ಆತ್ಮನು ಯಾವ ಪ್ರಮಾಣಕ್ಕೂ ವಿಷಯನಲ್ಲವೆಂದು (ಗೀ. ೨-೧೮) ಬರೆದಿರುವದಕ್ಕೆ ಭಾಷ್ಯಕಾರರು 'ಆಗಮವುಕೂಡ ಇಲ್ಲಿ ಅಜ್ಞಾತಜ್ಞಾಪಕವೆಂಬ ಕಾರಣದಿಂದ ಪ್ರಮಾಣವಲ್ಲ; ಪ್ರಮಾತೃತ್ವವೆಂಬ ಆತದ್ಧರ್ಮವನ್ನು ಅಳಿಸಿಹಾಕುವದರಿಂದಲೇ ಅದು ಪ್ರಮಾಣವೆನಿಸಿದೆ; ಆತ್ಮನನ್ನು ತಿಳಿಸಿಕೊಟ್ಟಮೇಲೆ ಅದು ಸ್ವಪ್ನಕಾಲದ ಪ್ರಮಾಣದಂತೆ ಅಪ್ರಮಾಣವಾಗಿಬಿಡುತ್ತದೆ' (ಗೀ. ಭಾ. ೨-೧೮, [illegible]) ಎಂದೂ ಬರೆದಿರುತ್ತಾರೆ.

ಹೀಗೆ ನೋಡಿದರೆ ಆತ್ಮನು ಪ್ರಮೇಯವೂ ಅಲ್ಲ, ಪ್ರಮಾತೃವೂ ಅಲ್ಲ; ಅವನು ಸ್ವಯಂಸಿದ್ಧನಾಗಿ ಅನುಭವರೂಪನಾಗಿರುವದರಿಂದ ಯಾವ ರೀತಿಯಿಂದಲೂ ಇಲ್ಲಿ ನ್ಯಾಯದರ್ಶನದ ಅಥವಾ ವೈಶೇಷಿಕದರ್ಶನದ ಸಹಾಯವೂ ಬೇಕಿರುವದಿಲ್ಲ– ಎಂದು ಸ್ಪಷ್ಟವಾಗುತ್ತದೆ.

ಇದೂ ಅಲ್ಲದೆ–

ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।
ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ಗೀ. ೧೩–೬

ಎಂಬ ಶ್ಲೋಕದ ಭಾಷ್ಯದಲ್ಲಿ ಆಚಾರ್ಯರು,

'ಅಥೇದಾನೀಂ ಆತ್ಮಗುಣಾ ಇತಿ ಯಾನಾಚಕ್ಷತೇ ವೈಶೇಷಿಕಾಸ್ತೇಽಪಿ ಕ್ಷೇತ್ರಧರ್ಮಾ ಏವ, ನ ತು ಕ್ಷೇತ್ರಜ್ಞಸ್ಯ–ಇತ್ಯಾಹ ಭಗವಾನ್ ॥'

(ವೈಶೇಷಿಕರು ಆತ್ಮನ ಗುಣಗಳೆಂದು ಹೇಳುತ್ತಿರುವರಲ್ಲ, ಆ ಇಚ್ಛಾದಿಗಳೂ ಕ್ಷೇತ್ರಕ್ಕೇ ಸೇರಿದವುಗಳು, ಆತ್ಮಧರ್ಮವಲ್ಲ–ಎಂದು ಭಗವಂತನು ಹೇಳಿರುತ್ತಾನೆ) ಎಂದು ಬರೆದಿರುತ್ತಾರೆ.

ಈ ಕಾರಣದಿಂದಲೇ ಆತ್ಮನು ದ್ರವ್ಯಗುಣಾದಿವಿಶೇಷಗಳಿಲ್ಲದವನಾದ್ದರಿಂದ ಅವನು ಸತ್ತೂ ಅಲ್ಲ, ಅಸತ್ತೂ ಅಲ್ಲ– ಎಂದು ಗೀತೆಯ ಹದಿಮೂರನೆಯ

ಅಧ್ಯಾಯ ೧೨ನೆಯ ಶ್ಲೋಕದ ಭಾಷ್ಯದಲ್ಲಿ ಆಚಾರ್ಯರು ಸ್ಪಷ್ಟವಾಗಿ ಬರೆದಿದ್ದಾರೆ.

ಪ್ರಮಾಣಪ್ರಮೇಯಗಳ ವ್ಯವಹಾರವು ಜಾಗ್ರದವಸ್ಥೆಗೆ ಮಾತ್ರ ಸೇರಿದೆ ಎಂಬುವನ್ನು ನಾವು ಲಕ್ಷ್ಯದಲ್ಲಿಡಬೇಕು. 'ದೇಹೇನ್ದ್ರಿಯಾದಿಷ್ವಹಂಮಮಾಭಿಮಾನರಹಿತಸ್ಯ ಪ್ರಮಾತೃತ್ವಾನುಪಪತ್ತೌ ಪ್ರಮಾಣಪ್ರವೃತ್ತ್ಯನುಪಪತ್ತೇಃ' ಎಂಬ ಭಾಷ್ಯೋಕ್ತಿಯನ್ನು ನೆನಪಿಟ್ಟವರಿಗೆ ಎಚ್ಚರದ ದೇಹ, ಎಚ್ಚರದ ಇಂದ್ರಿಯ, ಎಚ್ಚರದ ಮನಸ್ಸು- ಇವುಗಳಿಲ್ಲದೆ ಪ್ರಮಾಣಪ್ರಮೇಯ ವ್ಯವಹಾರವಿಲ್ಲ ಎಂಬುದಲ್ಲದೆ, ಈ ದೇಹೆಂದ್ರಿಯಮನಸ್ಸುಗಳು ಸತ್ಯವಾಗಿವೆ ಎಂಬುದಕ್ಕೆ ಯಾವ ಪ್ರಮಾಣವನ್ನೂ ತೋರಿಸುವದಕ್ಕೆ ಆಗುವದಿಲ್ಲವೆಂಬುದೂ ಸ್ಪಷ್ಟವಾಗುತ್ತದೆ. ಏಕೆಂದರೆ ದೇಹಾದಿಗಳು ಇವೆಯೆಂದು ನಿಶ್ಚಯಿಸುವದಕ್ಕೆ ನಮಗೆ ಯಾವ ಪ್ರಮಾಣವೂ ಇರುವಂತಿಲ್ಲ; ದೇಹವು ಪ್ರಮೇಯವೆನ್ನುವದಾದರೆ ಅದನ್ನು ಪ್ರಮಾಣದಿಂದ ಸಿದ್ಧಪಡಿಸುವ ಪ್ರಮಾತೃವೊಬ್ಬನು ಬೇಕು, ಅವನಿಗೆ ಪ್ರಮಾಣವೂ ಬೇಕು ; ದೇಹಾದಿಗಳಿಗಿಂತ ವ್ಯತಿರಿಕ್ತನಾಗಿರುವ ಪ್ರಮಾತೃವು ಪ್ರಮಾತೃವೆನಿಸಿಕೊಳ್ಳಬೇಕಾದರೆ ಮತ್ತೆ ಯಾವ ದೇಹಾದಿಗಳೂ ಇಲ್ಲದೆ ಪ್ರಮಾತೃವಾಗಲಾರನು-ಎಂಬುದು ಸುಸ್ಪಷ್ಟವಾಗಿರುತ್ತದೆ. ಆದ್ದರಿಂದ ದೇಹಾದಿಗಳು ಸತ್ಯವಾಗಿವೆಯೆಂಬೂ ಅವು ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿರುವವೆಂದೂ ಹೇಳುವವರು ಅವುಗಳಿಗಿಂತ ವ್ಯತಿರಿಕ್ತವಾದ ಪ್ರಮಾತೃವೂ ಆ ಪ್ರಮಾತೃವಿಗೆ ದೇಹಾದಿಗಳೂ ಇವೆ- ಎಂಬುದನ್ನು ಪ್ರಮಾಣದಿಂದ ತೋರಿಸಿಕೊಡಬೇಕಾದ ಹೊಣೆಗಾರಿಕೆಯನ್ನು ಹೊರಬೇಕಾಗಿರುವದು. ಆಗ ಆ ಹೊಸ ಪ್ರಮಾತ್ರಾದಿಗಳು ಇವೆಯೆಂಬುದಕ್ಕೆ ಹಾಗೆಯೇ ಮತ್ತೆ ಬೇರೆ ಪ್ರಮಾತ್ರಾದಿಗಳನ್ನು ಒಪ್ಪಬೇಕಾಗಿಬರುವದರಿಂದ ಅನವಸ್ಥೆ- ಎಂಬ ದೋಷವು ಗಂಟುಬೀಳುವದೆಂಬುದು ಸ್ಪಷ್ಟ.

ಇದಲ್ಲದೆ ಸ್ವಪ್ನದಲ್ಲಿಯೂ ಈ ಪ್ರಮಾಣಾದಿಗಳು ಇರುವಂತೆ ತೋರುತ್ತಿರುವವು; ಅಲ್ಲಿಯೂ ದೇಹಾದಿಗಳು ನಿಜವಾಗಿ ಇರುವವೆಂಬ ನಂಬಿಕೆಯು ನಮಗೆ ಗಟ್ಟಿಯಾಗಿರುತ್ತದೆ. ಆದರೆ ಅವೆಲ್ಲ ಸತ್ಯವೆಂದು ಯಾರೂ ನಂಬುವದಿಲ್ಲ. ಎಚ್ಚತ್ತ ಕೂಡಲೆ ಸ್ವಪ್ನದ ಪ್ರಮಾಣಾದಿಗಳು ಬರಿಯ ಭ್ರಾಂತಿ-ಎಂದು ಎಲ್ಲರಿಗೂ ನಿಶ್ಚಯವಾಗಿಬಿಟ್ಟಿರುತ್ತದೆ. ಹಾಗಾದರೆ ಎಚ್ಚರದ ಪ್ರಮಾತೃಪ್ರಮಾಣಪ್ರಮೇಯಗಳು ಭ್ರಾಂತಿಯಲ್ಲವೆಂದು ಹೇಗೆ ನಂಬುವದು? ಇನ್ನು ಸುಷುಪ್ತಿಗೆ ಹೋದರೆ ಅಲ್ಲಿ ಯಾವ ಪ್ರಮಾತೃಪ್ರಮಾಣಾದಿಗಳೂ ಇರುವದೇ ಇಲ್ಲ. ಅಲ್ಲಿ ಯಾವದೂ ಇಲ್ಲವೆಂಬುದಕೆ ನಮಗೆ ಯಾವ ಪ್ರಮಾಣವಿದೆ ? ಪ್ರಮಾಣವಿಲ್ಲದೆ ವಸ್ತುಸಿದ್ಧಿಯಿಲ್ಲವೆನ್ನುವವರು ಸುಷುಪ್ತಿಯಲ್ಲಿ ನಾವು ಇದ್ದೇ ಇರುವೆವೆನ್ನುವದಕ್ಕೆ ಯಾವ ಪ್ರಮಾಣವನ್ನು

ಕೊಟ್ಟಾರು ? ಇದೆಲ್ಲವನ್ನೂ ನೋಡಿದರೆ ನನ್ನ ಪರಮಾರ್ಥವಾದ ಆತ್ಮರೂಪವು ಪ್ರಮಾಣವೂ ಅಲ್ಲ, ಪ್ರಮೇಯವೂ ಅಲ್ಲ ; ಸ್ವತಃಸಿದ್ಧವಾದ ಆತ್ಮತತ್ತ್ವಕ್ಕೆ ಯಾವ ಪ್ರಮಾಣವೂ ಬೇಡ. ಪ್ರಮಾತೃಪ್ರಮಾಣಪ್ರಮೇಯಗಳನ್ನು ಯಾವ ಅನುಭವದಿಂದ ಸಿದ್ಧಪಡಿಸಬೇಕಾಗಿರುವದೋ ಆ ಅನುಭವದ ಸ್ವರೂಪದಿಂದಲೇ ಇದ್ದುಕೊಂಡಿರುವ ಆತ್ಮನು, ಅನುಭವರೂಪವಾದ ತನ್ನಿಂದಲೇ ತಾನು ಸಿದ್ಧನಾಗಿರುತ್ತಾನೆ–ಎಂಬುದನ್ನು ಎಲ್ಲಾ ದರ್ಶನದವರೂ ಒಪ್ಪಬೇಕಾಗುವದು.

ಹೀಗೆ ಪ್ರಮಾಣವೂ ಪ್ರಮೇಯವೂ ಅಲ್ಲದ ಪರಮಾತ್ಮನ ಜ್ಞಾನಕ್ಕೆ ಈ ಎರಡು ದರ್ಶನಗಳ ಪ್ರಯೋಜನವು ಬಹಳ ಕಡಿಮೆ. ವ್ಯವಹಾರದಲ್ಲಿ ಮಾತ್ರವೇ ಪ್ರಮೇಯಗಳ ತತ್ತ್ವವನ್ನು ನಿಶ್ಚಯಿಸುವದಕ್ಕಾಗಿ ಅವುಗಳನ್ನು ವೇದಾಂತಿಗಳು ಅಂಗೀಕರಿಸಿರುತ್ತಾರೆ.

## ೫೨. ಪೂರ್ವಮೀಮಾಂಸಾದರ್ಶನ, ಭೌತಿಕವಿಜ್ಞಾನಗಳೂ ಅಧ್ಯಾತ್ಮವಿದ್ಯೆಯೂ

(24-9-69)

ಪ್ರಾರಂಭಿಸಿದ ಉಪನ್ಯಾಸಮಾಲಿಕೆಯು ಮುಗಿಯುತ್ತಾ ಬಂದಿದೆ. ವೇದಾಂತ ದರ್ಶನಕ್ಕೂ ಸಾಂಖ್ಯಯೋಗನ್ಯಾಯವೈಶೇಷಿಕದರ್ಶಗಳಿಗೂ ಪ್ರಮಾಣ ಸಂಖ್ಯೆಯ ವಿಷಯಕ್ಕೆ ಇರುವ ವಿಪ್ರತಿಪತ್ತಿಯನ್ನು ಹೇಳಿದ್ದಾಯಿತು. ಇನ್ನು ಪೂರ್ವಮೀಮಾಂಸಾದರ್ಶನವೊಂದು ಉಳಿದಿದೆ. ಆ ದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ, ಶಬ್ದ– ಎಂಬ ಆರು ಪ್ರಮಾಣಗಳನ್ನು ಒಪ್ಪಿರುತ್ತದೆ. ವೇದಾಂತಿಗಳೂ ವ್ಯವಹಾರಾವಸ್ಥೆಯಲ್ಲಿ ಈ ಆರೂ ಪ್ರಮಾಣಗಳನ್ನು ಒಪ್ಪಿರುತ್ತಾರೆ. ಆದರೆ ಪರಮಾರ್ಥದೃಷ್ಟಿಯಿಂದ ನೋಡಿದಾಗ ಪ್ರಮಾಣಪ್ರಮೇಯವ್ಯವಹಾರವು ಅವಿದ್ಯಾಕಲ್ಪಿತವೆಂಬುದು ಅವರ ಸಿದ್ಧಾಂತ.

ಈ ಪೂರ್ವಮೀಮಾಂಸಾದರ್ಶನದಲ್ಲಿ ಕರ್ಮಕ್ಕೇ ಹೆಚ್ಚಿನ ಬೆಲೆ. ಕರ್ಮಕ್ಕೆ ಶೇಷವಾಗಿ ದೇವತೆಗಳೂ ಸ್ವರ್ಗಾದಿಗಳೂ ವೇದಪ್ರಮಾಣದಿಂದ ಸಿದ್ಧವಾಗುತ್ತವೆ. ಆದರೆ ಫಲವನ್ನು ಕೊಡುವದಕ್ಕೆ ವೇದೋಕ್ತವಾದ ಕರ್ಮವೊಂದೇ ಸಾಕು–ಎಂದು ಅವರು ಈಶ್ವರನಿಗೇ ಸ್ಥಾನವಿಲ್ಲದಂತೆ ಮಾಡಿರುತ್ತಾರೆ. ಕರ್ಮಕ್ಕೆ ಫಲವು ಯಾರಿಂದ ಆಗುತ್ತದೆ? ಕ್ಷಣಿಕವಾದ ಕರ್ಮಕ್ಕೆ ಮುಂದೆ ಕಾಲಾಂತರದಲ್ಲಿ ಫಲವಾಗ

ವವು ಹೇಗೆ?– ಎಂಬ ಪ್ರಶ್ನೆಯನ್ನು ತೆಗೆದು 'ಸ್ವರ್ಗಕಾಮನಾದವನು ಯಾಗ ಮಾಡಬೇಕು' ಎಂದು ಶ್ರುತಿಯಿರುವದರಿಂದ ಮಾಡಿದ ಕರ್ಮವು ಕೂಡಲೆ ನಾಶವಾಗುವ ಸ್ವಭಾವವುಳ್ಳದ್ದಾದರೂ ಕರ್ಮದ ಉತ್ತರಾವಸ್ಥೆಯಾದ, ಅಥವಾ ಫಲದ ಪೂರ್ವಾವಸ್ಥೆಯಾದ 'ಅಪೂರ್ವ'ವೆಂಬ ತತ್ತ್ವವನ್ನು ತರ್ಕದಿಂದ ಕಲ್ಪಿಸಿ ಕೊಳ್ಳಬೇಕು. ಇಲ್ಲದಿದ್ದರೆ ಶ್ರುತಿಯಲ್ಲಿ ಹೇಳಿರುವ ಕರ್ಮಕ್ಕೆ ಅಧಿಕಾರಿಗಳೇ ಇಲ್ಲ ವೆಂದಾಗುವದು. ಈಶ್ವರನೇ ಫಲದಾತೃ– ಎಂದು ಕಲ್ಪಿಸಿದರೆ ಏಕರೂಪನಾಗಿ ರುವ ಕಾರಣನಾಗಿದ್ದರೂ ಅವನಿಂದ ವಿಚಿತ್ರವಾದ ಕಾರ್ಯವು ಉಂಟಾಗುತ್ತದೆ– ಎಂದು ಅಯುಕ್ತವಾಗಿ ಕಲ್ಪಿಸಬೇಕಾಗುವದು. ವಿಚಿತ್ರಸ್ವಭಾವದ ಪ್ರಾಣಿಗಳನ್ನು ಸೃಷ್ಟಿಸುವದಾದರೆ, ಈಶ್ವರನು ಪಕ್ಷಪಾತವುಳ್ಳವನೆಂದೂ ನಿರ್ದಯನೆಂದೂ ಅವನ ಸ್ವಭಾವಕ್ಕೆ ವಿರುದ್ಧವಾಗಿ ಕಲ್ಪಿಸಬೇಕಾಗುವದು. ಅವನೇ ಫಲವನ್ನು ಕೊಡುವ ದಾದರೆ ಕರ್ಮಾನುಷ್ಠಾನವು ವ್ಯರ್ಥವೆಂದೂ ಆಗುವದು– ಎಂದು ಈಶ್ವರನಿಗೆ ಫಲದಾತೃತ್ವವನ್ನು ಅವರು ತಿರಸ್ಕರಿಸಿರುತ್ತಾರೆ. (ವೇ. ಸೂ. ೩-೨-೪೦)ಆದರೆ ವೇದಾಂತದಲ್ಲಿ ಬರಿಯ ಕರ್ಮದಿಂದ ಅಥವಾ ಬರಿಯ ಅಪೂರ್ವದಿಂದ ಫಲ ವುಂಟಾಗುತ್ತದೆ ಎಂಬುದನ್ನು ತಿರಸ್ಕರಿಸಿರುತ್ತದೆ. ಅಪೂರ್ವವೆಂಬುದಿದೆ ಎಂಬು ದಕ್ಕೆ ಪ್ರಮಾಣವೇ ಇಲ್ಲ ; ಅರ್ಥಾಪತ್ತಿಪ್ರಮಾಣದಿಂದ ಈಶ್ವರನನ್ನೇ ಕಲ್ಪಿಸ ಬಹುದಾಗಿರುವದರಿಂದ ಆ ಪ್ರಮಾಣವೂ ಅಪೂರ್ವಕ್ಕಿಲ್ಲ. ಈಶ್ವರನು ಫಲದಾತೃ ವೆಂಬುದಕ್ಕೆ ಶ್ರುತಿಸ್ಮೃತಿಗಳೆಂಬ ಪ್ರಮಾಣಗಳಿವೆ. ಈಶ್ವರನೇ ಚೇತನರೂಪ ನಾಗಿರುವದರಿಂದ ಫಲವನ್ನು ಕೊಡಬಹುದು. ಜಗತ್ತಿನ ಸೃಷ್ಟಿಗೆ ಈಶ್ವರನೇ ಕಾರಣನೆಂದು ಎಲ್ಲಾ ಶ್ರುತಿಗಳಲ್ಲಿಯೂ ಪ್ರತಿಪಾದಿಸಿರುತ್ತದೆ. ಅವರವರ ಕರ್ಮಗಳಿಗೆ ಅನುಗುಣವಾಗಿ ಫಲಗಳನ್ನು ಸೃಷ್ಟಿಸಿರುವದೇ ಅವನು ಫಲದಾತೃ ವೆಂಬ ಮಾತಿಗೆ ಅರ್ಥ. ಆದ್ದರಿಂದ ವೈಷಮ್ಯನೈರ್ಘೃಣ್ಯಗಳನ್ನು ಅವನಿಗೆ ಅಂಟಿಸುವದಕ್ಕಾಗುವದಿಲ್ಲ– ಎಂದು ಬಾದರಾಯಣರು (ವೇ. ಸೂ. ೩–೨– ೪೧) ನಿರ್ಣಯಿಸಿರುತ್ತಾರೆ.

ಈ ರೀತಿಯಲ್ಲಿ ಮಿಕ್ಕ ದರ್ಶನಗಳು ವ್ಯವಹಾರದೃಷ್ಟಿಯಿಂದ ಉಪಯುಕ್ತ ವಾಗಿದ್ದರೂ ಅನುಭವಪ್ರಮಾಣಾನುಸಾರಿಯಾಗಿರುವ, ಅನುಭವದಲ್ಲಿ ಕೊನೆ ಗಾಣುವ ಆತ್ಮಜ್ಞಾನವೆಂಬ ಪರಮಪುರುಷಾರ್ಥಸಾಧನವನ್ನು ಬೋಧಿಸುವ ಉಪನಿಷತ್ತುಗಳ ಆಧಾರದಮೇಲೆ ನಿಂತಿರುವ ವೇದಾಂತದರ್ಶನವೇ ಎಲ್ಲಕ್ಕೂ ಮೂರ್ಧನ್ಯವಾಗಿರುತ್ತದೆ ಎಂದು ಈವರೆಗೆ ತೋರಿಸಿಕೊಟ್ಟದ್ದಾಗಿರುತ್ತದೆ.

ಈವರೆಗೆ ನಾನು ತಮ್ಮಗಳ ಮುಂದೆ ಇಟ್ಟಿರುವ ಉಪನ್ಯಾಸಮಾಲಿಕೆಯಲ್ಲಿ ಭೌತಿಕವಿಜ್ಞಾನಶಾಸ್ತ್ರದ ಹೆಚ್ಚುಗಾರಿಕೆಯನ್ನು ಸ್ವಲ್ಪವೂ ಅಲ್ಲಗಳೆಯದೆ, ಆಧಿ ಭೌತಿಕಪ್ರಪಂಚವೇ ಅಲ್ಲದೆ ಆಧ್ಯಾತ್ಮಿಕಪ್ರಪಂಚವೂ ಇದೆ ಎಂಬುದನ್ನು ಮನಗಾಣಿಸಿ ಕೊಟ್ಟಿರುತ್ತೇನೆ. 'ಅನ್ಯಮಿನ್ದ್ರಂ ಕರಿಷ್ಯಾಮಿ'ಎಂದ ವಿಶ್ವಾಮಿತ್ರನಂತೆ ಭೌತಿಕ

ವಿಜ್ಞಾನವು ನಮಗೆ ಎಷ್ಟೇ ಹೊಸಹೊಸ ದೃಶ್ಯಗಳನ್ನು ಕಾಣಿಸಲಿ, ಎಷ್ಟೇ ಭೋಗೋಪಕರಣಗಳನ್ನೊದಗಿಸುವ ಯಂತ್ರಗಳನ್ನು ಶೋಧನೆಮಾಡಲಿ, ಅವೆಲ್ಲವೂ ಆಧ್ಯಾತ್ಮಪ್ರಪಂಚಕ್ಕೆ ಸೇರಿದ ಮನೋಬುದ್ಧಿಗಳ ಸಹಾಯದಿಂದಲೇ ಆದವೆಂಬುದನ್ನು ಅಲ್ಲಗಳೆಯುವದಕ್ಕೆ ಆಗುವಂತಿಲ್ಲ. ಅಧ್ಯಾತ್ಮವಿದ್ಯೆಗೆ ಅವಶ್ಯವಾದ ಧರ್ಮಾಧರ್ಮಗಳು, ದೇವತೆಗಳ ಮತ್ತು ಈಶ್ವರನ ಅಸ್ತಿತ್ವದಲ್ಲಿ ನಂಬಿಕೆ– ಇವುಗಳಿಗೆ ಆ ಭೌತಿಕವಿಜ್ಞಾನದ ಆವಿಷ್ಕರಣಗಳ ಮತ್ತು ಯಂತ್ರನಿರ್ಮಾಣದ ಸಾಹಸದಿಂದ ಸ್ವಲ್ಪವೂ ಧಕ್ಕೆ ತಗಲುವಂತಿರುವದಿಲ್ಲ. ಊಟಮಾಡುವದರಿಂದ ತೃಪ್ತಿಯಾಗುವದೂ ಚಳಿಗಾಳಿಗಳ ಸಂಪರ್ಕದಿಂದಲೂ ಬೆಂಕಿಯ ಕಾವಿನಿಂದಲೂ ನಮಗೆ ಆಗುವ ಶೀತೋಷ್ಣಸುಖದುಃಖಗಳೂ ಹೇಗೆ ಆಧ್ಯಾತ್ಮಪ್ರಪಂಚದಲ್ಲಿಯೇ ಅನುಭವಕ್ಕೆ ಬರಬೇಕಾಗಿದೆಯೋ, ಹಾಗೆಯೇ ಅಧ್ಯಾತ್ಮವಿದ್ಯೆಯ ಫಲಗಳೂ ಆ ಪ್ರಪಂಚದಲ್ಲಿಯೇ ಅನುಭವಕ್ಕೆ ಬರಬೇಕಾಗಿರುತ್ತವೆ. ನಮ್ಮ ದೇಹದೊಳಗೆ ಇರುವ ಆಧ್ಯಾತ್ಮಿಕವಾದ ಅಂತಃಕರಣವೃತ್ತಿಗಳೂ ಅವುಗಳಿಗೆ ಸಾಕ್ಷಿಯಾಗಿರುವ ಪರಮಾತ್ಮನೂ ವ್ಯವಹಾರದಶೆಯಲ್ಲಿ ಕಾಣದಂತೆ ಸೂಕ್ಷ್ಮವಾಗಿರುತ್ತಿದ್ದರೂ ನಾವು ಅವುಗಳ ಕಡೆಗೇ ತಿರುಗಿದಾಗ ಕ್ರಮಕ್ರಮವಾಗಿ ಪ್ರಕಟವಾಗುವವು. ಈಗ ಇಟ್ಟಿಗೆ, ಗಾರೆ, ಸಿಮೆಂಟು– ಮುಂತಾದವುಗಳ ಸಹಾಯದಿಂದ ಕಟ್ಟಿರುವ ಕಟ್ಟಡಕ್ಕಿಂತಲೂ ಮಹತ್ತರವಾದ ಅಧ್ಯಾತ್ಮಮಂದಿರವನ್ನು ಇಲ್ಲಿಯೇ ನಾವು ನಿರ್ಮಿಸಿಕೊಂಡು ನಲಿಯುವದಕ್ಕೆ ಅವಕಾಶವಿದೆ. ಪ್ರಾಚೀನಕಾಲದ ಋಷಿಗಳು– ಹೊರಗಿನ ದೃಶ್ಯವೈಚಿತ್ರ್ಯವನ್ನು ಕಂಡುಕೊಳ್ಳುವ ಭೌತಿಕವಿಜ್ಞಾನಶಾಸ್ತ್ರರಂತೆಯೇ–ಅಧ್ಯಾತ್ಮತತ್ತ್ವಗಳನ್ನು ಅನಾವರಣವಾಗಿಸುವ ಅಧ್ಯಾತ್ಮವಿದ್ಯೆಯನ್ನು ಕಂಡುಹಿಡಿದಿರುತ್ತಾರೆ. ವಿಶ್ವಾಮಿತ್ರರು ಗಾಯತ್ರೀಮಂತ್ರವನ್ನು ಕಂಡುಹಿಡಿದವರು. ಗಾಯತ್ರೀಮಂತ್ರವಲ್ಲ ನಮ್ಮ ಬುದ್ಧಿವೃತ್ತಿಗಳನ್ನು ಪ್ರಚೋದನೆ ಮಾಡುವ ಪರಮಾತ್ಮನ ಅದ್ಭುತಶಕ್ತಿಯನ್ನೇ ಕೊಂಡಾಡಿರುತ್ತದೆ. 'ಇಂದ್ರಿಯ ಮನಸ್ಸುಗಳೆರಡನ್ನೂ ಮೀರಿರುವ ಸರ್ವಸಾಕ್ಷಿಯನ್ನು ಕಾಣುವ ಆಧ್ಯಾತ್ಮವಿದ್ಯೆಯನ್ನು ಸಂಪಾದಿಸುವದಕ್ಕೇ ನನ್ನ ಜೀವನವನ್ನು ಮೀಸಲಾಗಿಡುವೆನು'– ಎಂಬ ಸತ್ಯಸಂಕಲ್ಪವನ್ನು ಮಾಡುವ ಧೀರನು ಈಗ್ಗೆ ಮುಂದಕ್ಕೆ ಬರಬೇಕು. ಆತ್ಮತತ್ತ್ವವನ್ನು ಕಾಣಬೇಕೆಂದು ಧ್ಯಾನಮಾರ್ಗದಲ್ಲಿ ಹೊರಟವನಿಗೆ ಮನಸ್ಸೂ ಆತ್ಮನಲ್ಲಿ ಶಾಂತವಾಗಿಬಿಡುತ್ತದೆ ; ಆ ಅಮನಸ್ತ್ವದ ಸ್ಥಿತಿಯಲ್ಲಿ ಪರಮಾತ್ಮನಲ್ಲಿಯೇ ಸಾಯುಜ್ಯವನ್ನು ಪಡೆದುಕೊಳ್ಳಬಹುದು.

ಆಧ್ಯಾತ್ಮವಿದ್ಯೆಯಲ್ಲಿ ತತ್ತ್ವವನ್ನು ನಾವು ತಿಳಿದುಕೊಳ್ಳುವ ಕ್ರಮವು ಮಿಕ್ಕ ದರ್ಶನಗಳ ಪ್ರಕಾರಕ್ಕಿಂತ ವಿಲಕ್ಷಣವಾಗಿರುತ್ತದೆ. ಅನಾದಿಯಾದ ಅವಿದ್ಯಾವಾಸನೆಯಿಂದ ಈಗ ನಮಗೆ ಆಗಿರುವ ಅನ್ಯಥಾಜ್ಞಾನವನ್ನು ಬಾಧಿಸಿ ಅನುಭವಾತ್ಮಕ

ನಾದ ಆತ್ಮನನ್ನು ನಮ್ಮರೂಪದಿಂದಲೇ ಅರಿಯುವಂತೆ ಬೋಧಿಸುವ ವಿಲಕ್ಷಣವಾದ ವಿಜ್ಞಾನಪ್ರಕಾರವದು. 'ನಾಹಂ ದೇಹೋ ನೇನ್ದ್ರಿಯಾಣ್ಯನ್ತರಙ್ಗಂ। ನಾಹಙ್ಕಾರಃ ಪ್ರಾಣವರ್ಗೋ ನ ಬುದ್ಧಿಃ। ದಾರಾಪುತ್ರಕ್ಷೇತ್ರವಿತ್ತಾದಿ ದೂರಃ ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ ಶಿವೋಽಹಮ್॥'ಎಂದಿರುವಂತೆ ಹೆಂಡಿರು ಮಕ್ಕಳು, ಹೊಲಮನೆ- ಮುಂತಾದ ಹೊರಗಿನ ವಿಷಯಗಳಲ್ಲಿಯೂ ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ- ಇವುಗಳಲ್ಲಿಯೂ ಆತ್ಮಾಭಿಮಾನವನ್ನು ಕ್ರಮಕ್ರಮವಾಗಿ ಸಾವಧಾನವಾಗಿ ಲಯಿಸಿಕೊಂಡು ಇವೆಲ್ಲಕ್ಕೂ ಸಾಕ್ಷಿಯಾಗಿರುವ, ಸರ್ವಾಂತರಾತ್ಮನಾದ ಕೂಟಸ್ಥನಿತ್ಯಚೈತನ್ಯಸ್ವರೂಪನಾದ ಪರಮಾತ್ಮನೇ ನಾನು ಎಂಬ ದಿವ್ಯಜ್ಞಾನವನ್ನು ಸಂಪಾದಿಸುವ ಪ್ರಕಾರವನ್ನು ತಿಳಿಯಿಸಿಕೊಡುವ ವಿದ್ಯೆಯದು. ಆ ಅನುಭವದ ದೃಷ್ಟಿಯಿಂದ ನೋಡುವಾಗ ಈಗ ನಮಗೆ ಸತ್ಯವೆಂದು ಕಾಣಿಸುತ್ತಿರುವ ಭೇದಗಳೂ ವಿಭಾಗಗಳೂ ಕರಗಿ, ಎಲ್ಲೆಲ್ಲಿಯೂ ಅಜಾದ್ವಯಸ್ವರೂಪನಾದ ಆ ಪರಮಾತ್ಮನೊಬ್ಬನೇ ಅನುಭವಗೋಚರನಾಗುತ್ತಾನೆ. ಶ್ರದ್ಧಾಭಕ್ತಿಪೂರ್ವಕವಾಗಿ ಶಾಸ್ತ್ರೋಕ್ತವಾದ ಕ್ರಮದಿಂದ ಆಧ್ಯಾತ್ಮಸಾಧನೆಗಳನ್ನು ಮಾಡುವ ಆಸ್ತಿಕರೆಲ್ಲರಿಗೂ ಈ ನಿತ್ಯಸತ್ಯವನ್ನು ಈ ಜನ್ಮದಲ್ಲಿಯೇ ಇಲ್ಲಿಯೇ ಕಂಡುಕೊಂಡು ನಲಿಯುವುದಕ್ಕೆ ಅವಕಾಶವಿರುತ್ತದೆ

ಅಧಿಭೌತಿಕಪ್ರಪಂಚವು ಎಷ್ಟು ವಿಶಾಲವಾಗಿದ್ದು ಎಷ್ಟೇ ವ್ಯಾವಹಾರಿಕ ಪ್ರಯೋಜನಕ್ಕೆ ಅವಕಾಶವನ್ನು ಕಲ್ಪಿಸಿದ್ದರೂ ಅದೊಂದನ್ನೇ ನಂಬಿ ಆಧ್ಯಾತ್ಮಪ್ರಪಂಚವು ಒಂದಿದೆ ಎಂಬುವನ್ನು ಅಲ್ಲಗಳೆದರೆ ಅಳಿಯನನ್ನು ಬಿಟ್ಟು ದಿಬ್ಬಣ ತೆರಳಿದಂತೆ, ನಮ್ಮ ಸ್ವರೂಪವನ್ನೇ ನಾವು ಅಲ್ಲಗಳೆದಂತೆ ಆಗುವದೆಂಬುದಕ್ಕೆ ಸಂಶಯವಿಲ್ಲ. ಹಸಿವಾದವನು ಊಟವನ್ನು ಮಾಡಿದರೆ ತೃಪ್ತಿಯಾಗುವದೆಂಬುದು ಹೇಗೆ ಎಲ್ಲರಿಗೂ ಅನುಭವದಲ್ಲಿದೆಯೋ ಹಾಗೆಯೇ ವೇದಾಂತವಿಚಾರದಿಂದ ಅಧ್ಯಾತ್ಮಪ್ರಪಂಚದ ಅನುಭವವೂ ಎಲ್ಲಕ್ಕೂ ತಿರುಳಾಗಿರುವ ಆತ್ಮನ ಅರಿವೂ ಆಗಿ ನಮ್ಮೆಲ್ಲರಿಗೂ ಸ್ವಭಾವವಾಗಿರುವ ಆನಂದವು ತೋರುವದೆಂಬುದೂ ಸಾರ್ವತ್ರಿಕಾನುಭವದಿಂದ ನಿಶ್ಚಿತವಾಗುವದು. ಆದ್ದರಿಂದ ವೇದಾಂತಜ್ಞಾನವು ಭೌತಿಕಪ್ರಪಂಚದ ವಿಜ್ಞಾನದಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಮಾನವನ ವ್ಯವಹಾರಕ್ಷೇತ್ರವನ್ನು ಹಿಗ್ಗಿಸುತ್ತದೆ ಎನ್ನಬಹುದು.

ಇನ್ನೂ ಒಳಹೊಕ್ಕು ನೋಡಿದರೆ ಅಧ್ಯಾತ್ಮಪ್ರಪಂಚದ ಕೇಂದ್ರವಾಗಿರುವ ಆತ್ಮನೇ ಎಲ್ಲಕ್ಕೂ ಆಶ್ರಯನು. ಆ ಆತ್ಮನ ಆಧಾರದಿಂದಲೇ ಎಲ್ಲಾ ಆಧ್ಯಾತ್ಮಿಕ, ಅಧಿಭೌತಿಕ, ಅಧಿದೈವಿಕಪ್ರಪಂಚವೂ ತೋರಿಕೊಳ್ಳುತ್ತಿರುವದು ಎಂದು ಅನುಭವಕ್ಕೆ ಬಂದೀತು. ಉಪನಿಷತ್ತಿನಲ್ಲಿ :

**"ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ"**
ಛಾಂ. ೬-೮-೭

ಈ ಸೂಕ್ಷ್ಮನಾದ ಆತ್ಮನೇ ಎಲ್ಲಾ ಪ್ರಪಂಚಕ್ಕೂ ತಿರುಳು; ಅವನೇ ಪರಮಾರ್ಥ ಸತ್ಯವು, ಅದೇ ನಮ್ಮಲ್ಲಿ ಒಬ್ಬೊಬ್ಬರಿಗೂ ಆತ್ಮನು-ಎಂದು ಮತ್ತೆ ಮತ್ತೆ ಸಾರಿ ದೃಢಪಡಿಸಿರುತ್ತದೆ.

ಇವನ್ನು ನಮ್ಮ ಋಷಿಗಳು ಅನುಭವಕ್ಕೆ ತಂದುಕೊಂಡು ಲೋಕಹಿತಾರ್ಥವಾಗಿ ಪ್ರಕಟಪಡಿಸಿರುತ್ತಾರೆ. 'ಋಷಿ' ಎಂಬ ಶಬ್ದವೇ ತತ್ತ್ವವನ್ನು ಕಂಡುಕೊಂಡವನು ಎಂಬರ್ಥದ ಧಾತುವಿನಿಂದ ಹುಟ್ಟಿರುತ್ತದೆ. ವಿಶ್ವಾಮಿತ್ರರು ಗಾಯತ್ರಿಯನ್ನು ಕಂಡುಹಿಡಿದ ಮಹಾತ್ಮರೆಂದು ಪ್ರಸಿದ್ಧರಾಗಿರುತ್ತಾರೆಯಷ್ಟೆ? ಆ ಗಾಯತ್ರಿಯ ಪರಮಾರ್ಥಸ್ವರೂಪವೇನು?

**'ಗಾಯತ್ರೀ ವಾ ಇದಂ ಸರ್ವಂ'** ಛಾ. ೩-೧೨-೧

ಗಾಯತ್ರಿಯೇ ಈ ಜಗತ್ತೆಲ್ಲವೂ ಎಂದು ಉಪನಿಷದ್ವಾಕ್ಯವಿದೆ. ಪರಮಾತ್ಮನೇ ಗಾಯತ್ರಿ ಎಂದು ಹೇಳಿದೆ. ಆದ್ದರಿಂದ ವೇದಸಾರವಾದ ಗಾಯತ್ರಿಯ ಹೆಸರನ್ನೇ ಪರಮಾತ್ಮನಿಗೂ ವೇದಾಂತದಲ್ಲಿ ಕೊಟ್ಟಿರುತ್ತದೆ. ಇದು "ಅಧ್ಯಾತ್ಮಮಂದಿರ"ವಷ್ಟೆ? ಇದಕ್ಕೆ ಅಧ್ಯಾತ್ಮವೇ ಕೇಂದ್ರವು. 'ಅಧ್ಯಾತ್ಮವಿದ್ಯಾ ವಿದ್ಯಾನಾಮ್' (ಗೀ. ೧೦-೩೨) ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯು ನಾನೇ-ಎಂದು ಭಗವಂತನು ಸಾರಿರುತ್ತಾನೆ. ನಾವು ನಮ್ಮನಮ್ಮ ಒಳಗೇ ಈ ಆತ್ಮನೆಂಬ ಅಧ್ಯಾತ್ಮತತ್ತ್ವವನ್ನು ಕಂಡುಕೊಂಡರೆ ಆ ಕ್ಷಣದಲ್ಲಿಯೇ ನಮ್ಮನಮ್ಮ ದೇಹವೇ ಅಧ್ಯಾತ್ಮಮಂದಿರವಾಗುತ್ತದೆ. **"ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಃ ಸನಾತನಃ। ತ್ಯಜೇದಜ್ಞಾನನಿರ್ಮಾಲ್ಯಂ ಸೋಽಹಂಭಾವೇನ ಪೂಜಯೇತ್॥"** ಎಂಬ ಸ್ಮೃತಿವಾಕ್ಯದಂತೆ ಈ ನಮ್ಮ ದೇಹವೇ ದೇವಾಲಯ; ನಮ್ಮೊಳಗಿರುವ ಜೀವನ ಪರಮಾರ್ಥರೂಪವು ಪರಮಾರ್ಥವಾದ ದೇವನು. ಅಜ್ಞಾನವೆಂಬ ನಿರ್ಮಾಲ್ಯವನ್ನು ತೆಗೆದುಹಾಕಿ 'ಆತ್ಮನೇ ನಾನು' ಎಂಬ ಜ್ಞಾನವನ್ನು ಸಂಪಾದಿಸಿಕೊಳ್ಳುವದು ಆ ದೇವನಿಗೆ ಪರಮಪೂಜೆಯೆನಿಸಿರುತ್ತದೆ. ಈ ಪರಮಾರ್ಥವನ್ನು ಕಂಡುಕೊಂಡ ಋಷಿಗಳು ಎಂಥ ಮಹಾತ್ಮರಾಗಿರಬೇಕು!

ಭೌತಿಕಶಾಸ್ತ್ರದ ಅಭ್ಯಾಸದಲ್ಲಿರುವವರು 'ಅಧ್ಯಾತ್ಮವಿದ್ಯೆಯನ್ನು ನಾವೂ ತಿಳಿದುಬಿಡುತ್ತೇವೆ' ಎನ್ನುವದಕ್ಕಿಲ್ಲ. ಏಕೆಂದರೆ ಹೊರಗಣ್ಣಿರುವವರಿಗೆ ಒಳಗಣ್ಣು ಹೇಗೆ ಸಿಕ್ಕಬೇಕು? ಶ್ರುತಿಯಲ್ಲಿ ಹೀಗೆಂದಿದೆ:

"ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ ತಸ್ಮಾತ್ಪರಾಙ್ಪಶ್ಯತಿ ನಾಂತರಾತ್ಮನ್ । ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುಃ ಅಮೃತತ್ವಮಿಚ್ಛನ್ ॥" ಕಾ. ೪–೧

ಬ್ರಹ್ಮನು ಇಂದ್ರಿಯಗಳನ್ನು ಹೊರಗಡೆಗೆ ನೋಡುವಂತೆ ಕೊರೆದಿರುತ್ತಾನೆ; ಆದ್ದರಿಂದ ಸಾಮಾನ್ಯಮನುಷ್ಯನು ಹೊರಕ್ಕೆ ನೋಡುತ್ತಿರುತ್ತಾನೆಯೇ ಹೊರತು ತನ್ನ ಒಳಗೆ ನೋಡುತ್ತಿರುವದಿಲ್ಲ. ಆದರೆ ಯಾವನೋ ಒಬ್ಬ ವಿವೇಕಿಯು ಮಾತ್ರ ಇಂದ್ರಿಯಗಳನ್ನು ಒಳಕ್ಕೆ ಜಗ್ಗಿ ತನ್ನ ಪ್ರತ್ಯಗಾತ್ಮನನ್ನು ನೋಡುವದಕ್ಕೆ ಯತ್ನಿಸುತ್ತಾನೆ–ಎಂಬುದು ಉಪನಿಷದ್ವಾಕ್ಯದ ಅರ್ಥ. ಶ್ರೀರಾಮಕೃಷ್ಣ ಪರಮಹಂಸರು ಹೇಳಿರುವಂತೆ ಉಪ್ಪಿನಗೊಂಬೆಯು ಸಮುದ್ರದ ಆಳವನ್ನು ನೋಡುವೆನೆಂದು ಮುಳುಗಿದರೆ ತಾನೇ ಕರಗಿಹೋಗಿಬಿಡುವದಲ್ಲವೆ? ಇದರಂತೆ ನಾವು ಈಗಿರುವ ಸ್ಥಿತಿಯಲ್ಲಿ ನಮ್ಮ ಶರೀರ ಒಳಗಿನ ಸ್ವರೂಪದಿಂದ ಪರಮಾತ್ಮನನ್ನು ಕಾಣುವದೆಂಬುದು ಎಂದಿಗೂ ಆಗದಮಾತು.

ಶ್ರುತಿಸ್ಮೃತಿಗಳಲ್ಲಿ ಆತ್ಮನನ್ನು ಕಾಣುವದಕ್ಕೆ ಯಾವ ಉಪಾಯವನ್ನು ಹೇಳಿದೆ?–ಎಂದರೆ :

"ಶಾಂತೋ ದಾಂತಃ ಉಪರತಸ್ತಿತಿಕ್ಷುಃ ಸಮಾಹಿತೋ
ಭೂತ್ವಾಽಽತ್ಮನ್ಯೇವಾತ್ಮಾನಂ ಪಶ್ಯತಿ ಸರ್ವಮಾತ್ಮಾನಂ ಪಶ್ಯತಿ ॥"
ಬೃ. ೪–೪–೨೩

'ಅಂತಃಕರಣವನ್ನು ಬಿಗಿಹಿಡಿದುಕೊಂಡು ಇಂದ್ರಿಯಗಳನ್ನು ಜಯಿಸಿಕೊಂಡು ಹಿಂದಕ್ಕೆ ಸರಿದು ಶೀತೋಷ್ಣಗಳನ್ನು ಸಹಿಸಿಕೊಂಡು ಮನಸ್ಸನ್ನು ಸಮಾಧಾನ ಪಡಿಸಿಕೊಂಡವನಾಗಿ ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳುತ್ತಾನೆ. ಎಲ್ಲವೂ ಆತ್ಮನೇ ಎಂದು ಕಂಡುಕೊಳ್ಳುತ್ತಾನೆ."

ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ॥ ಗೀ. ೬–೨೭

"ಯಾವನ ಮನಸ್ಸು ಆತ್ಮನಲ್ಲಿಯೇ ಕರಗಿರುವದೋ ಅಂಥವನು ಬ್ರಹ್ಮವೇ ಆಗಿಬಿಡುತ್ತಾನೆ; ನಿಷ್ಕಲ್ಮಷನಾಗಿರುತ್ತಾನೆ. ಆತನಿಗೆ ಉತ್ತಮವಾದ ಆತ್ಮಾನಂದವು ಸಿಕ್ಕುವದು." ಗೀ ೬–೨೭.

ಆತ್ಮಸತ್ಯಾನುಬೋಧೇನ ನ ಸಙ್ಕಲ್ಪಯತೇ ಯದಾ ।
ಅಮನಸ್ತಾಂ ತದಾ ಯಾತಿ ಗ್ರಾಹ್ಯಾಭಾವೇ ತದಗ್ರಹಮ್ ॥
ಗೌ. ಕಾ. ೩–೩೨

ಎಲ್ಲವೂ ಆತ್ಮನೇ ಎಂದು ಕಂಡುಕೊಂಡು ಸಂಕಲ್ಪವನ್ನು ಮಾಡದೆ ಇರುವಾಗ ಮನಸ್ಸಿಗೆ ವಿಷಯವೇ ಇಲ್ಲದಿರುವದರಿಂದ ಅದು ಅಮನಸ್ತೆಯನ್ನು ಹೊಂದುವದು. ನಾವು ನಮ್ಮ ಪರಮಾತ್ಮನನ್ನು ಕಂಡುಕೊಂಡಾಗ ನಮ್ಮ ಮನಸ್ಸು ಮನಸ್ಸಾಗಿರುವದಿಲ್ಲ, ನಮ್ಮ ವ್ಯಕ್ತಿತ್ವವೂ ಉಳಿದಿರುವದಿಲ್ಲ. ಎಲ್ಲವೂ ಆತ್ಮನೇ ಆಗಿ ಆತ್ಮನನ್ನು ಆತ್ಮನೇ ಅನುಭವಿಸುತ್ತಿರುವನು.

ಪರಮಾತ್ಮನನ್ನು ಕಾಣುವಾತನು ತಾನೇ ತನ್ನಿಂದಲೇ ತನ್ನನ್ನು ಅನುಭವಿಸುತ್ತಿರುತ್ತಾನೆ. ಇದನ್ನು **ಸಹಜಸಮಾಧಿ** ಎಂದು ಕರೆಯುತ್ತಾರೆ. ಮಿಕ್ಕ ಅಧ್ಯಾರೋಪಿತರೂಪಗಳೆಲ್ಲವೂ ಇಲ್ಲಿ ಮಾಯವಾಗುತ್ತವೆ. ಹೀಗೆ ಕಾಣುವ ಕೊನೆಯ ಫಲವನ್ನೇ 'ನಿಷ್ಠಾ ಜ್ಞಾನಸ್ಯ ಯಾ ಪರಾ' (ಜ್ಞಾನದ ಕಟ್ಟ ಕಡೆಯ ಪರ್ಯವಸಾನ) ಎಂದು ಹದಿನೆಂಟನೆಯ ಅಧ್ಯಾಯದಲ್ಲಿ (೧೮–೫೦) ತಿಳಿಸಿರುತ್ತದೆ. ನೇರಾಗಿ ಇದನ್ನು ಅರಿತುಕೊಳ್ಳುವದಕ್ಕೆ ಆಗಲಾರದ ಮಧ್ಯಮಾಧಿಕಾರಿಗಳಿಗೆ ಇಂದ್ರಿಯಸಂಯಮ, ಮನೋನಿಗ್ರಹ– ಮುಂತಾದ ಸಾಧನಗಳನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ.

ಯತತೋ ಹ್ಯಪಿ ಕೌನ್ತೇಯ ಪುರುಷಸ್ಯ ವಿಪಶ್ಚಿತಃ
ಇನ್ದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥
ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।

(ವಿವೇಕಿಯಾದ ಪುರುಷನು ಪ್ರಯತ್ನವನ್ನು ಮಾಡುತ್ತಿದ್ದರೂ ಇಂದ್ರಿಯಗಳು ಬಲಾತ್ಕಾರದಿಂದ ಮನಸ್ಸನ್ನು ಹೊರಕ್ಕೆಳೆಯುತ್ತಿರುವವು. ಅವುಗಳೆಲ್ಲವನ್ನೂ ಬಿಗಿಹಿಡಿದು ಸಮಾಧಾನಚಿತ್ತನಾಗಿ ತನ್ನಲ್ಲಿಯೇ ತಾತ್ಪರ್ಯದಿಂದ ಇದ್ದುಕೊಂಡಿರಬೇಕು).

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥
ಗೀ. ೬–೪೭

(ಯೋಗಿಗಳೊಳಗೆಲ್ಲ ನನ್ನಲ್ಲಿಯೇ ಮನಸ್ಸನ್ನಿಟ್ಟುಕೊಂಡು ಶ್ರದ್ಧೆಯಿಂದ ಯಾವಾತನು ನನ್ನನ್ನೇ ಭಜಿಸುತ್ತಿರುವನೋ ಅವನೇ ಹೆಚ್ಚಿನ ಯೋಗಿ ಎಂದು ನನ್ನ ಮತವು)–ಎಂದುಮುಂತಾದ ವಾಕ್ಯಗಳಲ್ಲಿ ಈ ಅಭಿಪ್ರಾಯವಿದೆ.

ಹೀಗೆ ಇಂದ್ರಿಯಾದಿಗಳನ್ನು ಹಿಂತಿರುಗಿಸಿಕೊಂಡು ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಳ್ಳುವದರಿಂದಲೇ ಆತ್ಮನೇ ಆಗಿ ಉಳಿದುಕೊಳ್ಳುವನು.

ಇದಕ್ಕಾಗಿಯೇ ಸಾಂಖ್ಯದೃಷ್ಟಿಯಿಂದ ವಿಚಾರವನ್ನೂ ಯೋಗದೃಷ್ಟಿಯಿಂದ ಕರ್ಮಯೋಗಧ್ಯಾನಯೋಗಗಳನ್ನೂ ಹೇಳಿರುವದು. ಹೀಗೆ ವೇದಾಂತಶಾಸ್ತ್ರದ ಉಪದೇಶದಿಂದ ಅನಾತ್ಮಬಂಧನಗಳನ್ನೆಲ್ಲ ಬಿಡಿಸಿಕೊಂಡು ಸಾಧಕರು ತಮ್ಮ ತಮ್ಮ ಆತ್ಮನ ಸ್ವರೂಪದಲ್ಲಿಯೇ ನಿಲ್ಲುತ್ತಾರೆ. ಇದೇ ಜ್ಞಾನನಿಷ್ಠೆ. ಇದನ್ನೇ ಪರಭಕ್ತಿ, ಅಥವಾ ಜ್ಞಾನಭಕ್ತಿ ಎನ್ನುವರು. ಜ್ಞಾನಿಭಕ್ತನು ಮಿಕ್ಕ ಆರ್ತ, ಜಿಜ್ಞಾಸು, ಅರ್ಥಾರ್ಥಿ—ಎಂಬ ಮೂವರಿಗಿಂತಲೂ ನಿತ್ಯಯುಕ್ತನು, ಏಕಭಕ್ತಿಯುಳ್ಳವನು ಎಂದು (೭–೧೬, ೧೭) ಭಗವಂತನು ಹೊಗಳಿರುತ್ತಾನೆ. ಈ ಭಕ್ತನಿಗೆ ಭಗವಂತನು ಪ್ರಿಯನು, ಭಗವಂತನಿಗೆ ಈ ಭಕ್ತನೂ ಪ್ರಿಯನು.

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ॥**

ಗೀ. ೭–೧೮

ಎಂದರೆ ಮಿಕ್ಕವರು ಹೆಚ್ಚಿನವರೇ ಸರಿ, ಆದರೆ ಜ್ಞಾನಿಭಕ್ತನು ಭಗವಂತನ ಆತ್ಮನೇ. ಜ್ಞಾನನಿಷ್ಠಾರೂಪವಾದ ಪರಭಕ್ತಿಯಲ್ಲಿ, ಭಕ್ತಿ, ಭಗವಂತ —ಎಂಬ ಭೇದವೇ ಇರುವದಿಲ್ಲ. ಎಲ್ಲವೂ ಒಬ್ಬನೇ ಒಬ್ಬ ವಾಸುದೇವಭಗವಂತನೆಂಬ ಪರಮಾತ್ಮನಾಗಿರುತ್ತಾನೆ.

## ೫೩. ಶ್ರದ್ಧೆಯ ಆವಶ್ಯಕತೆ

( 26—9—69 )

ಈ ದಿನ ನನಗೆ ದೇಹದಲ್ಲಿರುವ ಅಸ್ವಸ್ಥತೆಯಿಂದ ಹೆಚ್ಚಾಗಿ ಮಾತನಾಡಲು ಅವಕಾಶವಿಲ್ಲದೆ ಇದೆ. ಆದ್ದರಿಂದ ಕೆಲವು ಮಾತುಗಳನ್ನು ಹೇಳಿ ಈ ದಿನದ ಕಾರ್ಯಕ್ರಮವನ್ನು ಉಪಸಂಹಾರಮಾಡುವೆನು.

ಕರ್ಮಗಳಿಗೆ ದೃಷ್ಟಫಲ, ಅದೃಷ್ಟಫಲ— ಎಂದು ಎರಡು ವಿಧದ ಫಲಗಳಾಗುತ್ತವೆ. ನನಗೆ ಈ ದಿನವೇ ಕಾಣುತ್ತಿರುವ ಫಲವು ಮತ್ತೆ ಕೆಲವರಿಗೆ ಹದಿನೈದು ದಿನಗಳಮೇಲೆ ಕಾಣಬರಬಹುದು. ಕರ್ಮದ ಫಲವು ಶರೀರದಲ್ಲಿ ಮಾತ್ರವೇ ಅಲ್ಲದೆ, ಇಂದ್ರಿಯಗಳಲ್ಲಿಯೂ ಮನಸ್ಸಿನಲ್ಲಿಯೂ ಕಾಣಬಹುದು. ಶರೀರದಲ್ಲಿ ಆಗುವ ಫಲವು ಸ್ಫುಟವಾಗಿ ಕಾಣುತ್ತದೆ; ಆದರೆ ಇಂದ್ರಿಯಾದಿಗಳಲ್ಲಿ ಆಗುವ ಫಲವು ಯಾವ ಕರ್ಮದ ಫಲ ಎಂಬುದು ಎಲ್ಲರಿಗೂ ಗೊತ್ತಾಗುವದಿಲ್ಲ.

ಪ್ರತ್ಯಕ್ಷದಲ್ಲಿ ಕಂಡದ್ದೇ ನಿಜ ಎಂಬುದನ್ನು ನಂಬಿ ಬದುಕಿರುವವರಿಗೆ ಸುಖವಾಗಿದ್ದದ್ದೇ ಬಂತು ; ಇಲ್ಲದಿದ್ದರೆ ಸತ್ತಮೇಲೆ ನಮಗೆ ಯಾವ ಸುಖವು ಸಿಕ್ಕೀತು? 'ಸಾಲವನ್ನು ಮಾಡಿಯಾದರೂ ತುಪ್ಪವನ್ನು ಕುಡಿಯಬೇಕು, ಶರೀರವು ಬೂದಿಯಾದಬಳಿಕ ಮತ್ತೆ ನಾವು ಈ ಸಂಸಾರಕ್ಕೆ ಹಿಂತಿರುಗುವದೆಲ್ಲಿಬಂತು ?' ಎಂಬ ಚಾರ್ವಾಕಮತವೇ ಪ್ರಾಕೃತಜನರಿಗೆಲ್ಲ ಯುಕ್ತವಾಗಿ ಕಾಣುತ್ತಿರುವದು. ಸದ್ಯಃಸುಖವನ್ನು ಕೊಡುವ ಭೋಗವನ್ನೇ ಹೊಗಳುವವರ ಮಾತು ಸಾಮಾನ್ಯ ಜನರ ಕಿವಿಗೆ ಇಂಪಾಗಿರುತ್ತದೆ. ವಿಜ್ಞಾನಶಾಸ್ತ್ರವು ನಿರೀಕ್ಷಣಪರೀಕ್ಷಣಸಂವಾದೀ ಕರಣಗಳಿಂದ ಪ್ರತ್ಯಕ್ಷವಾಗಿ ಅನುಭವಿಸುವದಕ್ಕೆ ಬರುವ ಶೋಧಗಳನ್ನು ಮಾಡುತ್ತಿರುವದು ಜನಸಾಮಾನ್ಯಕ್ಕೆ ಬಲುಮೆಚ್ಚಾಗಿರುತ್ತದೆ. ಕಣ್ಣಿಗೆ ಕಟ್ಟಿದಂತೆ ಅವರು ತೋರಿಸುತ್ತಿರುವ ಯಂತ್ರಾದಿಗಳೂ ಅವುಗಳ ಉಪಯೋಗದಿಂದಾಗುವ ಫಲಗಳೂ ನಮಗೆ ಗೊತ್ತಾಗಿವೆ. ಆದರೆ ಶಾಸ್ತ್ರೋಕ್ತವಾದ ಸ್ವರ್ಗ, ಜನ್ಮಾಂತರ, ಲೋಕಾಂತರ, ದೇವತೆಗಳು– ಮುಂತಾದವು ನಮಗೆ ಹಾಗೆ ಎಲ್ಲಿ ಅನುಭವಕ್ಕೆ ಬರುತ್ತಿವೆ ?– ಎಂದು ಈಗ ಹಲವರು ಕೇಳುತ್ತಿರುವರು !

ಸ್ವಲ್ಪ ವಿಚಾರಮಾಡಿದರೆ ಈ ಪ್ರತ್ಯಕ್ಷಪ್ರಮಾಣದ ವಾದವು ಸರಿಯಲ್ಲ ಎಂಬುದು ನಮಗೆ ಮನದಟ್ಟಾಗುವದು. ಕಾಣುವದೆಂದರೆ ಇಂದ್ರಿಯಗಳಿಗೇ ಕಾಣಬೇಕು– ಎಂಬ ನಿಯಮವೇನೂ ಇಲ್ಲ ; ಮನಸ್ಸಿಗೂ ಕಾಣಬಹುದಾಗಿದೆ. ಈ ದಿನ ನನಗೆ ಬಂದಿರುವ ಹಲ್ಲುನೋವು ನಿಮ್ಮ ಕಣ್ಣಿಗೆ ಗೋಚರವಾಗುತ್ತಿಲ್ಲ ; ನನಗೂ ಆಗುತ್ತಿಲ್ಲ. (ಅಕ್ಷಿ–ಕುಕ್ಷಿ–ಶಿರೋ–ದಂತ) ಕಣ್ಣು, ಹೊಟ್ಟೆ, ತಲೆ, ಹಲ್ಲು– ಇವುಗಳಲ್ಲಿ ಆಗುವ ನೋವು ಎಷ್ಟು ಪ್ರಬಲವಾಗಿ ಮನುಷ್ಯನನ್ನು ಕಾಡುವದು– ಎಂಬುದು ನಿಮಗೆಲ್ಲರಿಗೂ ತಿಳಿದೇ ಇದೆ. ಒಬ್ಬ ರಾಜನು ಸಾಧುಗಳ ಉಪದೇಶದಂತೆ ಕಾಡಿಗೆ ಹೋಗಿ ಅಲ್ಲಿ ತನಗೆ ಕಾಣಬರುವ ಒಂದಾನೊಂದು ಪಕ್ಷಿಯು ಮನುಷ್ಯ ಭಾಷೆಯಿಂದ ತಾನು ಕೇಳುವ ಮೂರು ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಿದೆ– ಎಂಬ ಪ್ರತ್ಯಾಶೆಯಿಂದ ಕಾದುಕೊಂಡಿದ್ದನು. ಸಾಧುಗಳು ಹೇಳಿದ್ದಂತೆ ಮರದ ಕೊಂಬೆಯ ಮೇಲಕ್ಕೆ ಹಾರಿಬಂದ ಪಕ್ಷಿಯು 'ರಾಜನೆ, ಏನು ಕೇಳುತ್ತೀಯೊ, ಕೇಳಿ ಬಿಡು !' ಎಂದಿತು. ಅದು ಮೂರೇ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ಹಾರಿ ಹೋಗುವದು; ಇಲ್ಲವೆ, ಅಲ್ಲಿಯೇ ಪ್ರಾಣವನ್ನು ಬಿಡುವದು– ಎಂದು ಸಾಧುಗಳು ಹೇಳಿದ್ದರು. ಆದರೆ ಅವನ ದುರ್ದೈವದಿಂದ ಆ ಸಮಯಕ್ಕೆ ಸರಿಯಾಗಿ ಅವನಿಗೆ ಹಲ್ಲುನೋವು ಬಲವಾಗಿ ಕಾಣಿಸಿಕೊಂಡಿತು. ಅದರ ಪ್ರಾಬಲ್ಯದಿಂದ ಅವನು ಕೇಳಬೇಕೆಂದಿದ್ದ ಪ್ರಶ್ನೆಯನ್ನು ಕೇಳದೆ 'ಹಲ್ಲುನೋವಿಗೆ ಮದ್ದು ಏನು?' ಎಂದು ಕೇಳಿದನು. ಪಕ್ಷಿಯು 'ಮತ್ತೇನಾದರೂ ಇದ್ದರೆ ಕೇಳು !' ಎಂದು ಕೂಗಿತು. ಎರಡನೆಯ ಸಲವೂ ಮೂರನೆಯ ಸಲವೂ ಅವನು ಹಲ್ಲುನೋವನ್ನು ತಾಳಲಾರದೆ

'ಹಲ್ಲುನೋವಿಗೆ ಮದ್ದೇನು ?' ಎಂದೇ ಕೇಳಿ ಅನಾಯಾಸವಾಗಿ ದೊರೆತಿದ್ದ ಮಹಾಲಾಭವನ್ನು ಕಳೆದುಕೊಂಡುಬಿಟ್ಟನಂತೆ ! ಹೀಗೆಯೇ ನಾವು ಪ್ರತ್ಯಕ್ಷವಾಗಿ ಕಾಣಬರುವ ಆಧಿಭೌತಿಕವಿಷಯಗಳಿಂದಾಗುವ ಪ್ರತ್ಯಕ್ಷಫಲಕ್ಕೇ ಹೆಚ್ಚಿನ ಬೆಲೆಯನ್ನು ಕೊಟ್ಟು ಆಧಿದೈವಿಕವಾದ ಮತ್ತು ಆಧ್ಯಾತ್ಮಿಕವಾದ ವಿಷಯಗಳಲ್ಲಿ ಶ್ರದ್ಧೆಯನ್ನು ಕಳೆದುಕೊಂಡುಬಿಟ್ಟಿರುತ್ತೇವೆ.

ಇಂದ್ರಿಯಗಳಿಂದ ನಾವು ಆಧಿಭೌತಿಕವಿಷಯಗಳ ಜ್ಞಾನವನ್ನು ಮಾತ್ರ ಮಾಡಿಕೊಳ್ಳಬಹುದು. ಆದಮಾತ್ರದಿಂದ ಅತೀಂದ್ರಿಯವಾಗಿರುವ ಆಧಿದೈವಿಕವಾದ ಅಥವಾ ಆಧ್ಯಾತ್ಮಿಕವಾದ ತತ್ತ್ವಗಳು ಇಲ್ಲವೇಇಲ್ಲ–ಎಂದು ತಿಳಿಯುವದು ನಮ್ಮ ಮೌಢ್ಯವನ್ನು ಮಾತ್ರ ಹೊರಗೆಡಹುತ್ತದೆ. ನಮ್ಮ ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ–ಮುಂತಾದವುಗಳು ಇಂದ್ರಿಯಗಳು ಇರುವ ಸ್ಥಾನಗಳೇ ಹೊರತು ಅವೇನೂ ಇಂದ್ರಿಯಗಳಲ್ಲ. ಇಂದ್ರಿಯಗಳು ತಮ್ಮನ್ನು ತಾವೇ ಅರಿಯವು. ಆದ್ದರಿಂದ ಅವೇ ಮೊದಲು ಅತೀಂದ್ರಿಯವಾಗಿರುವ ಆಧ್ಯಾತ್ಮಿಕತತ್ತ್ವಗಳಾಗಿರುತ್ತವೆ. ಅವುಗಳನ್ನು ನಾವು ಕಾಣುವದಕ್ಕೆ ಅವುಗಳಿಗಿಂತ ಒಳಗಿರುವ ಮನಸ್ಸಿನಿಂದಲೇ ಅನುಭವಿಸಿ ತಿಳಿದುಕೊಳ್ಳಬೇಕಾಗಿರುತ್ತದೆ.

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।**
**ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ॥ ಈ. ೩**

ಎಂಬ ಶ್ರುತಿವಚನದಂತೆ ಅಸುರಲೋಕವನ್ನು ಪಡೆದು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿರುವೆವು. 'ಆತ್ಮನೆಲ್ಲಿದ್ದಾನೆ ?' ಎಂಬ ಪ್ರಶ್ನೆಯು 'ಬೆಳಕೆಲ್ಲಿದೆ?' ಎಂಬ ಕುರುಡರ ಪ್ರಶ್ನೆಯಲ್ಲದೆ ಮತ್ತೇನು ? 'ದೇಹವೇ ನಾನು' ಎಂದು ಒಂದುಸಲ, 'ಇಂದ್ರಿಯವೇ ನಾನು' ಎಂದು ಮತ್ತೊಂದುಸಲ, 'ಮನಸ್ಸೇ ನಾನು' ಎಂದು ಇನ್ನೊಂದುಸಲ– ಹೀಗೆ ಸಮಯಕ್ಕೆ ತಕ್ಕಂತೆ ಭಾವಿಸಿಕೊಳ್ಳುತ್ತಾ ಆತ್ಮನೆಂದರೆ ಯಾರು ?–ಎಂಬುದನ್ನೇ ಅರಿತುಕೊಳ್ಳಲಾರದೆ 'ಇದೇ ಆತ್ಮನು' ಎಂದು ಭಾವಿಸಿಕೊಂಡದ್ದನ್ನು ಮತ್ತೆ ಅನಾದರಮಾಡಿ ಮತ್ತೊಂದನ್ನು ಆತ್ಮನು (ನನ್ನ ಸ್ವರೂಪವು) ಎಂದು ಭಾವಿಸಿಕೊಳ್ಳುತ್ತಿರುವದರಿಂದ ನಮಗೆ ಆತ್ಮಹತ್ಯಾದೋಷವು ತಟ್ಟುತ್ತಿರುವದು. ಇದು ಪಾಪದ ಫಲವೇ ಸರಿ.

**ಯೋಽನ್ಯಥಾ ಸನ್ತಮಾತ್ಮಾನಮನ್ಯಥಾ ಪ್ರತಿಪದ್ಯತೇ ।**
**ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥**

ಎಂಬ ಹಿರಿಯರ ನುಡಿಯಂತೆ ಇರುವ ಆತ್ಮನನ್ನು ಅಪಹರಿಸಿದ ಚೋರರಾಗಿ ಮಹಾಪಾಪಿಗಳಾಗಿರುತ್ತೇವೆ.

ಆತ್ಮನನ್ನು ಕಾಣುವದಕ್ಕೆ ಇಂದ್ರಿಯಗಳ ವ್ಯಾಪಾರವನ್ನು ಬಿಟ್ಟು ಮನಸ್ಸಿನೊಳಗೆ ಪ್ರವೇಶಿಸಬೇಕು.

**ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥**

ಗೀ. ೩-೪೨

ಎಂಬ ಭಗವದುಕ್ತಿಯಂತೆ ಅತೀಂದ್ರಿಯವಾಗಿರುವ, ಇಂದ್ರಿಯಗಳಿಗಿಂತಲೂ ಸೂಕ್ಷ್ಮವಾಗಿರುವ, ಮನಸ್ಸನ್ನು ಮೊದಲು ಮುಟ್ಟಿ, ವಿಕಲ್ಪಾತ್ಮಕವಾದ ಮನಸ್ಸಿಗಿಂತಲೂ ಸೂಕ್ಷ್ಮವಾಗಿ ಅದನ್ನು ವ್ಯಾಪಿಸಿಕೊಂಡಿರುವ ನಿಶ್ಚಯಾತ್ಮಕವಾದ ಬುದ್ಧಿಯನ್ನೂ ಮುಟ್ಟಬೇಕು. ಆ ಬಳಿಕ ಆ ಬುದ್ಧಿಯನ್ನು ನೇರವಾಗಿ ಕಾಣುತ್ತಿರುವ ಆತ್ಮನಲ್ಲಿ ನಿಲ್ಲಿಸಬೇಕು.

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ! ಕಾಮರೂಪಂ ದುರಾಸದಮ್**

ಎಂಬಂತೆ ಈ ಬುದ್ಧಿಯನ್ನು ವಿಷಯವನ್ನೂ ವ್ಯಾಪಿಸಿಕೊಂಡಿರುವ ಆತ್ಮನ ವಶದಲ್ಲಿ ಮಾಡಿಕೊಂಡಾಗ ಇಂದ್ರಿಯಮನೋಬುದ್ಧಿಗಳನ್ನಾಶ್ರಯಿಸಿಕೊಂಡಿರುವ ಕಾಮವನ್ನು ಜಯಿಸಿಕೊಳ್ಳಬಹುದು : ಆಗ ನಮ್ಮ ಚಾರ್ವಾಕವಾದವು ಸೋತು ಸುಮ್ಮನಾಗುವದು. ಯಾರು ಹೀಗೆ ಅಧ್ಯಾತ್ಮಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡಿರುವ ಪರಮಾತ್ಮಸ್ವರೂಪವನ್ನು ಕಂಡುಕೊಂಡಿರುವರೋ ಅವರೇ ಜ್ಞಾನಿಗಳು.

ನಾಳಿಗೆ ಬೇಕಾಗಬಹುದಾದ ಅಕ್ಕಿಯನ್ನು ಈ ದಿನವೇ ತಂದಿಟ್ಟುಕೊಳ್ಳುವಂತೆಯೂ ಹಬ್ಬಹರಿದಿನಗಳಿಗೆ ಬೇಕಾಗಬಹುದಾದ ದಿನಸುಗಳನ್ನು ಕೆಲವುದಿನ ಮುಂಚಿತವಾಗಿಯೇ ಕೊಂಡಿಟ್ಟುಕೊಳ್ಳುವಂತೆಯೂ ಪರಲೋಕಕ್ಕೆ ಸಾಧನವಾದ ವಿಚಾರಗಳನ್ನು ಈಗಲೇ ಮಾಡಿಕೊಳ್ಳುವದು ಬುದ್ಧಿವಂತರ ಲಕ್ಷಣ. ದೇವತೆಗಳು, ಪಿತೃಗಳು, ಋಷಿಗಳು– ಮುಂತಾದವರು ಈಗಲೂ ಇರುತ್ತಾರೆ; ಧರ್ಮದ ಅನುಷ್ಠಾನದಿಂದ ಅವರ ಅನುಗ್ರಹಕ್ಕೆ ಪಾತ್ರರಾಗಬಹುದು– ಎಂದು ಬೋಧಿಸುವ ಶಾಸ್ತ್ರದಲ್ಲಿ ಶ್ರದ್ಧೆಯಿರುವದು ಅವಶ್ಯ. 'ಸ್ವಾಧ್ಯಾಯಾದಿಷ್ಟದೇವತಾಸಂಪ್ರಯೋಗಃ' ಎಂಬ ವಚನದಲ್ಲಿ ಮಂತ್ರಜಪಾದಿಗಳಿಂದ ಇಷ್ಟದೇವತೆಯನ್ನು ಕಾಣಬಹುದು ಎಂದು ಸೂಕ್ಷ್ಮದರ್ಶಿಗಳು ಹೇಳುತ್ತಿರುತ್ತಾರೆ. ನೆಲದಮೇಲಿನ ಲಕ್ಷಣವನ್ನು ನೋಡಿ 'ಇಲ್ಲಿ ಚಿನ್ನದ ಗಣಿಯಿದೆ'– ಎಂದು ಭೂಗರ್ಭಜ್ಞಾನಿಗಳು ಹೇಳಿದರೆ ಆಳವಾಗಿ ಭೂಮಿಯನ್ನು ತೋಡಿನೋಡುವದಕ್ಕೆ ಜನರು ಪ್ರಯತ್ನಿಸುತ್ತಾರೆ. ಆಪ್ತೋಕ್ತಿಯಲ್ಲಿ ಶ್ರದ್ಧೆಯಿಟ್ಟು ದೇವತೆಗಳ ಅನುಗ್ರಹಕ್ಕೆ ಪಾತ್ರನಾಗಬೇಕೆಂದು ಪ್ರಯತ್ನಿಸುವದೂ ಹಾಗೇ ಅಲ್ಲವೆ ? ದೇವತೆಗಳನ್ನು ಉಪಾಸನೆ

ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾಗುವವರು ಈಗಲೂ ಇರುತ್ತಾರೆ; ದೇವತೆಗಳಿಗೆ ಅಪ್ರತಿಹತವಾದ ಶಕ್ತಿವಿಶೇಷಗಳುಂಟೆಂದೂ ಬಲ್ಲವರು ಹೇಳುತ್ತಿರುತ್ತಾರೆ. ಋಷಿಗಳು ಅತೀಂದ್ರಿಯಜ್ಞಾನದಿಂದ ಮಂತ್ರಗಳನ್ನೂ ದೇವತೆಗಳನ್ನೂ ಅರಿತುಕೊಂಡಿರುತ್ತಾರೆ; ದೇವತೆಗಳಿಗೆಲ್ಲ ದೇವತೆಯಾಗಿರುವ, ಋಷಿಗಳಿಗೆಲ್ಲರಿಗೂ ಅನುಗ್ರಹವನ್ನು ಮಾಡುತ್ತಿರುವ ಸರ್ವಜ್ಞನಾದ ಭಗವಂತನು ನಮ್ಮೆಲ್ಲರ ಆತ್ಮನೆಂಬುದನ್ನು ಅನುಭವದಿಂದ ಕಂಡುಕೊಂಡಿರುತ್ತಾರೆ. ಆದರೆ ಇದನ್ನೆಲ್ಲ ಕಂಡುಕೊಳ್ಳುವದಕ್ಕೆ ಶ್ರದ್ಧೆಯೂ ಇಂದ್ರಿಯಸಂಯಮವೂ ತತ್ಪರತೆಯಿಂದ ಸಾಧನ ಮಾಡುವ ಉತ್ಸಾಹವೂ ಅವಶ್ಯ. ನಾವು ಎಂದಿಗೂ ಕಾಣುವ ಸಂಭವವಿಲ್ಲದ ಅತ್ಯಂತ ದೂರಪ್ರದೇಶಗಳಿಗೂ ಅಂಚೆಇಲಾಖೆಯವರಲ್ಲಿರುವ ಶ್ರದ್ಧೆಯಿಂದ ಕಾಗದಪತ್ರವ್ಯವಹಾರವನ್ನು ಮಾಡುವದಕ್ಕೆ ಸಿದ್ಧರಾಗಿರುತ್ತೇವೆ. ಹಾಗೆಯೇ ಅತೀಂದ್ರಿಯಜ್ಞಾನಿಗಳಲ್ಲಿರುವ ವಿಶ್ವಾಸದಿಂದ ಪಿತೃಶ್ರಾದ್ಧಾದಿಗಳನ್ನು ಮಾಡುವದಕ್ಕೆ ಹೊರಟಿರುವವರನ್ನು ಅವಿವೇಕಿಗಳೆನ್ನುವದಕ್ಕೆ ಬರುವದಿಲ್ಲ.

ಗೋಂದಾವಳಿಯ ಶ್ರೀಬ್ರಹ್ಮಚೈತನ್ಯಸದ್ಗುರುಮಹಾರಾಜರವರು ತಾವು ಇದ್ದಲ್ಲಿಯೇ ಇದ್ದುಕೊಂಡು ದೂರದಲ್ಲಿ ಭಕ್ತಿಯಿಂದ ಪೂಜಿಸುತ್ತಿದ್ದವರಿಗೆ ದರ್ಶನವನ್ನು ಕೊಡುತ್ತಿದ್ದರೆಂಬುದು ನಮ್ಮ ದೇಶದಲ್ಲಿಯೂ ಬಹುಜನರಿಗೆ ತಿಳಿದುಬಂದಿರುತ್ತದೆ. ರಾಣಿಬೆನ್ನೂರುಕಡೆಯಲ್ಲಿ ಒಬ್ಬ ಹುಡುಗಿಗೆ ಅವರು ದರ್ಶನವನ್ನು ಕೊಟ್ಟು ಅನುಗ್ರಹಿಸಿದ ತೆಂಗಿನಕಾಯಿಯನ್ನು ಆಕೆಯು ತನ್ನ ಅತ್ತೆಗೆ ತೋರಿಸಿದಮೇಲೂ ಅತ್ತೆಯು 'ಇದೆಲ್ಲ ಕಳ್ಳಾಟ' ಎಂದು ಹಾಸ್ಯಮಾಡಿದಳು; ಮುಂದೆ ಆ ಅತ್ತೆಗೇ ಮಹಾರಾಜರವರು ದರ್ಶನವನ್ನು ಕೊಟ್ಟಬಳಿಕ ಸೊಸೆಯ ಭಕ್ತಿಯ ಆಳವು ಆಕೆಗೆ ನಿದರ್ಶನವಾಯಿತು—ಎಂದು ಆ ಪ್ರಾಂತಕ್ಕೆಹೋದಾಗ ಜನರು ಆಡಿಕೊಂಡದ್ದನ್ನು ನಾನು ಕೇಳಿರುತ್ತೇನೆ. ದೊಡ್ಡಬಳ್ಳಾಪುರದ ತಾಲ್ಲೂಕಿನ ದೊಡ್ಡಹೆಜ್ಜಾಜಿಯಲ್ಲಿದ್ದ ಸೀತಾರಾಮಶಾಸ್ತ್ರಿಗಳೆಂಬವರಿಗೆ ಆ ಗುರುವರ್ಯರು ಸ್ವಪ್ನದಲ್ಲಿ ದರ್ಶನವನ್ನು ಕೊಟ್ಟಿದ್ದಲ್ಲದೆ ತ್ರಯೋದಶಾಕ್ಷರಿಯ ತಾರಕಮಂತ್ರವನ್ನೂ ಅನುಗ್ರಹಿಸಿದ್ದರು. ಸೀತಾರಾಮಶಾಸ್ತ್ರಿಗಳು ತಿಪಟೂರಿಗೆ ಹೋದಾಗ ಅಲ್ಲಿ ಭಕ್ತ ಸೂರಪ್ಪನವರಲ್ಲಿದ್ದ ಗುರುಮಹಾರಾಜರವರ ಭಾವಚಿತ್ರವನ್ನು ಕಂಡು 'ಇವರೇ ನನ್ನ ಕನಸಿನಲ್ಲಿ ಬಂದಿದ್ದರು' ಎಂದು ಗುರುತಿಸಿದರು! ತಮಗೆ ಅವರು ಅನುಗ್ರಹಿಸಿದ್ದ ಮಂತ್ರವನ್ನು ಸೂರಪ್ಪನವರಿಗೆ ಹೇಳಲು ಅವರು ಈ ಅದ್ಭುತಲೀಲೆಯ ವೃತ್ತಾಂತವನ್ನು ಕೇಳಿ ಆಶ್ಚರ್ಯಪಟ್ಟರಂತೆ. ನನಗೆ ಸೀತಾರಾಮಶಾಸ್ತ್ರಿಗಳೂ ಸೂರಪ್ಪನವರೂ ಬಹಳ ಪರಿಚಿತರಾಗಿದ್ದ ಸಾತ್ತ್ವಿಕರು. ಅವರೇ ಈ ವೃತ್ತಾಂತವನ್ನು ನನಗೆ ಹೇಳಿದ್ದರು. ಹೀಗಿರುವಲ್ಲಿ ಅಮಾನುಷಶಕ್ತಿಯುಳ್ಳ ದೇವತೆಗಳೂ ಋಷಿಗಳೂ ಪಿತೃಗಳೂ ಶ್ರದ್ಧಾ

ನಂತರ ಅರ್ಚನೆಯಿಂದ ತೃಪ್ತರಾಗಿ ವರಪ್ರದಾನಮಾಡುವರೆಂದು ನಂಬುವದಕ್ಕೆ ಯಾವ ಸಂಶಯವೂ ಇರುವದಿಲ್ಲ.

ವಿದ್ಯೆಯಿಂದ (ಅಂದರೆ) ಉಪಾಸನೆಯಿಂದ ದೇವಲೋಕವನ್ನೂ, ಕರ್ಮದಿಂದ ಪಿತೃಲೋಕವನ್ನೂ ಪುತ್ರನಿಂದ ಮನುಷ್ಯಲೋಕವನ್ನೂ ಜಯಿಸುತ್ತಾನೆ—ಎಂದು ಶ್ರುತಿಯು ಹೇಳುತ್ತದೆ. ಕರ್ಮಗಳಿಗೆ ಕಾಲಾಂತರದಲ್ಲಿ ಫಲವಾಗುವದಲ್ಲದೆ ಅತ್ಯುತ್ಕಟವಾದ ಪುಣ್ಯಪಾಪಗಳಿಗೆ ಈ ಲೋಕದಲ್ಲಿಯೇ ಫಲವು ದೊರೆಯುವದು—ಎಂದು ಸ್ಮೃತಿಯು ಹೇಳುತ್ತದೆ. ಯೌವನದಲ್ಲಿ ಸ್ವೇಚ್ಛೆಯಿಂದ ನಡೆದವರು ವಾರ್ಧಕದಲ್ಲಿ ಅದರ ಫಲವನ್ನು ಅನುಭವಿಸುವದನ್ನು ನಾವು ಕಣ್ಣೆದುರಿಗೇ ನೋಡುತ್ತಿಲ್ಲವೆ ?

ಹೀಗಿರುವದರಿಂದ ಕರ್ಮಗಳಿಗೆ ಈಗಲೋ ಕಾಲಾಂತರದಲ್ಲಿಯೋ ತಕ್ಕ ಫಲವು ಅವಶ್ಯವಾಗಿ ಆಗುವದು. ದೇವತಾದಿಗಳಲ್ಲಿ ಭಕ್ತಿಯಿರಬೇಕು; ಶ್ರದ್ಧಾಭಕ್ತಿಗಳಿಗೆ ಫಲವುಂಟೆಂದು ನಂಬಬೇಕು; ದೇವತೆಗಳು, ಪಿತೃಗಳು, ಋಷಿಗಳು—ಎಲ್ಲರಿಗೂ ಹೆಚ್ಚಿನವನಾದ ಪರಮಾತ್ಮನು ಇರುತ್ತಾನೆ. 'ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ। ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥' (ಗೀ. ೧೦–೨)ನನ್ನ ಮೂಲವನ್ನೂ ಹೆಚ್ಚುಗಾರಿಕೆಯನ್ನೂ ದೇವತೆಗಳಾಗಲಿ ಮಹರ್ಷಿಗಳಾಗಲಿ ಅರಿಯಲಾರರು: ಏಕೆಂದರೆ ಅವರಿಗೆ ನಾನೇ ಆದಿಯು. 'ಯೇಽಪ್ಯನ್ಯದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ। ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥ ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ। ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ। ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ। ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ ಮಾಮ್ ॥' (೯–೨೩, ೨೪, ೨೫) ಬೇರೆಯ ದೇವತೆಗಳನ್ನು ಕುರಿತು ಯಾಜ್ಞಾದಿಗಳನ್ನು ಮಾಡುವವರೂ ದೇವತೆಗಳ ಆತ್ಮನಾದ ನನ್ನನ್ನೇ ಪೂಜಿಸುತ್ತಿರುತ್ತಾರೆ; ಆದರೆ ಅವರಿಗೆ ಇದು ಗೊತ್ತಿರುವದಿಲ್ಲ. ಆದರಿಂದ ಅವರಿಗೆ ಮಹಾಫಲವು ದೊರಕದೆ ಇರುತ್ತದೆ. ನಾನೇ ನಿಜವಾಗಿ ಸರ್ವಯಜ್ಞಗಳಿಗೂ ಭೋಕ್ತೃವು, ಪ್ರಭುವು. ದೇವತೆಗಳನ್ನು ಪೂಜಿಸುವವರು ದೇವಭಾವವನ್ನು ಪಡೆಯುವರು, ಪಿತೃಗಳನ್ನು ಪೂಜಿಸುವವರು ಪಿತೃಗಳನ್ನು ಪಡೆಯುವರು: ಭೂತಗಳನ್ನು ಪೂಜಿಸುವವರು ಭೂತಗಳನ್ನೇ ಸೇರುವರು: ಅವರೆಲ್ಲರ ಆತ್ಮನಾಗಿರುವ ನನ್ನನ್ನು ಪೂಜಿಸುವವರು ನನ್ನನ್ನೇ ಸೇರುತ್ತಾರೆ— ಎಂದು ಮತ್ತೊಂದು ಕಡೆಯಲ್ಲಿ ಕಂಠೋಕ್ತವಾಗಿ ಭಗವಂತನು ಹೇಳಿರುತ್ತಾನೆ. ಆದ್ದರಿಂದ ದೇವತಾಪಿತ್ರಾದಿಗಳ ಪೂಜೆಯಿಂದ ಅವಶ್ಯವಾಗಿ ಫಲವಾಗುವದೆಂದು ನಂಬಬೇಕು. ಪಿತೃಗಳಿಗೆ ಪಿಂಡವನ್ನು ಹಾಕುವ ಬದಲು ಬಡವರಿಗೆ ಅನ್ನಹಾಕುವದು ಎಷ್ಟೋ

ಉತ್ತಮ; ಏಕೆಂದರೆ ಅಲ್ಲಿ ಫಲವು ಪ್ರತ್ಯಕ್ಷವಾಗಿರುತ್ತದೆ– ಎಂಬ ನಾಸ್ತಿಕವಾದವನ್ನು ಹೂಡುವವರು, ಊಟವನ್ನು ಮಾಡಿದರೆ ಅದು ಮಾಂಸರಕ್ತಾದಿಗಳಾಗಿ ಆಗುತ್ತದೆ ಎಂಬುದು ಪ್ರತ್ಯಕ್ಷವಾಗಿ ಕಂಡಿಲ್ಲವಲ್ಲ! –ಎಂದುಕೊಂಡು ಊಟವನ್ನೇನೂ ಬಿಡುವದಿಲ್ಲವಷ್ಟೆ ?

ಆದ್ದರಿಂದ ಎಲ್ಲಾ ಸಂದರ್ಭಗಳಲ್ಲಿಯೂ ಶ್ರದ್ಧೆಯು ಫಲಕಾರಿಯಾಗಿರುತ್ತದೆ. ಮನುಷ್ಯನಿಗೆ ಶ್ರದ್ಧಾನುಸಾರವಾಗಿ ಫಲವು ಅವಶ್ಯವಾಗಿ ಆಗುತ್ತದೆ ಎಂದು ನಾವು ಧಾರಾಳವಾಗಿ ನಂಬಬಹುದು.

## ೫೪. ಸಾಂಖ್ಯಯೋಗಾದಿಸಾಧನಗಳು

(27—9—69)

ನಮ್ಮೆಲ್ಲರಿಗೂ ಸ್ವಾಭಾವಿಕವಾಗಿಯೇ, ಯಾರೊಬ್ಬರೂ ಹೇಳಿಕೊಡದೆಯೇ ಅನಾತ್ಮವಾಗಿರುವ ಶರೀರೇಂದ್ರಿಯಮನೋಬುದ್ಧಿಗಳಲ್ಲಿ ನಾನು ಎಂಬ ಅಭಿಮಾನವು ಇದ್ದುಕೊಂಡಿರುತ್ತದೆ. ಇದಕ್ಕೆ ಅವಿದ್ಯೆ ಎಂದು ಹೆಸರು. ಈ ಅವಿದ್ಯೆಯನ್ನು ಕಳೆದುಕೊಳ್ಳುವದಕ್ಕೆ ಎರಡು ಮಾರ್ಗವುಂಟು. ಸಾಂಖ್ಯವು ಮೊದಲನೆಯದು, ಯೋಗವು ಎರಡನೆಯದು. ಸಾಂಖ್ಯರು ನೇರಾಗಿ ಆತ್ಮನನ್ನೇ ಹಿಡಿದು ವಿಚಾರಮಾಡಿ ತತ್ತ್ವಜ್ಞಾನವನ್ನು ಸಂಪಾದಿಸಿಕೊಂಡಿರುತ್ತಾರೆ.

ನಮ್ಮ ನೆರಳು ನಾವು ನಿಂತಿದ್ದರೆ ನಿಂತಿರುವಂತೆ, ಕೂತರೆ ಕೂರುವಂತೆ, ಓಡಿದರೆ ಓಡುವಂತೆ ಕಾಣುತ್ತಿರುತ್ತದೆ ; ಆದರೂ ಅದೇನೂ ವಸ್ತುವಲ್ಲ ಎಂದು ನಾವು ತಿಳಿಯುವಂತೆಯೇ ಜ್ಞಾನಿಗಳು ಅನಾತ್ಮವು ತಾನೇ ಒಂದು ತತ್ತ್ವವಾಗಿರುವಂತೆ ತಟ್ಟನೆ ಕಂಡರೂ ಅದರ ತಿರುಳನ್ನು ಪರೀಕ್ಷಿಸಿದರೆ ಅದೇನೂ ವಸ್ತುವಲ್ಲ ಎಂದು ಗೊತ್ತಾಗುತ್ತದೆ–ಎನ್ನುತ್ತಾರೆ. ಇದೇ ಹೆಚ್ಚಿನ ವೈದಿಕಸಾಂಖ್ಯ. ಕಪಿಲರ ಸಾಂಖ್ಯದಲ್ಲಿ ಹೀಗಿಲ್ಲ; ಪ್ರಕೃತಿಯೇ ದೇಹ, ಇಂದ್ರಿಯ, ಮನಸ್ಸು–ಮುಂತಾದ ರೂಪದಿಂದ ಪರಿಣಮಿಸಿರುವದರಿಂದ ಅವೂ ಸತ್ಯವು. ಪ್ರಕೃತಿಗಿಂತ ಅತಿರಿಕ್ತವಾಗಿ ಪುರುಷರು ಇರುತ್ತಾರೆ. ಪ್ರಕೃತಿಯನ್ನೂ ಪುರುಷನನ್ನೂ ವಿಂಗಡಿಸಿ ತಿಳಿದುಕೊಳ್ಳದೆ ಇರುವ ಅವಿವೇಕವೇ ಜೀವರಿಗೆ ಬಂಧಕಾರಣವಾಗಿರುತ್ತದೆ. ಅವುಗಳೆರಡನ್ನೂ ಬಿಡಿಸಿ ಪ್ರಕೃತಿಯೇ ಕರ್ತೃ ; ಪುರುಷನು ಅವಿವೇಕದಿಂದ

ಭೋಕ್ತೃವಾಗಿರುತ್ತಾನೆ–ಎಂದು ಅರಿತುಕೊಂಡರೆ ಪುರುಷನು ತನ್ನ ಸ್ವರೂಪದಲ್ಲಿ ನಿಲ್ಲುತ್ತಾನೆ–ಎಂಬುದು ಸಾಂಖ್ಯರ ಸಿದ್ಧಾಂತ. ಆದರೆ ಪುರುಷರು ಅನೇಕರಲ್ಲ, ಪ್ರಕೃತಿಯು ಸತ್ಯವೂ ಅಲ್ಲ. ಅಸತ್ಯವಾಗಿರುವ ಪ್ರಕೃತಿಯ ಧರ್ಮಗಳನ್ನು ಸತ್ಯವಾಗಿರುವ ಪುರುಷನಲ್ಲಿಯೂ ಪುರುಷನ ಧರ್ಮಗಳನ್ನು ಪ್ರಕೃತಿಯಲ್ಲಿಯೂ ಹುಟ್ಟುಗಟ್ಟಿರುವದರಿಂದ ಪುರುಷನು ಅನೇಕನು; ಅವನಿಗೆ ರಾಗದ್ವೇಷಾದಿಗಳಿಂದ ಕೂಡಿದ ಕರ್ತೃತ್ವಭೋಕ್ತೃತ್ವಗಳೂ ಜನ್ಮಾಂತರವೂ ಲೋಕಾಂತರದಲ್ಲಿ ಫಲಭೋಗವೂ ಅವಿದ್ಯೆಯಿಂದ ತೋರುತ್ತಿರುವವು. ಶಾಸ್ತ್ರದಲ್ಲಿ ಹೇಳಿರುವಂತೆ ಸರಿಯಾಗಿ ತತ್ತ್ವನಿರೂಪಣೆಯನ್ನು ಮಾಡಿದರೆ ಪುರುಷನೊಬ್ಬನೇ ಪರಮಾರ್ಥವೆಂದೂ ಅವನು ನಿತ್ಯಶುದ್ಧಬುದ್ಧಮುಕ್ತಸ್ವಭಾವದವನೆಂದೂ ಗೊತ್ತಾಗುವದು–ಎಂಬುದು ವೇದಾಂತಸಿದ್ಧಾಂತ. ಇದೇ ನಿಜವಾದ ಸಾಂಖ್ಯವೆಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ.

ಇನ್ನು ಯೋಗದ ವಿಚಾರ: ಕಾಪಿಲಸಾಂಖ್ಯರು ಈಶ್ವರನನ್ನು ಒಪ್ಪುವದಿಲ್ಲ; ಪತಂಜಲಿಗಳೇ ಮುಂತಾದ ಸೇಶ್ವರಸಾಂಖ್ಯರು ಒಪ್ಪುತ್ತಾರೆ. ಈ ಹೆಚ್ಚುಕಡಿಮೆಯನ್ನು ಬಿಟ್ಟರೆ ಕಾಪಿಲಸಾಂಖ್ಯರಿಗೂ ಪಾತಂಜಲಯೋಗಿಗಳಿಗೂ ಬೇರಾವ ತಾರತಮ್ಯವೂ ಇರುವದಿಲ್ಲ. ಇಬ್ಬರಿಗೂ ಪ್ರಕೃತಿಪುರುಷರುಗಳು ಸತ್ಯ. ಇಬ್ಬರಿಗೂ ಪ್ರಕೃತಿಪುರುಷವಿವೇಕದಿಂದಲೇ ಮೋಕ್ಷ. ಆದರೆ ಇದನ್ನು ಸಿದ್ಧಪಡಿಸಿಕೊಳ್ಳುವ ಪ್ರಕಾರವು ಆ ದರ್ಶನಗಳಲ್ಲಿ ಬೇರೆಬೇರೆಯಾಗಿರುತ್ತದೆ. ಕಾಪಿಲರು ವಿಚಾರಪ್ರಧಾನರಾದರೆ ಪಾತಂಜಲರು ಯೋಗಪ್ರಧಾನರು. ಯೋಗದರ್ಶನದವರು ಚಿತ್ತವೃತ್ತಿಯ ನಿರೋಧದಿಂದ ಪ್ರಕೃತಿಯನ್ನು ವಿಂಗಡಿಸಿಕೊಳ್ಳುತ್ತಾರೆ. ಚಿತ್ತವೃತ್ತಿನಿರೋಧದ ಫಲವಾಗಿ ಸಮಾಧಿಯಲ್ಲಿ ಪುರುಷನು ತನ್ನ ಸ್ವರೂಪದಲ್ಲಿ ನಿಂತು ಪ್ರಕೃತಿಯಿಂದಾಗಿದ್ದ ದುಃಖವನ್ನು ಬಿಡಿಸಿಕೊಳ್ಳುತ್ತಾನೆ–ಎಂದು ಅವರು ಹೇಳುತ್ತಾರೆ.

ವೈದಿಕಯೋಗಮಾರ್ಗವು ಇದಕ್ಕಿಂತ ವಿಲಕ್ಷಣವಾಗಿರುತ್ತದೆ. ಶರೀರಾದಿಗಳು ಬಾಲ್ಯಾದ್ಯವಸ್ಥೆಗಳನ್ನು ಹೊಂದುತ್ತಾ ಬೇರೆಬೇರೆಯಾದ ರೂಪವನ್ನು ತಾಳುತ್ತಿರುವವು. ನಮ್ಮ ಚಿತ್ತವು ಆಯಾ ಅನಾತ್ಮದಲ್ಲಿ ತಾದಾತ್ಮ್ಯಭಾವವನ್ನು ಹೊಂದಿ "ನಾನೇ ಈ ಅವಸ್ಥೆಗಳನ್ನು ಪಡೆಯುತ್ತಿರುವೆನು" ಎಂಬ ಭ್ರಾಂತಿಯನ್ನು ಪುರುಷನಿಗೆ ಉಂಟುಮಾಡುತ್ತಿರುವದು. ಆದ್ದರಿಂದ ವಿವೇಕಿಯಾದವನು ವೈರಾಗ್ಯದಿಂದಲೂ ಅಭ್ಯಾಸದಿಂದಲೂ ನಿಜವಾದ ಆತ್ಮನಲ್ಲಿ ಆತ್ಮಭಾವವನ್ನುಂಟುಮಾಡಿಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡಬೇಕು. ಮೊದಲಲ್ಲಿ ಕರ್ಮಯೋಗವನ್ನು ಮಾಡಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಳ್ಳಬೇಕು, ಬಳಿಕ ಯೋಗಾರೂಢನಾಗುವದಕ್ಕೆಂದು ಶಮಾದಿಗಳನ್ನು ಸಾಧನೆಮಾಡಬೇಕು.

ದೇಹಾದಿಗಳಲ್ಲಿರುವ ಆತ್ಮಬುದ್ಧಿಯನ್ನು ತಪ್ಪಿಸಿಕೊಳ್ಳುವದಕ್ಕೆಂದೇ ದೇವತೆಗಳು, ಋಷಿಗಳು, ಗುರುಹಿರಿಯರು–ಮುಂತಾದವರಲ್ಲಿ ಶ್ರದ್ಧಾಭಕ್ತಿಯನ್ನಿಟ್ಟುಕೊಳ್ಳುವದು– ಮುಂತಾದ ಸಾಧನಗಳನ್ನು ಶಾಸ್ತ್ರದಲ್ಲಿ ಉಪದೇಶಿಸಿರುತ್ತದೆ. ಬೈಸಿಕಲ್, ಮೋಟಾರ್, ರೈಲ್ವೆಟ್ರೇನ್, ಸ್ಟೀಮ್‌ಬೋಟ್ (ದೋಣಿ, ಹಡಗು ಮುಂತಾದವಷ್ಟು) ಜಹಜು– ಇವುಗಳು ಎಲ್ಲವೂ ಪ್ರಯಾಣಕ್ಕೆ ಸಾಧನಗಳೇ ಆಗಿದ್ದರೂ ಒಂದಕ್ಕಿಂತ ಒಂದು ವೇಗವಾಗಿ ಹೋಗುವ ಸಾಧನಗಳಾಗಿರುತ್ತವೆ. ಕಾಲುನಡಿಗೆಯುಕೂಡ ಮೆಲ್ಲಗೆ ನಡೆದುಹೋಗುವ ಸಾಧನವೇ ಆಗಿರುತ್ತದೆ. ಆದರೂ ವಾಯುವಿಮಾನವು ಇವೆಲ್ಲಕ್ಕಿಂತಲೂ ವೇಗವಾಗಿ ಹೋಗುತ್ತದೆಯಲ್ಲವೆ? ಇದರಂತೆ ಸಾಂಖ್ಯವು ನೇರಾಗಿ ಗುರಿಯನ್ನು ಮುಟ್ಟುವದಕ್ಕೆ ಸಾಧನವಾಗಿದ್ದರೂ ಯೋಗವು ಸ್ವಲ್ಪ ತಡವಾಗಿ ಅದೇ ಗುರಿಯನ್ನು ಮುಟ್ಟುವದಕ್ಕೆ ಸಾಧನವಾಗಿರುತ್ತದೆ.

ಪ್ರಕೃತದಲ್ಲಿ ಯೋಗಬುದ್ಧಿಯನ್ನು ಆಶ್ರಯಿಸಿರುವ ಸಾಧಕರು ಸಾಂಖ್ಯರಂತೆ ಆತ್ಮನಲ್ಲಿ ಆಗಿರುವ ಅನಾತ್ಮಾಧ್ಯಾಸವನ್ನು ನೇರಾಗಿ ವಿಚಾರದಿಂದ ಕಳೆದುಕೊಳ್ಳುವದಕ್ಕೆ ಬದಲಾಗಿ ವೈರಾಗ್ಯಾಭ್ಯಾಸಗಳಿಂದ ಇಂದ್ರಿಯಾದಿಗಳನ್ನು ಒಂದೊಂದಾಗಿ ಬಿಡಿಸಿಕೊಳ್ಳುವದಕ್ಕೆ ಪ್ರಯತ್ನಿಸುತ್ತಾರೆ. ಮನಸ್ಸು ಎತ್ತೆತ್ತ ಚಲಿಸುವದೋ ಆಯಾ ವಿಷಯದಿಂದ ಹಿಂದಕ್ಕೆಳೆದುಕೊಂಡು ಆತ್ಮನಲ್ಲಿಯೇ ಮನಸ್ಸನ್ನಿಟ್ಟು ಮತ್ತೇನನ್ನೂ ಚಿಂತಿಸದೆ ಇದ್ದರೆ, ಮನಸ್ಸು ಪರಮಾತ್ಮನಲ್ಲಿಯೇ ಕರಗಿಹೋಗಿಬಿಡುವದು. ಪಾತಂಜಲಯೋಗದಲ್ಲಿ ಚಿತ್ತವು ಬೇರೆಯಾಗಿ ತಾನೂ ಉಳಿದುಕೊಳ್ಳುವದು; ಆದರೆ ಇಲ್ಲಿ ಪ್ರತಿಬಿಂಬವು ಬಿಂಬದಲ್ಲಿ ಒಂದಾಗುವಂತೆ ಪರಮಾತ್ಮನಲ್ಲಿಯೇ ಒಂದಾಗಿ ಎಲ್ಲರ ಆತ್ಮನೂ ಒಬ್ಬನೇ ಎಂಬ ಬುದ್ಧಿ ಉಂಟಾಗಿಬಿಡುವದು.

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ॥** ಗೀ. ೬–೨೯

ಎಂಬ ಗೀತೋಕ್ತಿಯಂತೆ ಯೋಗಿಯಾದವನು ತನ್ನ ಆತ್ಮನೇ ಎಲ್ಲರಿಗೂ ಆತ್ಮನು; ಆ ಆತ್ಮನು ಎಲ್ಲಾ ಪ್ರಾಣಿಗಳೊಳಗೆ ಇರುವಂತೆ ತೋರುತ್ತಿದ್ದರೂ ಆ ಆತ್ಮನನ್ನು ಆಧಾರವಾಗಿಟ್ಟುಕೊಂಡೇ ಎಲ್ಲಾ ಪ್ರಾಣಿಗಳೂ ತಮ್ಮತಮ್ಮ ವ್ಯಾಪಾರವನ್ನು ಮಾಡುತ್ತಿರುವವು– ಎಂಬುದನ್ನು ಕಂಡುಕೊಳ್ಳುವನು.

ಯೋಗಿಗಳು ಕಂಡುಕೊಳ್ಳುವ ಈ ಆತ್ಮನು ನಾವುಗಳು ಒಬ್ಬೊಬ್ಬರೂ 'ನಾನು, ನಾನು' ಎಂದುಕೊಳ್ಳುತ್ತಿರುವ ವ್ಯಕ್ತಿಯಾದ ಆತ್ಮನಲ್ಲ.

ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥

ಗೀ. ೧೩-೨೨

ಎಂದಿರುವಂತೆ ಇವನು ಎಲ್ಲಕ್ಕೂ ಉಪದ್ರಷ್ಟೃ; ಎಂದರೆ ಸಮೀಪದಲ್ಲಿದ್ದು ಎಲ್ಲವನ್ನೂ ನೋಡುತ್ತಿರುವ ಸಾಕ್ಷಿಯು. ಅನುಮಂತೃ, ಎಂದರೆ ಕಾರ್ಯಕರಣಗಳು ತಮ್ಮ ತಮ್ಮ ವ್ಯಾಪಾರವನ್ನು ಮಾಡುತ್ತಿರುವಲ್ಲಿ ಅವುಗಳಿಗೆ ಅನುಕೂಲವಾಗಿ ತಾನೂ ಮಾಡುತ್ತಿರುವಂತೆ ಕಾಣುವ ಉದಾಸೀನಪುರುಷನು. ಭರ್ತೃ, ಎಂದರೆ ದೇಹೇಂದ್ರಿಯಾದಿಗಳು ತಮ್ಮ ತಮ್ಮ ಸ್ವರೂಪವನ್ನು ಧರಿಸಿರುವುದಕ್ಕೆ ಆಧಾರನಾಗಿರುವವನು. ಭೋಕ್ತೃ, ಎಂದರೆ ಸುಖದುಃಖಮೋಹಾತ್ಮಕವಾದ ಪ್ರತ್ಯಯಗಳು ಯಾವನ ಚಿದಾಭಾಸದಿಂದೊಡಗೂಡಿ ದೇಹದೇಹಿಗಳಾಗಿ ಕಾಣುತ್ತವೋ ಅಂಥ ಚೈತನ್ಯದಿಂದ ಎಲ್ಲವನ್ನೂ ವ್ಯಾಪಿಸಿಕೊಂಡಿರುವಾತನು. ಮಹೇಶ್ವರನು, ಎಂದರೆ ಎಲ್ಲಕ್ಕೂ ಆತ್ಮನಾಗಿ ಸ್ವತಂತ್ರನಾಗಿರುವವನು. ದೇಹಾದಿಗಳಾಗಿ ಬುದ್ಧ್ಯಂತವಾಗಿರುವ ಅನಾತ್ಮಗಳು ಕಲ್ಪಿತಾತ್ಮಗಳಾಗಿರುವಂತೆ ಈ ಆತ್ಮನಲ್ಲ. ಪರಮಾತ್ಮನೆಂದರೆ ನಿಜವಾಗಿಯೇ ಆತ್ಮನಾಗಿರುವವನು; ಇವನೇ ಎಲ್ಲಕ್ಕಿಂತಲೂ ಸೂಕ್ಷ್ಮನಾಗಿ ಅವ್ಯಕ್ತಕ್ಕಿಂತಲೂ ಸೂಕ್ಷ್ಮನಾಗಿ ಪರನಾಗಿರುವ ಪುರುಷನು. ಯೋಗದಿಂದ ಇಂಥ ಆತ್ಮಸ್ವರೂಪವನ್ನು ಅನುಭವಕ್ಕೆ ತಂದುಕೊಳ್ಳುವನು. ಪಟ್ಟಣಕ್ಕೆ ನಡೆದುಕೊಂಡು ಬಂದವನೂ ಅಶ್ವದ ಗಾಡಿಯಿಂದ ಹೋದವನೂ ರೈಲುಮಾರ್ಗದಿಂದ ಹೋದವನೂ ಅದೇ ಮಾರ್ಗಕ್ಕೆ ಬರುವಂತೆ ಸಾಂಖ್ಯ, ಯೋಗ— ಈ ಎರಡು ಮಾರ್ಗಗಳಿಂದಲೂ ಅದೇ ಆತ್ಮನನ್ನೇ ಮುಟ್ಟುವದಾಗಿದೆ. ಗೀತೆಯ ಎಂಟನೆಯ ಅಧ್ಯಾಯದಲ್ಲಿ ಹೇಳಿರುವಂತೆ ಭಾವನಾಮಾರ್ಗದಿಂದ ಆತ್ಮಧ್ಯಾನವನ್ನು ಮಾಡಿಕೊಂಡವರು ದೇಶಾಂತರದಲ್ಲಿ ಕಾಲಾಂತರದಲ್ಲಿ ಮುಟ್ಟುವುದೂ ಒಂದೇ ಆತ್ಮತತ್ತ್ವ. ವಿಚಾರ, ಭಾವನೆ, ಧ್ಯಾನಯೋಗ— ಈ ಮೂರು ಮಾರ್ಗಗಳಿಂದಲೂ ಒಬ್ಬನೇ ಪರಮಾತ್ಮನನ್ನೇ ಸಾಧಕರು ಮುಟ್ಟುವರು.

ಸಾಂಖ್ಯ, ಯೋಗ, ಕರ್ಮಯೋಗ— ಮುಂತಾದ ಸಾಧನಗಳ ವಿಷಯಕ್ಕೆ ದೊಡ್ಡದೊಡ್ಡ ಮಾತುಗಳನ್ನು ಆಡುವದು ಜನರಿಗೆ ರೂಢಿಯಲ್ಲಿದ್ದುಬಿಟ್ಟಿದೆ. ಆಸ್ಪತ್ರೆಗೆ ಹೋಗಿ 'ಆ ದೊಡ್ಡಸೀಸೆಯಲ್ಲಿರುವ ಔಷಧಿಯನ್ನು ನನಗೆ ಕೊಡಿಸಿ' ಎಂದು ಕೇಳುವ ಅವಿವೇಕಿಗಳಂತೆ ಯಾವದಾದರೊಂದು ದೊಡ್ಡಸಾಧನವನ್ನು ಕುರಿತ ಪ್ರಶ್ನೆಯನ್ನು ಕೇಳುತ್ತಿರುವ ಹವ್ಯಾಸದವರೇ ಈಗ ಹೆಚ್ಚು. ಇದಕ್ಕೆ ಬದಲಾಗಿ ತಮ್ಮ ಅನುಭವವನ್ನು ಈಗಿನ ಮನಸ್ಸ್ಥಿತಿಯನ್ನೂ ತಿಳಿಯಿಸಿದರೆ ಬಲ್ಲವರಾದವರು ಅವರ ಅಧಿಕಾರದ ಮಟ್ಟಕ್ಕೆ ತಕ್ಕ ಸಾಧನವನ್ನು ಹೇಳಿಯಾರು.

ಅನ್ಯೇ ತ್ವೇವಮಜಾನನ್ತಃ ಶ್ರುತ್ವಾऽನೇಭ್ಯ ಉಪಾಸತೇ ।
ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ॥ ಗೀ. ೧೩-೨೫

ಎಂದಿರುವಂತೆ ಅವರು ಉಪದೇಶದ ಬಲದಿಂದ ತಮ್ಮ ಅಧಿಕಾರಕ್ಕೆ ತಕ್ಕ ಸಾಧನ ವನ್ನು ಅನುಸರಿಸಿ ಭಗವಂತನ ಉಪಾಸನೆಯಿಂದ ಪರಮಪುರುಷಾರ್ಥವನ್ನು ಹೊಂದುವದಕ್ಕೆ ಅವಕಾಶವಿದ್ದೇಇರುತ್ತದೆ. ನಾನು ಮಿಕ್ಕ ಶಾಸ್ತ್ರಗಳನ್ನು ಬಿಟ್ಟು ಗೀತಾಶಾಸ್ತ್ರವೊಂದನ್ನೇ ಮುಖ್ಯವಾಗಿ ಉದಾಹರಿಸುತ್ತಿರುವದಕ್ಕೆ ಕಾರಣ ವೇನೆಂದರೆ ಸದ್ಯಕ್ಕೆ ವೇದಾಧ್ಯಯನವೂ ವೇದಾರ್ಥವಿಚಾರದ ಪದ್ಧತಿಯೂ ಬಲು ಮಟ್ಟಿಗೆ ಲುಪ್ತವಾಗಿಬಿಟ್ಟಿರುತ್ತದೆ. ಆದರೆ ಗೀತೆಯನ್ನು ಪಾರಾಯಣಮಾಡುತ್ತಿರು ವವರು ಇನ್ನೂ ಅಲ್ಲಲ್ಲಿ ಸಿಕ್ಕುತ್ತಿದಾರೆ. ನಮ್ಮ ಕಾಲಕ್ಕೇ ಉಪನ್ಯಾಸಪದ್ಧತಿಯು ಹೆಚ್ಚಾಗಿ ಹಬ್ಬಿರುತ್ತದೆ. ಹಿಂದಕ್ಕೆ 'ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ' (ಗೀ. ೪-೩೪) ಎಂಬಂತೆ ಗುರುಗಳ ಶುಶ್ರೂಷೆಯನ್ನು ಮಾಡಿ ಅವರ ಉಪದೇಶದಿಂದಲೇ ಸಾಧನವನ್ನು ಅರಿತುಕೊಂಡು ಅನುಷ್ಠಾನಾದಿಗಳನ್ನು ಮಾಡುತ್ತಿದ್ದರು. 'ವಾಗ್ವೈಖರಿ, ಶಬ್ದಝರಿ, ಶಾಸ್ತ್ರವ್ಯಾಖ್ಯಾನಕೌಶಲ' ಇಂಥವು ಗಳೆಲ್ಲ ಭುಕ್ತಿಗೇ ಹೊರತು ಮುಕ್ತಿಗಲ್ಲ'– ಎಂದು "ವಿವೇಕಚೂಡಾಮಣಿ" ಯಲ್ಲಿ ಹೇಳಿರುವಂತೆ ಉಪನ್ಯಾಸಗಳಲ್ಲಿರುವ ದೃಷ್ಟಾಂತಾದಿಗಳನ್ನು ಮನನಮಾಡಿ ಮಾತಾಡುವದಕ್ಕೆ ಕಲಿತ ಮಾತ್ರದಿಂದ ನಮಗೆ ಎಂದಿಗೂ ಪುರುಷಾರ್ಥವು ದಕ್ಕ ಲಾರದು. ಬಲ್ಲವರ ಉಪದೇಶದಿಂದ ಮಾತ್ರವೇ ನಮ್ಮ ಅಜ್ಞಾನವು ತೊಲಗೀತು. ಹುಸಿಮದ್ದಿನ ಬಂದೂಕ ಹಾರಿಸಿದರೆ ಶಬ್ದದಲ್ಲಿ ಪರ್ಯವಸಾನವಾದೀತು ; ಗುಂಡಿ ಲ್ಲದೆಇದ್ದರೆ ಗುರಿಯನ್ನು ಹೊಡೆಯುವದಕ್ಕೆ ಎಂದಿಗೆ ಬಂದೀತು ?

ಈವರೆಗೆ ನಾನು ಸಾಧನಗಳ ವಿಷಯದಲ್ಲಿ ಹೇಳಿರುವ ಕೆಲವು ಮಾತುಗಳಿಂದ ಇಲ್ಲಿ ಕೆಲವರಮೇಲಾದರೂ ಅಲ್ಪಸ್ವಲ್ಪ ಪರಿಣಾಮವಾಗಿದ್ದರೆ ನಾನು ಧನ್ಯ.

## ೫೫. ಶ್ರದ್ಧಾಭಕ್ತ್ಯಾದಿಗಳ ಮಹಿಮೆ
(28—੧—69)

ಭಗವಂತನ ಅಸ್ತಿತ್ವದಲ್ಲಿ ಶ್ರದ್ಧೆಯುಳ್ಳವರು ಎಲ್ಲಾ ದೇಶಗಳಲ್ಲಿಯೂ ಇರುತ್ತಾರೆ ; ಭಗವಂತನೊಬ್ಬನು ಇದಾನೆಂಬುದನ್ನು ನಂಬದೆ ಇರುವವರೂ ಇದ್ದಾರೆ. ನಂಬದ ನಾಸ್ತಿಕರಿಗೆ ಯಾವ ಕಾರಣದಿಂದ ನಂಬಿಕೆಯುಂಟಾಗಿಲ್ಲ?– ಎಂಬುದನ್ನು ಅವರವರ ಜೀವನಚರಿತ್ರೆಯಿಂದ ತಿಳಿದುಕೊಳ್ಳಬೇಕಾಗುವದು.

ಈಶ್ವರನ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದ ರಷಿಯದೇಶದ ಕಮ್ಯೂನಿಸ್ಟರು ಅಲ್ಲಿಯ ಕ್ರೈಸ್ತ ಚರ್ಚಿನವರ ಉಪಟಳವನ್ನು ತಡೆಯದೆ 'ಇದೆಲ್ಲ ಪಾದ್ರಿಗಳು ಹುಟ್ಟು ಹಾಕಿದ ಕಥೆ' ಎಂದು ತಮ್ಮ ದೇಶದಲ್ಲಿ ಕ್ರೈಸ್ತರ ಚರ್ಚುಗಳೇ ಇಲ್ಲದಂತೆ ಮಾಡಿದರು. ಆದರೆ ಅವರಿಗೊಂದು ಸಂಕಟವೊದಗಿದಾಗ ಅವರುಗಳೂ ಚರ್ಚಿಗೆ ಹೋಗಿ ಪ್ರಾರ್ಥನೆಮಾಡಿದರಂತೆ ! ಹಿಂದೆ ಭಾರಿಯ ಭೂಮಂಡಲದ ಯುದ್ಧವು ಪ್ರಾಪ್ತವಾದಾಗ ಯಾರಿಗೆ ಜಯವಾದೀತೊ !- ಎಂಬ ಶಂಕೆಯು ಎಲ್ಲರನ್ನೂ ಅಂಟಿಕೊಂಡಿತು. ಬ್ರಿಟಿಷರು ನಮ್ಮ ದೇಶದಲ್ಲಿರುವದುಕೂಡ ಸಂಶಯವೆಂದು ತೋರಹತ್ತಿತು. ಸರಕಾರದವರು ಬೇರೆಬೇರೆಯ ಪ್ರಾಂತದಲ್ಲಿ ಆಯಾ ಮತದವರನ್ನು ತಮ್ಮತಮ್ಮ ದೇವರನ್ನು 'ನಮಗೇ ಜಯವಾಗಲಿ !' ಎಂದು ಪ್ರಾರ್ಥಿಸುವಂತೆ ಧರ್ಮಾಚಾರ್ಯರುಗಳನ್ನು ಪ್ರೇರಿಸಿರಿ" ಎಂದು ಜನರನ್ನು ಕೇಳಿಕೊಳ್ಳುವದಕ್ಕೆ ಪ್ರಾರಂಭಿಸಿದ್ದರು. ಆ ಸಮಯದಲ್ಲಿ ನಾನು ಬೆಂಗಳೂರಿನಲ್ಲಿಯೇ ಇದ್ದೆನು. ಒಂದು ಕಮಿಟಿಯವರು ಬಂದು ಇದೇ ಬಸವನಗುಡಿಯಲ್ಲಿದ್ದ ಕೆ. ವಿ. ಕೃಷ್ಣಸ್ವಾಮಿ ಅಯ್ಯರನ್ನು 'ನಿಮ್ಮ ಅನುಯಾಯಿಗಳನ್ನೂ ಭಗವತ್ಪ್ರಾರ್ಥನೆಮಾಡುವಂತೆ ಪ್ರೇರಿಸಿರಿ' ಎಂದು ಕೇಳಿಕೊಂಡಾಗ ಅಯ್ಯರ್ ಅವರು "ನಿಮ್ಮ ಕೋರಿಕೆಯು ಯುಕ್ತ. ಯಾರು ಧರ್ಮಪಕ್ಷಪಾತಿಗಳಾಗಿದ್ದಾರೋ ಅವರಿಗೆ ಜಯವಾಗಲಿ! ಎಂದು ನಾವು ಭಗವಂತನನ್ನು ಪ್ರಾರ್ಥಿಸೋಣ" ಎಂದರು. ಇದು ನ್ಯಾಯವಾದ ತೀರ್ಪು. 'ಸಂಕಟಬಂದಾಗ ವೆಂಕಟರಮಣ' ಎಂಬಂತೆ ನಮಗೇನಾದರೂ ಈಶ್ವರನ ಕಡೆಗೆ ಬುದ್ಧಿಬಂದಾಗ ದೇವರನ್ನು ಪ್ರಾರ್ಥಿಸಿದರೆ ನಾವು ಮಾಡಿರುವ ಅಧರ್ಮವು ಅಷ್ಟರಿಂದ ಪರಿಹಾರವಾದೀತೆ? ಪ್ರಾರ್ಥನೆಮಾಡುವಾಗಲಾದರೂ ನಮಗೆ ಪಶ್ಚಾತ್ತಾಪವು ಬಂದಿರಬೇಕು.

ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ಗೀ. ೯-೩೦, ೩೧

"ಎಂಥ ದುರಾಚಾರಿಯಾಗಿದ್ದರೂ ನನ್ನನ್ನು 'ನೀನೇ ಗತಿ !' ಎಂದು ಭಜಿಸಿದರೆ ಅವನೂ ಸಾಧುಮಾರ್ಗದವನೆಂದೇ ತಿಳಿಯಬೇಕು ; ಏಕೆಂದರೆ ಕೊನೆಗಾದರೂ ಅವನು ಸರಿಯಾದ ನಿಶ್ಚಯವನ್ನು ಮಾಡಿಕೊಂಡಿರುತ್ತಾನೆ. ಅಷ್ಟುಮಾತ್ರದಿಂದಲೇ ಅವನು ಮುಂದಕ್ಕೆ ಧರ್ಮಾತ್ಮನಾಗಿ ಕ್ರಮಕ್ರಮವಾಗಿ ಪರಮಗತಿಯನ್ನು ಹೊಂದುವನು"- ಎಂದು ಭಗವಂತನೇ ಹೇಳಿರುತ್ತಾನೆ.

ಹೀಗಿರುವದರಿಂದ ನಾಸ್ತಿಕರುಕೂಡ ಒಂದೇ ಕ್ಷಣದಲ್ಲಿ ಆಸ್ತಿಕರಾಗುವದಕ್ಕೆ ಅವಕಾಶವಿದೆ. ಒಬ್ಬ ಗಣಿತಶಾಸ್ತ್ರವಿಶಾರದನು ಸೀಮೆಗೆ ಹೋಗಿ ದೊಡ್ಡ ಪ್ರಶಸ್ತಿಯನ್ನು ಪಡೆದು ನಮ್ಮ ದೇಶಕ್ಕೆ ಮರಳಿಬಂದಿದ್ದನು. ಆತನಿಗೆ ವಿದ್ಯಾಮದವು

ಎತ್ತಿಟ್ಟೆಂದರೆ 'If there be a God at all, let that Mr. God come and stand before me' ದೇವರೊಬ್ಬನು ಇರುವದು ನಿಜವಾದರೆ, ಆ ದೇವರೆಂಬ ಮಹಾಶಯನು ನನ್ನ ಮುಂದೆ ಬಂದು ನಿಲ್ಲಲಿ !'–ಎಂದು ಕೈಎತ್ತಿ ಕೂಗಿಕೊಂಡನು. ಅದನ್ನು ಕೇಳಿದ ಒಬ್ಬ ಸಾಧುಗಳು 'ಅವನು ಎತ್ತಿದ ಕೈಯನ್ನು ಮೇಲಕ್ಕೇಳುವಂತೆ ಮಾಡಿದ ದೇವರು ತನ್ನಲ್ಲಿಯೇ ಇದಾನೆಂಬುದನ್ನು ಪಾಪ! ಅವನೇನು ಬಲ್ಲನು !" ಎಂದರಂತೆ !

ಕ್ರಿಸ್ತಿಯನ್ನರು, ಮುಸಲ್ಮಾನರು– ಮುಂತಾದ ತಟಸ್ಥೇಶ್ವರವಾದಿಗಳು 'ಪರಲೋಕದಲ್ಲಿ ನಮ್ಮ ತಂದೆಯಾದ ದೇವರಿದಾನೆ !' ಎಂದು ಆಕಾಶದ ಕಡೆ ತಲೆಎತ್ತಿ ಪ್ರಾರ್ಥಿಸುತ್ತಾರೆ. ಏಸುಕ್ರಿಸ್ತನು ಸತ್ತ ಬಳಿಕ ನಲವತ್ತನೆಯದಿನ ಪುನಃ ಅದ್ಭುತಶಕ್ತಿಯಿಂದ ತನ್ನ ಗೋರಿಯಿಂದ ಎದ್ದು ಮೇಲಕ್ಕೇರಿ ಸ್ವರ್ಗಲೋಕಕ್ಕೆ ಹೋದನೆಂಬುದನ್ನು ಸ್ಮರಿಸುವದಕ್ಕಾಗಿ 'ಪವಿತ್ರವಾದ ಗುರುವಾರದ ದಿನ' 'Ascension Day' ಎಂಬ ಊರ್ಧ್ವಗತಿಯ ಹಬ್ಬವನ್ನು ಈಗಲೂ ಕ್ರಿಸ್ತಿಯನ್ನರು ಆಚರಿಸುತ್ತಿದಾರೆ. ಕ್ರಿಸ್ತನಲ್ಲಿ ಶ್ರದ್ಧೆಯಿರುವವರಿಗೆ ನಿತ್ಯಸ್ವರ್ಗ, ಇಲ್ಲದವರಿಗೆ ನಿತ್ಯನರಕ– ಎಂಬುದು ಅವರ ನಂಬಿಕೆ. ಪರಬ್ರಹ್ಮವನ್ನು ಉಪಾಸನೆಮಾಡಿದವರು ಅರ್ಚಿರಾದಿಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಜ್ಞಾನವನ್ನು ಪಡೆದು ಬ್ರಹ್ಮಸಾಯುಜ್ಯವನ್ನೇ ಪಡೆಯುತ್ತಾರೆಂದೂ, ಉಳಿದವರು ಅಲ್ಲಿಂದಲೂ ಸಂಸಾರಕ್ಕೆ ಹಿಂತಿರುಗಿ ಅವರವರ ಕರ್ಮಾನುಸಾರವಾದ ಜನ್ಮವನ್ನು ಪಡೆಯುತ್ತಾರೆಂದೂ ಜೀವರ ಗತಿಯನ್ನು ವಿಂಗಡಿಸುವ ರೀತಿಯು ಉಪನಿಷತ್ತಿನಲ್ಲಿಯೂ ಕಾಣಬರುತ್ತದೆ. ಆದರೆ ಪರಮಾತ್ಮನು ಎಲ್ಲರಿಗೂ ಆತ್ಮನಾಗಿರುವ ಅಂತರ್ಯಾಮಿಯೂ ಆಗಿರುತ್ತಾನೆಂಬ ಭಾವವು ನಮ್ಮ ದೇಶದಲ್ಲಿರುವ ವೇದಾಂತಿಗಳಿಗೇ ವಿಶೇಷವಾಗಿರುತ್ತದೆ.

ವೇದಾಂತಿಗಳಲ್ಲಿಯೂ ಶ್ರೀಮಧ್ವಾಚಾರ್ಯರು ಪರಮೇಶ್ವರನು ಸರ್ವರಿಗೂ ಅಂತರ್ಯಾಮಿಯಾಗಿರುತ್ತಾನೆಂಬುದನ್ನು ಒಪ್ಪಿರುವದಲ್ಲದೆ, ಈಶ್ವರಜೀವಭೇದ, ಈಶ್ವರಜಡಭೇದ, ಜೀವಜೀವಭೇದ, ಜೀವಜಡಭೇದ, ಜಡಜಡಭೇದ–ಎಂಬ ಐದು ಭೇದಗಳನ್ನು ಉಪದೇಶಿಸಿರುತ್ತಾರೆ. ಶಂಕರಾಚಾರ್ಯರವರೂ ವ್ಯವಹಾರದೃಷ್ಟಿಯಿಂದ ಈ ಭೇದಗಳು ಇರುತ್ತವೆಯೆಂಬುದನ್ನು ಒಪ್ಪಿರುತ್ತಾರೆ. ಶ್ರೀರಾಮಾನುಜಾಚಾರ್ಯರು ಈಶ್ವರ, ಜೀವ, ಜಡ– ಇವುಗಳ ಬೇರೆಬೇರೆಯು ತತ್ತ್ವಗಳೆಂದು ಒಪ್ಪಿದ್ದರೂ ಸೂಕ್ಷ್ಮಚಿದಚಿದ್ವಿಶಿಷ್ಟನಾಗಿರುವ ಈಶ್ವರನು ಕಾರಣವು, ಸ್ಥೂಲಚಿದಚಿದ್ವಿಶಿಷ್ಟನಾದ ಈಶ್ವರನು ಕಾರ್ಯವು–ಎಂದು ಈಶ್ವರನಿಗೂ ಜೀವಜಡಗಳಿಗೂ ಅಪೃಥಗ್ಭಾವವನ್ನು ಹೇಳಿರುತ್ತಾನೆ.

**ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀಲ್ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಙ್ಕ್ತೇ ವಿಶ್ವಭುಗವ್ಯಯಃ॥**

ಮಹಾಭೂತನಾಗಿರುವ ಒಬ್ಬ ವಿಷ್ಣುವೇ ಬೇರೆಬೇರೆಯಾಗಿರುವ ಭೂತಗಳನ್ನೂ ಮೂರುಲೋಕಗಳನ್ನೂ ವ್ಯಾಪಿಸಿಕೊಂಡು ಭೂತಾತ್ಮನಾಗಿ ಎಲ್ಲವನ್ನೂ ಭೋಗಿಸುತ್ತಿರುವನು– ಎಂಬ ಅಭಿಪ್ರಾಯಕ್ಕೆ ಮತತ್ರಯದ ಆಚಾರ್ಯರ ಸಮ್ಮತಿಯೂ ಇದೆ. ಭಗವಂತನು ಉದಾರಹೃದಯನು. ಆತನು ಎಲ್ಲರಿಗೂ ಆತ್ಮನೇ ಆಗಿರುತ್ತಿದ್ದರೂ ಯಾವ ರೂಪದಿಂದ ಯಾವ ದೇವತೆಯನ್ನು ಭಕ್ತನು ಶ್ರದ್ಧೆಯಿಂದ ಪೂಜಿಸುವನೋ ಅವರಂತೆ ಫಲವನ್ನು ಕೊಡುತ್ತೇನೆ– ಎಂದಿರುತ್ತಾನೆ.

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥
ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥
ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।
ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥

ಗೀ. ೭–೨೧, ೨೨, ೨೩

"ಯಾವಯಾವನು ಯಾವಯಾವ ರೂಪವನ್ನು ಶ್ರದ್ಧೆಯಿಂದ ಅರ್ಚಿಸುವುದಕ್ಕೆ ಇಚ್ಛಿಸುವನೋ, ಅವನವನಿಗೆ ಅದಕ್ಕೆ ತಕ್ಕಂತೆ ಆ ರೂಪದಲ್ಲಿಯೇ ಶ್ರದ್ಧೆಯನ್ನು ಕೊಡುವೆನು. ಅವನು ಆ ಶ್ರದ್ಧೆಯಿಂದೊಡಗೂಡಿ ಆ ದೇವತೆಯ ಆರಾಧನೆಯನ್ನೇ ಮಾಡುವುದರಲ್ಲಿ ತೊಡಗುತ್ತಾನೆ; ಆದರಿಂದ ನಾನೇ ಕೊಡುವ ಇಷ್ಟಾರ್ಥಗಳನ್ನು ಪಡೆದಿರುತ್ತಾನೆ. ಆದರೆ ಆ ಫಲವು ಅಂತವುಳ್ಳದ್ದು; ಅಲ್ಪಜ್ಞರಿಗೆ ಮಾತ್ರವೇ ಹಾಗೆ ಶ್ರದ್ಧೆಯುಂಟಾಗುತ್ತಿರುವದು. ದೇವತೆಗಳ ಪೂಜಕರು ದೇವತೆಗಳನ್ನು ಸೇರುವಂತೆ, ನನ್ನ ಭಕ್ತರು ನನ್ನನ್ನೇ ಸೇರುತ್ತಾರೆ" ಎಂಬುದು ಭಗವಂತನ ವಾಗ್ದಾನ.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥

ಗೀ. ೯–೨೨

ಎಂದಂತೆ ಯಾರು ಭಗವಂತನನ್ನು ತಮ್ಮ ಆತ್ಮನೇ ಎಂದು ಅನನ್ಯಭಾವದಿಂದ ಭಜಿಸುವರೋ ಅವರ ಎಲ್ಲಾ ಯೋಗಕ್ಷೇಮಗಳನ್ನೂ ಆತನೇ ನೋಡಿಕೊಂಡು ಅನಂತಫಲವನ್ನೇ ಕೊಡುತ್ತಾನೆ. ಪ್ರಹ್ಲಾದನು ಇದಕ್ಕೆ ಉದಾಹರಣೆ. ಅವನನ್ನು ನಾಗಪಾಶದಿಂದ ಬಿಗಿದು ಸಮುದ್ರದಲ್ಲಿ ಹಾಕಿಬಿಡುವಂತೆ ಅವನ ತಂದೆಯು ಅಪ್ಪಣೆ ಮಾಡಿಬಿಟ್ಟಿದ್ದನು. ಆಗಲೂ ಆ ಬಾಲಕನು ಆಹ್ನಿಕವೇಳೆಯಲ್ಲಿ ಭಗವಂತನಾದ ಶ್ರೀಮಹಾವಿಷ್ಣುವನ್ನೇ ಧ್ಯಾನಿಸುತ್ತಾ ತನ್ಮಯನಾಗಿ :

ಸರ್ವಗತ್ವಾದನನ್ತಸ್ಯ ಸ ಏವಾಹಮವಸ್ಥಿತಃ ।
ಮತ್ತಃ ಸರ್ವಮಹಂ ಸರ್ವಂ ಮಯಿ ಸರ್ವಂ ಸನಾತನೇ ॥
ಅಹಮೇವಾಕ್ಷಯೋ ನಿತ್ಯಃ ಪರಮಾತ್ಮಾತ್ಮಸಂಶ್ರಯಃ ।
ಬ್ರಹ್ಮಸಂಜ್ಞೋಽಹಮೇವಾಗ್ರೇ ತಥಾನ್ತೇ ಚ ಮಹಾಪುಮಾನ್ ॥
ವಿ. ಪು. ೧-೧೯-೮೫, ೮೬

"ಆ ಅನಂತನು ಸರ್ವವ್ಯಾಪಿಯಾಗಿರುವದರಿಂದ ಅವನೇ ನಾನಾಗಿರುತ್ತೇನೆ. ನನ್ನಿಂದಲೇ ಎಲ್ಲವೂ, ನಾನೇ ಎಲ್ಲವೂ, ಸನಾತನನಾದ ನನ್ನಲ್ಲಿಯೇ ಎಲ್ಲವೂ ಇದೆ; ನಾನೇ ಅಕ್ಷಯನು, ನಿತ್ಯನು, ಆತ್ಮನಿಗೆ ಆಶ್ರಯನಾಗಿರುವ ಪರಮಾತ್ಮನು; ಎಲ್ಲಕ್ಕೂ ಮೊದಲು ಬ್ರಹ್ಮವೆಂಬ ಹೆಸರಿನ ನಾನೇ ಇದ್ದೆನು, ಕೊನೆಗೂ ಇರುವ ಪರಮಪುರುಷನು ನಾನೇ"(ವಿ.ಪು) ಎಂಬ ಭಾವದಿಂದ ಆವಿಷ್ಟನಾಗಿಬಿಟ್ಟನು ! 'ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ' (ಶ್ರದ್ಧೆ, ಭಕ್ತಿ, ಧ್ಯಾನಯೋಗಗಳಿಂದ ಅರಿತುಕೊ') ಎಂಬ ಶ್ರುತಿವಚನವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು ; ನಮ್ಮ ಅಲ್ಪತ್ವವನ್ನು ಭಗವಂತನಲ್ಲಿ ಆರೋಪಿಸಬಾರದು. ಪರಮಾತ್ಮನ ಸ್ವರೂಪವನ್ನು ಮಾತ್ರ ಮನಸ್ಸಿನಲ್ಲಿ ಎಡೆಬಿಡದೆ ತಂದುಕೊಳ್ಳಬೇಕು. 'ನಾವು ದ್ವೈತಿಗಳು, ವಿಶಿಷ್ಟಾದ್ವೈತಿಗಳು, ಅದ್ವೈತಿಗಳು-ಎಂಬ ಭೇದಕ್ಕಿಂತ 'ನಾವು ವೇದಾಂತಿಗಳು' ಎಂದುಕೊಳ್ಳುವವೇ ಯೋಗ್ಯ. 'ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ' (ಮುಂ. ೩-೨-೯) ಪರಮಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗಿಬಿಡುತ್ತಾನೆ. 'ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥' ಶಾಸ್ತ್ರಗಳನ್ನು ಕಡೆದು ಮತ್ತೆಮತ್ತೆ ವಿಚಾರಮಾಡಲಾಗಿ ಇದೊಂದೇ ಏರ್ಪಡುತ್ತದೆ ; ಯಾವಾಗಲೂ ನಾರಾಯಣನನ್ನೇ ಧ್ಯಾನಿಸುತ್ತಿರಬೇಕು.

ಭಗವಂತನು ನಮ್ಮಗಳ ಆತ್ಮನೇ ಆಗಿರುತ್ತಿದ್ದರೂ ಅವನನ್ನು ಬಿಟ್ಟು ಅನಾತ್ಮವಿಷಯಗಳ ಚಿಂತನೆಯಲ್ಲಿ ಮುಳುಗಿರುವದು ನಮ್ಮ ದುರದೃಷ್ಟವೇ ಸರಿ. ಸರ್ವರಲ್ಲಿಯೂ ಸಮನಾಗಿರುವ, ಪಕ್ಷಪಾತರಹಿತನಾದ ಭಗವಂತನ ಅನುಗ್ರಹವು ನಮ್ಮಮೇಲೆ ಯಾವಾಗಲೂ ಇದ್ದೇಇರುತ್ತದೆ. ನಾವು ಮಾತ್ರ ಆತನನ್ನು "ದೇವ, ನಿನ್ನನ್ನೇ ಯಾವಾಗಲೂ ಚಿಂತಿಸುತ್ತಿರುವಂತೆ ಅನುಗ್ರಹಿಸು'' ಎಂದು ಪ್ರಾರ್ಥಿಸೋಣ !

॥ ಓಂ ತತ್ಸತ್ ॥